# ಕಸ್ತೂರಿ

ಕನ್ನಡ ಡೈಜೆಸ್ಟ್



ಸಂಪಾದಕ :

ಬಿ. ಎಸ್. ಗೋಪಾಲಕೃಷ್ಣ

ಸಹಾಯಕ ಸಂಪಾದಕ :

ಮಾಧವ ನಾ. ಮಹಿಷಿ

ಕಲೆ :

ಕೆ. ಬಿ. ಕುಲಕರ್ಣಿ

ಮುಖಪುಟ :

"ಶುಭವಾಗತ್ತೈತಿ..."

ಚಿತ್ರ :

ಡಿ. ಕೆ. ಶಹಾ

ಜನೆವರಿ ೧೯೮೨ ರಿಂದ ಜಾರಿಯಲ್ಲಿ ಬಂದಿರುವ ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KASTURI December 1982


## ಬೆಳಕಿಂಡಿ

ಕಾಫಿ ಹೌಸಿನಲಿ ಕೈನಿಲಾಯಿಸಿ
ಕೂಗಿದರಿಬ್ಬರು ಮಹಿಳಾ ಮಣಿಗಳು:
"ನೀವು ಬಲು ಸಂಪನ್ನರೆಂದುಕೊಂಡಿದ್ದೆ ಬಿಡಿ..."
"ನೀವೂ ಹಾಗೇ ಎಂದುಕೊಂಡಿದ್ದೆ ಬಿಡಿ."
ಅದೇ ಮಾತು—
ಅದೇ ವಾದ. ಕೊನೆಗೊಬ್ಬಾಕೆ ಸೋತು ನುಡಿದಳು :
"ನೀವುತಿಳಿದುಕೊಂಡದ್ದೇಸರಿ... ಕ್ಷಮಿಸಿ, ನಾನೇ ತಪ್ಪು ತಿಳಿದುಕೊಂಡಿದ್ದೆ...."

—ರೋಶನ್

*

ನಾನು ಎಂದಿಗೂ ಯಾವ ಪುರುಷನನ್ನೂ ಆತ ನೀಡಿದ ಉಂಗುರವನ್ನು ಮರಳಿಸುವಷ್ಟರ ಮಟ್ಟಿಗೆ ದ್ವೇಷಿಸಿಲ್ಲ.

*

ಕೆಲವೇ ಜನ ನಮ್ಮನ್ನು (ಹೆಂಗಸರನ್ನು) ಅರಿತುಕೊಂಡಿದ್ದಾರೆ; ಅರಿತು-ಕೊಂಡವರು ನಮ್ಮೆಲ್ಲ ಮಾತುಗಳನ್ನೂ ಬಾಯಿ ಮುಚ್ಚಿಕೊಂಡು ಕೇಳುವುದನ್ನೂ ಅರಿತುಕೊಂಡಿದ್ದಾರೆ.

– 'ಸಂಡೇ ಈವ್ನಿಂಗ್' ಪೋಸ್ಟ್' ನಿಂದ

✡

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕ-ದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ

# ಸಹಚಿಂತನ

## ಸಾಲಿಗ್ರಾಮ

ಸಾಲಿಗ್ರಾಮಗಳ ಮಾಹಾತ್ಮ್ಯಸೂಚಕ ಲೇಖನ 'ವಿಶ್ವಾಸಾರ್ಹ ಮಾಹಿತಿ'ಗಾಗಿ ಅಲ್ಲದೆ ಇದ್ದರೂ, ನಮ್ಮ ಪೂರ್ವ ಪರಂಪರೆಗಳಲ್ಲಿ ಅಡಕವಾಗಿರುವ 'ಭಾವಿಕ ಗ್ರಹಿಕೆ'ಗಳ ಸಂಗ್ರಹವು ಅವಶ್ಯವಿದೆ. ಈ ನಂಬುಗೆಗಳ ತಥ್ಯ, ಮಿಥ್ಯ ಎಷ್ಟು ಎಂಬುದನ್ನು ನಾಳಿನ ಸಂಶೋಧಕರು ವಿಮರ್ಶಿಸಿ ಅರಿಯಲು ಅನುಕೂಲವಾಗುತ್ತದೆ. 'ಬಂಗಾರ ಕೊಡುವ ಸಾಲಿಗ್ರಾಮ'ವು ಹತ್ತಿರ ಇರುವ ಶ್ರೀ ಶರ್ಮಾ ತಮ್ಮ ಸಂಸ್ಥೆ ಸ್ಥಾಪಿಸಲು ಧನ ಸಹಾಯಕ್ಕಾಗಿ ಯಾಚಿಸುತ್ತಿದ್ದಾರೆ ಎಂಬ ಅಂಶವೂ ಈ ಲೇಖನದ ಸಂಗಡವೇ ಪ್ರಕಟವಾಗಿದೆ!

ಮುಂಬಯಿ —ಶಂ. ಬಾ. ಜೋಶಿ

'ಪುಸ್ತಕ ವಿಭಾಗ'ದಲ್ಲಿ ಅರುಣ ತಾಮ್ಹಣಕರರ 'ಬಂಗಾರ ಕೊಡುವ ಸಾಲಿಗ್ರಾಮ' ಒಂದು ಉತ್ತಮ ಪುಸ್ತಕ. ಮೂಲ ಮರಾಠಿಯಿಂದ ಯಶಸ್ವಿಯಾಗಿ ಕನ್ನಡಕ್ಕೆ ಅನುವಾದಿಸಿರುವ ಡಾ. ಎಸ್. ಎಸ್. ಬ್ಯಾತನಾಳರ ಪ್ರಯತ್ನ ಪ್ರಶಂಸನೀಯ.

ಪ್ರಹ್ಲಾದ ಮುದಗಲ್ಲರ 'ಮರಾಠಿಯಲ್ಲಿ ಕುಮಾರ ವ್ಯಾಸ' ಓದಿ ಸಂತೋಷವೂ ಆಶ್ಚರ್ಯವೂ ಆಯಿತು.

ಚಾಮರಾಜನಗರ —ಎಸ್. ಲಕ್ಷ್ಮೀನರಸಿಂಹ

ಸಾಲಿಗ್ರಾಮಗಳಿಂದ ಉತ್ಪಾದಿತವಾಗುವ ವಸ್ತುಗಳ ಬಗ್ಗೆ ಕೆಲ ಕಾಲದ ಹಿಂದೆಯೇ ಜಿಜ್ಞಾಸೆ ನಡೆದಿದೆ. ಪುಸ್ತಕ ವಿಭಾಗದಲ್ಲಿ ಪ್ರಕಟವಾದ ಪ್ರೊ. ಶರ್ಮಾರವರ ಅದ್ಭುತ ಅಸಾಮಾನ್ಯ ಪ್ರಯೋಗಗಳನ್ನು ವಿಶಿಷ್ಟ ಅನುಭವವನ್ನಾಗಿ ರೂಪಿಸಿಕೊಂಡ ಶ್ರೀ ಅರುಣ ತಾಮ್ಹಣಕರ್ ನಿಜವಾಗಿಯೂ ಧನ್ಯರು. ಹೀಗೂ ಉಂಟೇ? ಎಲ್ಲೋ ಕೇಳಿದ ಸಂಗತಿ ಈಗ ಎದುರಿಗೇ ಓದಲು ದೊರೆತಾಗ ಉಂಟಾದ ಕುತೂಹಲ ಕೊನೆಕೊನೆಗೆ ದಿಗ್ಭ್ರಮೆ ಹಿಡಿಸಿತು. ಕಾಲ, ದೇಶ ಮತ್ತು ಸತ್ಯ ಘಟನೆ ಜರುಗಿದಂಥ ಪರಿಸರ, ... ರಿಂದ ನಂಬದೆ ಇರಲು ಸಾಧ್ಯವಾಗಲಿಲ್ಲ. ಆಮೂಲಾಗ್ರವಾಗಿ ಮೂಡಿಬಂದ ಈ ಪರಿಚಯ ಲೇಖನ ನಾಸ್ತಿಕವಾದಿಗಳಿಗೆ ಉತ್ತರವಾದೀತೇ? ದಕ್ಷಿಣ ಕನ್ನಡ ಜಿಲ್ಲೆಯ ಕುಂಭಕಾಶಿಯಲ್ಲಿ ಒಂದು ಅಪೂರ್ವ ಸಾಲಿಗ್ರಾಮವಿದೆ. ಆದರೆ ಅದು ವಸ್ತುಗಳನ್ನು ಉತ್ಪಾದಿಸುವುದಿಲ್ಲ. ಪಾರದರ್ಶಕದಂತೆ ಕಾಣುವ ಅದನ್ನು ಹಿಡಿದು ಏಕಾಗ್ರಚಿತ್ತದಿಂದ ನೋಡಿದರೆ ಅದರೊಳಗೆ ನೋಡಿದವರ ಇಷ್ಟ ದೈವ ಕಾಣುತ್ತದೆ. ಆದರೆ ಅದಕ್ಕೆ ಸಾಧಕರಿಲ್ಲ.

ಓ ಹೆನ್ರಿಯ '೨೦ ವರ್ಷಗಳ ನಂತರ' ಕಥೆಯನ್ನು ಈಗ್ಗೆ ಕೆಲ ವರ್ಷಗಳ ಹಿಂದೆ ಶ್ರೀ ಕೆ. ಎನ್. ತಂತ್ರಿಯವರು ಅನುವಾದಿಸಿದ "ಹಸಿರು ಬಾಗಿಲು" ಕಥಾ ಸಂಕಲನದಲ್ಲಿ ಓದಿದ್ದೇನೆ. ಈಗ 'ಕಸ್ತೂರಿ'ಯಲ್ಲಿ ಬಂದ ಕಥೆಯಲ್ಲಿ ಕೆಲವು ವಾಕ್ಯ ಮತ್ತು ಸ್ಥಳಗಳ ಬದಲಾವಣೆಯಾಗಿದೆ ಅಷ್ಟೇ. ಆದ್ದರಿಂದ ಅದು ಆಧಾರ ಹೇಗೆ ಆದೀತು?

ಹಾರೋಕೊಪ್ಪ —ಎಚ್. ಎಸ್. ಶ್ರೀಪಾದಭಟ

ಪುಸ್ತಕ ವಿಭಾಗದಲ್ಲಿರುವ 'ಬಂಗಾರ ಕೊಡುವ ಸಾಗ್ರಾಮ' ಒಂದು ಉತ್ಕೃಷ್ಟ ಪ್ರಬಂಧ. ಸಾಲಿಗ್ರಾಮಗಳ ಬಗ್ಗೆ ಅತ್ಯಂತ ಸಮರ್ಥನೀಯ ಹಾಗೂ ಆಳವಾದ ವಿವೇಚನಾಶೀಲ ಬರಹ. ಓದುತ್ತಾ ಹೋದಂತೆ ನಮ್ಮನ್ನೇ ನಾವು ಮರೆತು ಸ್ವತಃ ಸಾಲಿಗ್ರಾಮಗಳನ್ನು ನೋಡಿ, ಮುಟ್ಟಿ, ತಿಳಿದುಕೊಂಡ ಅನುಭವ ಉಂಟಾಗುತ್ತದೆ.

ಅಗ್ನಿಶಾಲಿ, ಜಲಶಾಲಿ ಹಾಗೂ ಹಿಮಶಾಲಿ ಈ ರೀತಿ ಮೂರು ಬಗೆಯ ಸಾಲಿಗ್ರಾಮಗಳ ಬಗ್ಗೆ ಓದುವಾಗ ೬೦ ಅಡಿ ಕೆಳಗೆ ಜಿಗಿದು, ಅಗ್ನಿಶಾಲಿ ಸಾಲಿಗ್ರಾಮದ ಪೊದರುಗಳ ಕಡೆಗೆ ಹೋದಂತೆ, ನೀರಿನ ತಳಕ್ಕೆ ಹೋಗಿ ಪ್ರತ್ಯಕ್ಷವಾಗಿ ಸಾಲಿಗ್ರಾಮಗಳನ್ನು ನೋಡಿ ಅನುಭವಿಸಿದಂತೆ ಭಾಸವಾಗದೆ ಇರದು.

ಪ್ರೊ. ರಾಧೇಶ್ಯಾಮ ಶರ್ಮಾರ ಪ್ರಚಂಡ ಸಾಧನೆಯನ್ನೂ ಸಾಲಿಗ್ರಾಮಗಳ ಬಗೆಗೆ ವಿಶಿಷ್ಟ ಮಾಹಿತಿಯನ್ನೂ ಒದಗಿಸಿದ ಮೂಲ ಲೇಖಕ ಶ್ರೀ ಅರುಣ ತಾಮ್ಹಣಕರ್ ಅಭಿನಂದನಾ

ಹರ್ಷರು. ಅದೇ ರೀತಿ ಕನ್ನಡ 'ಕಸ್ತೂರಿ'ಯಲ್ಲಿ ಇಂಥ ಸುಪ್ರಸಂಗವನ್ನು ಓದಲು ಒದಗಿಸಿದ ಅನುವಾದಕ ಡಾ. ಬ್ಯಾತನಾಳರಿಗೂ ಇದನ್ನು ಪ್ರಕಟಿಸಿದ ಸಂಪಾದಕರಿಗೂ ನನ್ನ ಅಭಿನಂದನೆಗಳು.
ಗದಗ —ಗಣಪತಿಭಟ್ಟ ಸೊರಟೂರ

ನವೆಂಬರ್ ಕಸ್ತೂರಿಯಲ್ಲಿ ನನ್ನ ಗಮನ ಸೆಳೆದ ಪುಸ್ತಕ ವಿಭಾಗದ ಶ್ರೀ ಅರುಣ ತಾಮ್ಹಣಕರ್ ಅವರ 'ಬಂಗಾರ ಕೊಡುವ ಸಾಲಿಗ್ರಾಮ.' ಓದುತ್ತಾ ರೋಮಾಂಚನಗೊಂಡೆ. ಆದರೆ ಶ್ರೀ ಶರ್ಮಾ ಅವರು ಹೇಳುವ "ನಾಲ್ಕು ವರೆ ಸಾವಿರ ವರ್ಷ ಪ್ರಾಯದ ಬಾಬಾಜಿ ಹೆಸರಿನ ಓರ್ವ ಮಹಾಯೋಗಿಯನ್ನು, ನಾನು ಹಿಮಾಲಯ ತಪ್ಪಲಿನಲ್ಲಿ ಭೆಟ್ಟಿಯಾಗಿರುವೆ" ಎನ್ನುವ ಮಾತು ತೀರಾ ಬುರುಡೆ ಎನಿಸುತ್ತದೆ.
ಬರೋಡಾ —ಎಸ್ಕೆ ಹಳೆಯಂಗಡಿ

## ನಿಸರ್ಗ ಚಿಕಿತ್ಸೆ

'ಕಸ್ತೂರಿ'ಯಲ್ಲಿ 'ನಿಸರ್ಗೋಪಚಾರ ಪರಿಹಾರ ಒದಗಿಸಲೂಬಹುದು' ಎಂಬ ಶ್ರೀ ಪಿ. ಹನುಮಂತಯ್ಯನವರ ಲೇಖನ ತುಂಬ ಉಪಯುಕ್ತವಾಗಿರುತ್ತೆ. ಇಂತಹ ಉಪಯುಕ್ತ ಲೇಖನದಿಂದ ಅನೇಕರಿಗೆ ಅನುಕೂಲವಾಗುವುದರಲ್ಲಿ ಸಂಶಯವಿಲ್ಲ. ಇಂತಹ ನಿಸರ್ಗೋಪ—ಚಾರ ಪರಿಹಾರದ ಬಗ್ಗೆ ಇನ್ನೂ ಹೆಚ್ಚಿನ ವಿಚಾರ ಪ್ರಕಟಮಾಡಿ ಜನರಿಗೆ ಉಪಕಾರ ಮಾಡಬೇಕಾಗಿ ವಿನಂತಿ.
ಮಂಡ್ಯ —ಎಂ. ಎ. ಪದ್ಮರಾಜ

ನವೆಂಬರ್ ಸಂಚಿಕೆಯಲ್ಲಿ ಪಿ. ಹನುಮಂತಯ್ಯನವರು ಬರೆದ 'ಹೆಚ್ಚು ತಿನ್ನಿ, ಬೊಜ್ಜು ಕರಗಿಸಿ' ಒಂದು ಉಪಯುಕ್ತವಾದ ಲೇಖನ. ನಿರಗ್ನಿ ಆಹಾರ ಸೇವಿಸಿದರೆ ಬೊಜ್ಜು ಇರುವುದಿಲ್ಲ ಎಂಬುದು ನಿಶ್ಚಯವಾಗಿಯೂ ಸರಿಯಾದದ್ದೆ. ಸಾಮಾನ್ಯವಾಗಿ ಬೊಜ್ಜು ಕಾಣಿಸಿಕೊಳ್ಳುವುದು ಬೇಯಿಸಿದ ಆಹಾರ ತಿನ್ನುವ ಶ್ರೀಮಂತರು ಮತ್ತು ಪಟ್ಟಣದ ನಿವಾಸಿಗಳಿಗೆ ಹೊರತು ಲಘು ಆಹಾರ ತಿನ್ನುವ ಶ್ರಮಜೀವಿ ಹಳ್ಳಿಗರಿಗೆ ಅಲ್ಲ.
ಹಿರೇಮಾನೆ —ಕೆ. ಎಚ್. ಶಿವಕುಮಾರ

## ಒಳ್ಳೆಯ ಕತೆಗಳು

ನವೆಂಬರ್ ಸಂಚಿಕೆಯಲ್ಲಿ ಬಂದ 'ಪ್ರೀತಿ ಪ್ರೇಮ ಮದುವೆ ಇತ್ಯಾದಿ...' ಕಥೆ ಇಂದಿನ ಸಮಾಜದಲ್ಲಿ ಬಹಿರಂಗದ ಸೌಂದರ್ಯಕ್ಕೆ ಜೋತು ಬಿದ್ದು ಅಂತರಂಗದ ಸೌಂದರ್ಯವನ್ನು ಅಲಕ್ಷಿಸುವಂಥ ವಿದ್ಯಾವಂತ ಯುವಕರ ಕಣ್ಣು ತೆರೆಸುವ ಹಾಗೆ ಮಾಡಿಬಂದಿದೆ .
ಗುಳಿಗೇನಹಳ್ಳಿ —ಜಿ. ಕೆ. ನಾಗಲಿಂಗಪ್ಪ

ಆಸ್ಕರ್ ವೈಲ್ಡ್‌ರ ಕತೆ 'ಪುಟ್ಟ ಕೋಗಿಲೆ ಮತ್ತು ಕೆಂಪು ಗುಲಾಬಿ' ಅದ್ಭುತವಾಗಿತ್ತು, ಜೊತೆಗೆ ಅಷ್ಟೇ ಕರುಣಾಜನಕವೂ ಆಗಿತ್ತು. ಕೋಗಿಲೆಯ ತ್ಯಾಗ ಪ್ರಾಣಿಲೋಕದ ಶ್ರೇಷ್ಠತೆಯನ್ನು ಎತ್ತಿ ತೋರಿದರೆ, ಕಠೋರತೆಯಿಂದ ಹೂವನ್ನು ಎಸೆಯುವ ಮತ್ತು ಸಾಂಪತ್ತಿಕ ಸುಖಕ್ಕಾಗಿ ನಾಯಕನನ್ನು ತಿರಸ್ಕರಿಸುವ ನಾಯಕಿ ಮಾನವತೆಯ ಅಧಃಪತನವೇ ಆಗಿದ್ದಾಳೆ. ತನ್ನೆದುರು ರಕ್ತ ಬಸಿದು ಗುಲಾಬಿಗೆ ರಕ್ತವರ್ಣ ಕೊಟ್ಟ ಕೋಗಿಲೆಗಾಗಿ ಹೃದಯ ಮಿಡಿಯುತ್ತದೆ. ಜೊತೆಗೆ ಲೇಖಕರ ವರ್ಣನೆ ಅತ್ಯದ್ಭುತವಾಗಿದೆ.
ಧಾರವಾಡ —ನೀತಾ ಎಸ್. ಮಾನ್ವಿ

## ಯಾವುದು ಶಾಲ್ಮಲಾ ?

ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾದ ಸೂರ್ಯನಾರಾಯಣ ಹೆಗಡೆ, ಸಂಬೀಮನೆ ಇವರ 'ಯಾವುದು ಶಾಲ್ಮಲಾ ನದಿ?' ಎಂಬ ಲೇಖನ ಚಿತ್ರಗಳನ್ನೊಳಗೊಂಡು ತುಂಬ ಚೆನ್ನಾಗಿ ಮೂಡಿ ಬಂದಿದೆ. ನಮ್ಮ ಊರಿನ ಸಮೀಪಕ್ಕೆ ಈ ಐತಿಹಾಸಿಕ ಪ್ರಸಿದ್ಧ ನದಿ ಇದ್ದರೂ ನಮಗೆ ಇದರ ಕುರಿತಾಗಿ ಹೆಚ್ಚಿನ ವಿಷಯ ತಿಳಿದಿರಲಿಲ್ಲ.
ಹುಳಗೋಡ —ಮಂಜುನಾಥ ಹೆಗಡೆ



ಕಸ್ತೂರಿ

ವರ್ಷ: ೨೭ ಡಿಸೆಂಬರ್ ೧೯೮೨ ಸಂಚಿಕೆ: ೪

# ಗುರುವಿನ ಗುಲಾಮ

**ಶ್ರೀರಾಮ ವಿಠಲ**

ಯುವಕ್ರೀತನೆಂಬ ಋಷಿಕುಮಾರನಿಗೆ ತಾನು ವಿದ್ವಾಂಸನಾಗಬೇಕೆಂಬ ಬಯಕೆ. ಆದರೆ ಯಾವ ಗುರುಗಳಲ್ಲಿಯೂ ಪಾಠ ಕೇಳಲಾರ. ಪುಸ್ತಕ ಹಿಡಿಯದೇ, ಪಾಠ ಕೇಳದೇ ಕೇವಲ ತಪಸ್ಸು ಮಾಡಿ ವಿದ್ವಾಂಸನಾಗಬೇಕೆಂಬ ಹಟ. ಅದಕ್ಕಾಗಿ ಗಂಗಾತೀರದಲ್ಲಿ ತಪಸ್ಸು. ಇವನ ಉಗ್ರ ತಪಸ್ಸನ್ನು ಕಂಡು ದೇವತೆಗಳಿಗೆ ಕಸಿಕರ. "ಕೇವಲ ತಪಸ್ಸಿನಿಂದ ವಿದ್ಯಾ ಸಂಪಾದನೆ ಆಗುವುದಿಲ್ಲ. ಅದಕ್ಕೆ ಗುರುಗಳಲ್ಲಿಗೆ ಹೋಗಿ ಅಧ್ಯಯನ ಮಾಡಬೇಕು" ಎಂದು ದೇವತೆಗಳಿಂದಲೇ ಹಿತೋಪದೇಶ. ಇಂದ್ರನೇ ಬಂದು ಉಸುರಿದರೂ ಯುವಕ್ರೀತ ಅಚಲ. ಅವನದೇ ಛಲ. ವರವನ್ನು ನೀಡಿ, ಅಧ್ಯಯನವಿಲ್ಲದೆಯೇ ನಾನು ವಿದ್ವಾಂಸನಾಗುವಂತೆ ಅನುಗ್ರಹಿಸದಿದ್ದರೆ ನನ್ನ ಒಂದೊಂದು ಅಂಗವನ್ನೇ ತುಂಡರಿಸಿ ಹೋಮಿಸುತ್ತೇನೆ ಎಂದು ಎಚ್ಚರಿಕೆ ಬೇರೆ ಇಂದ್ರನಿಗೆ ಯುವಕ್ರೀತನಿಂದ.

ಯುವಕ್ರೀತನಿಗೆ ಬುದ್ಧಿ ಹೇಳಲು ವಿಫಲನಾಗಿ, ಅವನ ಬಯಕೆಯನ್ನು ಈಡೇರಿಸದೆಯೇ ಇಂದ್ರನ ನಿರ್ಗಮನ.

ಸ್ವಲ್ಪ ಸಮಯದ ನಂತರ, ಗಂಗಾಪ್ರವಾಹಕ್ಕೆ ನಿರಂತರ ಹಿಡಿ ಉಸುಕನ್ನು ಎಸೆಯುತ್ತಿರುವ ಮುದುಕನೊಬ್ಬನನ್ನು ಗಂಗೆಯ ದಡದಲ್ಲಿ ಕಂಡಿದ್ದಾನೆ ಯುವಕ್ರೀತ.

"ಕೊಚ್ಚಿ ಹೋಗುವ ಪ್ರವಾಹದಲ್ಲಿ ಈ ಉಸುಕಿನ ಎಸೆತ ಏತಕ್ಕಾಗಿ?" ಎಂದು ಕೇಳಿದ್ದಾನೆ ಯವಕ್ರೀತ.

"ಇದು ಜನರಿಗೆ ಸಂಚಾರ ಸುಗಮವಾಗಲಿ ಸೇತುವೆಯ ನಿರ್ಮಾಣಕ್ಕಾಗಿ!" ಮುದುಕನ ಉತ್ತರ ಕೇಳಿ ಯವಕ್ರೀತನಿಗೆ ನಗು ಬಂದಿದೆ.

"ಎಷ್ಟು ವರ್ಷ ಹೀಗೆ ಎಸೆದರೂ ಸೇತುವೆಯ ನಿರ್ಮಾಣ ಅಸಾಧ್ಯ. ಏಕೆ ಈ ವೃಥಾ ಪ್ರಯಾಸ?"

"ಗುರುವಿನ ಉಪಾಸನೇ ಮಾಡದೇ, ಅಧ್ಯಯನ ನಡೆಸದೆ ಒಬ್ಬ ವಿದ್ವಾಂಸನಾಗುವುದಾದರೆ ಈ ಹಿಡಿ ಉಸುಕಿನ ಎಸೆತದಿಂದಲೇ ಸೇತುವೆ ನಿರ್ಮಾಣ ಏಕೆ ಅಸಾಧ್ಯ?"

ತನ್ನ ಪ್ರಶ್ನೆಗೆ ವೃದ್ಧನ ಉತ್ತರ ಕೇಳಿ ಯವಕ್ರೀತನಿಗೆ ಜ್ಞಾನೋದಯ. ತಪಸ್ಸಿನ ದಾರಿ ಬಿಟ್ಟು ಅಧ್ಯಯನ ಮಾರ್ಗಕ್ಕೆ ಇಳಿದಿದ್ದಾನೆ. ಆ ವೃದ್ಧ ಬೇರಾರೂ ಅಲ್ಲ, ದೇವೇಂದ್ರನೆ.

ಸ್ವಲ್ಪವೂ ಓದದೆಯೇ ದೇವರಲ್ಲಿ ಹರಕೆ ಹೊತ್ತು ಪರೀಕ್ಷೆಯಲ್ಲಿ ಉತ್ತೀರ್ಣರಾಗಲು ಬಯಸುವ ನಮ್ಮನ್ನು ಅಣಕ ಮಾಡುತ್ತದೆ ಈ ಯುವಕ್ರೀತನ ಕಥೆ.

ದೇವರ ಪ್ರಾರ್ಥನೆ ಅಗತ್ಯ. ಆದರೆ ನಮ್ಮ ಪ್ರಯತ್ನವೂ ಬೇಕು. ಪ್ರಯತ್ನ ಮಾಡದ ಜನರು ಏಳಿಗೆಯನ್ನು ಹೊಂದರು. ಇದನ್ನೇ ದಾಸರು ಹಾಡುತ್ತಾರೆ— 'ಗುರುವಿನ ಗುಲಾಮನಾಗುವ ತನಕ...' ಎಂದು. ✡

(ಮಹಾಭಾರತದಿಂದ)



ಅಹಿಂಸೆ ಅಶಕ್ತರ ಅಸ್ತ್ರವಲ್ಲ. ಅದರ ಹಿಂದಿರಬೇಕಾದದ್ದು ಬಲವೇ. ಮನುಷ್ಯನು ತನ್ನಲ್ಲಿಯ ಸೇಡಿನ ಭಾವನೆಗೆ ಪ್ರಜ್ಞಾಪೂರ್ವಕವಾಗಿಯೂ ಉದ್ದೇಶಪೂರ್ವಕವಾಗಿಯೂ ಕಡಿವಾಣ ಹಾಕುವುದೇ ಅಹಿಂಸೆ. ಆದರೆ ನಿಷ್ಕ್ರಿಯವಾಗಿ ಹೆಣ್ಣಿನಂತೆ ಶರಣಾಗುವುದಕ್ಕಿಂತ ಸೇಡು ಎಂದೆಂದಿಗೂ ಶ್ರೇಷ್ಠವಾದದ್ದು. ಕ್ಷಮೆ ಅದಕ್ಕಿಂತಲೂ ಹೆಚ್ಚಿನದು. ಸೇಡು ಕೂಡ ಒಂದು ದೌರ್ಬಲ್ಯವೇ. ಸೇಡಿನ ಭಾವನೆಯುಂಟಾಗುವುದಕ್ಕೆ ಕಾರಣ ಅಪಾಯಭಯ–ಅದು ನೈಜವೂ ಇರಬಹುದು, ಕಾಲ್ಪನಿಕವೂ ಇರಬಹುದು. ಜಗತ್ತಿನಲ್ಲೇ ಯಾರಿಗೂ ಹೆದರದಂಥವರು, ತನಗೆ ಅಪಾಯವುಂಟುಮಾಡಲು ವ್ಯರ್ಥ ಪ್ರಯತ್ನ ಮಾಡುತ್ತಿರುವವನ ಬಗ್ಗೆ ಸಿಟ್ಟುಗೇಳುವುದು ಕೂಡ ವೃಥಾ ತೊಂದರೆಯೆಂದೇ ಬಗೆಯುತ್ತಾನೆ.

—ಗಾಂಧೀಜಿ

ಪಾಂಡವರು ಅಸಂಸ್ಕೃತ ಸುಖವನ್ನು ಬಿಟ್ಟು, ನಿತ್ಯವೂ ವೀರಸಹಜವಾದ ಸುಖವನ್ನು ಬಯಸುವವರು; ಬಲಿಷ್ಠರೂ ಬಹಳ ಉತ್ಸಾಹಶಾಲಿಗಳೂ ಆದವರು ಅಲ್ಪದಿಂದ ಎಂದೂ ತೃಪ್ತರಾಗರು. ಕಾಮ, ಅರ್ಥಗಳನ್ನು (ಪುರುಷಾರ್ಥಗಳಲ್ಲಿ ಎರಡನ್ನು) ಬಯಸುವವರು ಮೊದಲು ಧರ್ಮವನ್ನೇ ಆಚರಿಸಬೇಕು; ಅರ್ಥವಾಗಲಿ, ಕಾಮವಾಗಲಿ ಎಂದೂ ಧರ್ಮವನ್ನು ಬಿಟ್ಟಿರದು.

* * *

ಲೋಕವನ್ನು ಮಗನೆಂದು ಮುದ್ದಾಡಿ, ಶಿಷ್ಯನೆಂದು ಪಾಠ ಕಲಿಸಿದ ಶಾಕ್ಯಮುನಿಯು ಈಗಿಲ್ಲ.

—ಸಂಸ್ಕೃತ ಸುಭಾಷಿತಗಳು

# ಸದ್ಬೋಧ ಚಂದ್ರಿಕೆ

## ಅಮೃತ ಮಹೋತ್ಸವವನ್ನಾಚರಿಸುತ್ತಿರುವ ಅಪೂರ್ವ ಪತ್ರಿಕೆ

**ಮೋಹನ ಗ. ಹೆಗಡೆ**

ಧಾರವಾಡ ಜಿಲ್ಲೆಯ ಹಾವೇರಿಯಿಂದ ಏಳು ಮೈಲಿಗಳ ಅಂತರದಲ್ಲಿಯ ಒಂದು ಚಿಕ್ಕ ಗ್ರಾಮ ಅಗಡಿ. ಇಲ್ಲಿಯ 'ಆನಂದವನ' ಆಶ್ರಮ ಶ್ರೀ ಶೇಷಾಚಲ ಸದ್ಗುರುಗಳಿಂದ ಸ್ಥಾಪಿತವಾದುದು. ಸಂಸ್ಕೃತ ವೇದಾಧ್ಯಯನ ಪಾಠಶಾಲೆ ಕೂಡ ಇದರಲ್ಲೇ ನಡೆಯುತ್ತಿದೆ. ೧೯೦೭ರ ಸಮಯ. ಶ್ರೀನಾರಾಯಣ ಭಗವಾನರ ಅನುಮತಿ. ಯಲ್ಲೋ ಗುಡ್ಡೋ ಕುಲಕರ್ಣಿ ಹಾಗೂ ಕನ್ನಡಿಗರಿಗೆ 'ಗಳಗನಾಥ' ಎಂಬ ಹೆಸರಿನಿಂದ ಚಿರಪರಿಚಿತರಾದ ಕನ್ನಡದ ಆದ್ಯ ಸಾಹಿತಿ ವೆಂಕಟೇಶ ತಿ. ಕುಲಕರ್ಣಿ ಇವರ ಪ್ರಯತ್ನದ ಫಲವೇ 'ಸದ್ಬೋಧ ಚಂದ್ರಿಕೆ.' ೧೯೦೮ ಯುಗಾದಿ ಪ್ರತಿಪದೆಯಂದು ಪ್ರಥಮ ಸಂಚಿಕೆ ಹೊರಬಂತು.

ಸಂಸ್ಕೃತ ಪಾಠಶಾಲೆಯ ಖರ್ಚು, ಆನಂದವನ ಆಶ್ರಮದ ಸುದ್ದಿ ಪ್ರಸಾರ, ಕನ್ನಡ ಸಾಹಿತ್ಯ ಪ್ರಸಾರ, ಭಾಷಾ ಜಾಗೃತಿಗಳೇ ಈ ಪತ್ರಿಕೆಯ ಮುಖ್ಯ ಉದ್ದೇಶಗಳು.

ಈ ವೇಳೆಗಾಗಲೇ ಗಳಗನಾಥರು ಗದ್ಯ ಸಾಹಿತ್ಯ ರಚನೆಯನ್ನು ಪ್ರಾರಂಭಿಸಿದ್ದರು. ಕನ್ನಡ ಶಾಲೆಯ ಮಾಸ್ತರರಾಗಿಯೇ ಹಲವಾರು ಕಾದಂಬರಿಗಳನ್ನು ಬರೆದಿದ್ದರು. ಕನ್ನಡ ಸಾಹಿತ್ಯ. ಸಂಸ್ಕೃತಿಯ ಜಾಗೃತಿ ಪ್ರಸಾರಕ್ಕಾಗಿ ರೂಪುಗೊಂಡ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ (ಸ್ಥಾಪನೆ–೧೮೯೦)ವು ಏರ್ಪಡಿಸಿದ ಸ್ವತಂತ್ರ ಸಾಹಿತ್ಯ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನವನ್ನೂ ಪಡೆದಿದ್ದರು.

ಕನ್ನಡಿಗರಲ್ಲಿ ಸಂಸ್ಕೃತಿ, ಭಾಷೆ ಜಾಗೃತಿಗೊಂದು ಪ್ರಸಾರ ಮಾಧ್ಯಮ ಬೇಕಿತ್ತು. ಅಂಥ ಕಾರ್ಯಕ್ಕೆ ಪತ್ರಿಕೆಯಂಥ ಸುಲಭ–ಸರಲ ಮಾಧ್ಯಮ ಇನ್ನೊಂದಿಲ್ಲ. ಆನಂದವನದ ಕೃಪಾಶ್ರಯ–ಕನ್ನಡಿಗರ ಭಾಗ್ಯದ ಬಾಗಿಲು ತೆರೆವ ಕಾಲ ಕೂಡಿ ಬಂದಿತ್ತು. ಗಳಗನಾಥರಿಗೂ ಹೊಸ ಹುಮ್ಮಸು. ಅವರೇ ಹೇಳಿದಂತೆ "ನನ್ನ ಅಕ್ಕರೆಯ 'ಸದ್ಯೋಧ ಚೆಂದ್ರಿಕೆ' ಸದ್ಗುರುನಾಥನ ಕೃಪೆಯಿಂದ ಜ್ಯೇಷ್ಠ ಪುತ್ರಿಯಂತೆ ಆನಂದವನದಲ್ಲಿ ಹುಟ್ಟಿದಳು."

### ಗತಿಸ್ಥಿತಿ

ಹುಬ್ಬಳ್ಳಿಯ ಕೃಷ್ಣಾ ಛಾಪಖಾನೆಯಲ್ಲಿ ಮುದ್ರಿತವಾಗ ತೊಡಗಿ ಪತ್ರಿಕೆಯೇನೋ



ಯ ಗು. ಕುಲಕರ್ಣಿ

ಪ್ರಾರಂಭವಾಯಿತು. ಆದರೆ ಅಗಡಿಯಂತಹ ದೂರದ ಹಳ್ಳಿಯಿಂದ ಒಂದು ಪತ್ರಿಕೆಯನ್ನು ಪ್ರಕಟಿಸಲು ಆ ಕಾಲಕ್ಕಂತೂ ಎದೆಗಾರಿಕೆಯೇ ಬೇಕಿತ್ತು. ಯಾಕೆಂದರೆ ಅಂದಿನ ಮಟ್ಟಿಗೆ ಹೇಳುವುದಾದರೆ ಪತ್ರಿಕಾ ವ್ಯವಸಾಯವೆಂಬುದು ಉತ್ತರ ಕರ್ನಾಟಕದಲ್ಲಿ ಧಾರವಾಡ, ಬೆಳಗಾವಿ ನಗರಗಳಿಗೆ ಮಾತ್ರ ಸೀಮಿತವಾಗಿತ್ತು. ಆದರೆ ಚಂದ್ರಿಕೆಯ ಸಂಸ್ಥಾಪಕರು ಸಾಹಸಿಗಳಾಗಿದ್ದಷ್ಟೇ ಅವರ ಕಲ್ಪಕತೆ ಶ್ರೀಮಂತವಾದುದಾಗಿತ್ತು. ದೃಷ್ಟಿಕೋನ ಹರವಾದುದಾಗಿತ್ತು. ಗುರಿ ಸುಸ್ಪಷ್ಟವಾಗಿತ್ತು. ಮೊದಲ ಆರು ತಿಂಗಳುಗಳಲ್ಲಿ ೮೦೦ ಜನ ಚಂದಾದಾರರಾದರು. ಹತ್ತು ತಿಂಗಳಲ್ಲಿ ಅದು ೨೫೦೦ಕ್ಕೇರಿತು. ೧೯೧೩ರ ಹೊತ್ತಿಗೆ ಈ ಸಂಖ್ಯೆ ೫೦೦೦ಕ್ಕೆ ಏರಿತು. ಮುಂಬಯಿ, ಮದ್ರಾಸ್, ನಿಜಾಮ್ ಕರ್ನಾಟಕ, ಗುಜರಾತಗಳಲ್ಲದೆ ಉತ್ತರ ಭಾರತದ ಬೇರೆ ಬೇರೆ ಕಡೆಗಳಿಂದಲೂ ಓದುಗರ ಸಂಖ್ಯೆ ಬೆಳೆಯತೊಡಗಿತು. ಕಾರ್ಯಕರ್ತರ ಅವಿರತ ಪ್ರಯತ್ನದ ಫಲವಾಗಿ ಕೊನೆಗೊಮ್ಮೆ ಶ್ರೀ ಶೇಷಾಚಲ ಪ್ರಿಂಟಿಂಗ್ ಪ್ರೆಸ್ ತಲೆಯೆತ್ತಿ ಚಂದ್ರಿಕೆಗೆ ದೊಡ್ಡ ಆಸರೆಯಾಯಿತು. ಒಂದು ಹಂತದಲ್ಲಿ ಇದರ ಪ್ರಸಾರ ೮೦೦೦ಕ್ಕೂ ಮುಟ್ಟಿತ್ತು.

೧೯೨೩ರ ಹೊತ್ತಿಗೆ ಧಾರವಾಡದಿಂದ ಬಂದ ಭೀ. ಪ. ಕಾಳೆಯವರ ಈ ಮುದ್ರಣಾಲಯದ ಮೇನೇಜರ್ ಆಗಿ ಬಂದರು. ಅನಂತರ ಚಂದ್ರಿಕೆಗೆ ಪೂರಕವಾಗೆಂಬಂತೆ ಶ್ರೀ ಶೇಷಾಚಲ ಗ್ರಂಥಮಾಲೆ ಕೂಡ ಆರಂಭವಾಯಿತು. ಆ ಕಾಲಕ್ಕೆ ಈ ಗ್ರಂಥಮಾಲೆ ಬೆಳಕಿಗೆ ತಂದಷ್ಟು ಗ್ರಂಥ ರಾಶಿಯನ್ನು ಬಹುಶಃ ಬೇರಾವುದೇ ಪ್ರಕಾಶನ ಸಂಸ್ಥೆ ಕನ್ನಡದಲ್ಲಿ ತರಲಿಲ್ಲ. ಗಳಗನಾಥರ ಕಾದಂಬರಿಗಳನ್ನಲ್ಲದೆ ಇನ್ನೂ ಅನೇಕ ಐತಿಹಾಸಿಕ ಸಾಮಾಜಿಕ ಕಾದಂಬರಿಗಳನ್ನೂ ಭೀ. ಪ. ಕಾಳೆಯವರ ಪತ್ತೇದಾರಿ ಕಾದಂಬರಿಗಳನ್ನೂ ಈ ಮಾಲೆ ಪ್ರಸಿದ್ಧಿಸಿತು. ಅಲ್ಲದೆ ವಿಪುಲ ಸಂಖ್ಯೆಯಲ್ಲಿ ವೈದಿಕ ಮತ್ತು ಆಧ್ಯಾತ್ಮಿಕ ಗ್ರಂಥಗಳು ಇಲ್ಲಿಂದ ಹೊರಬಂದು ಓದುಗರನ್ನು ತಣಿಸಿದುವು.

ಗ್ರಾಮೀಣ ಪ್ರದೇಶದಲ್ಲಿ ಸುಸಜ್ಜಿತ ರೀತಿಯಲ್ಲಿ ಮುದ್ರಣಾಲಯವನ್ನು ನಡೆಸುವುದು ನಿಜಕ್ಕೂ ಒಂದು ಸಾಹಸದ ಕಾಯಕವೇ. ಒಂದು ಹಂತದಲ್ಲಿ ಶೇಷಾಚಲ ಪ್ರೆಸ್ಸಿನಲ್ಲಿಯ ಯಾಂತ್ರಿಕ ತೊಂದರೆಗಳಿಂದಾಗಿ ಚಂದ್ರಿಕೆ ಕೆಲ ಕಾಲ ಗದುಗಿನ ಶಂಕರನಾರಾಯಣೀ ಮುದ್ರಣಾಲಯ, ಹಾವೇರಿಯ ಮನೋಹರ ಮುದ್ರಣಾಲಯ, ಗದಗಿನ ರಸಿಕರಂಜನೀ ಮುದ್ರಣಾಲಯ, ಹುಬ್ಬಳ್ಳಿಯ ಸುಧಾ ಪ್ರೆಸ್ ಮುಂತಾದೆಡೆ ಅಚ್ಚಾಗಿ ಮರಳಿ ಶೇಷಾಚಲ ಪ್ರೆಸ್ಸಿಗೇ ಬಂತು. ಇಷ್ಟೆಲ್ಲ ಪರದಾಟಕ್ಕೆ ಕಾರಣವೆಂದರೆ ಅಂದಿನ ಸಂಪಾದಕರೂ ಪ್ರಕಾಶಕರೂ ಪತ್ರಿಕೆಯ ಪ್ರಕಟಣೆಯನ್ನು ಯಾವುದೇ ಕಾರಣಕ್ಕಾಗಿ ನಿಲ್ಲಿಸಕೂಡದೆಂದು ತೊಟ್ಟ ಛಲ. ಆದರೂ ದ್ವಿತೀಯ ಮಹಾಯುದ್ಧದ ಕಾಲದಲ್ಲಿ ಕೆಲವೊಮ್ಮೆ ಎರಡೆರಡು ತಿಂಗಳ ಸಂಯುಕ್ತ ಸಂಚಿಕೆಗಳನ್ನು ತರಬೇಕಾಯಿತು—ಅನಿವಾರ್ಯ

ವಾಗಿ. ಅಷ್ಟನ್ನುಳಿದರೆ ಇಂದಿಗೂ 'ಸದ್ಬೋಧ ಚಂದ್ರಿಕೆ' ಅವ್ಯಾಹತವಾಗಿ ೭೪ ವರ್ಷಗಳನ್ನು ಮುಗಿಸಿ ೭೫ನೆಯ ವರ್ಷದಲ್ಲಿ ಪ್ರಕಟಗೊಳ್ಳುತ್ತಿರುವ ಏಕಮೇವ ಕನ್ನಡ ಪತ್ರಿಕೆ. ಇಂದು ಓದುಗರ ಅಭಿರುಚಿ ಭಿನ್ನವಾಗಿರುವುದು, ಹಲವು ಸಾವಿರದಿಂದ ಹಿಡಿದು ಲಕ್ಷದವರೆಗೆ ಪ್ರಸಾರವುಳ್ಳ ಪತ್ರಿಕೆಗಳ ಥಳಕು ಬೆಳಕಿನಲ್ಲಿ ಚಂದ್ರಿಕೆ ಬಹುಜನರ ಕಣ್ಣಿಗೆ ಬೀಳುತ್ತಿರಲಿಕ್ಕಿಲ್ಲ. ಆದರೂ ಅದು ಇಂದಿಗೂ ತನ್ನದೇ ಆದ ಓದುಗರ ವರ್ಗವನ್ನುಳಿಸಿಕೊಂಡು ಪ್ರಕಟವಾಗುತ್ತಲೇಯಿದೆ. ಕ್ಷಿಪ್ರದಲ್ಲೇ ತನ್ನ ಅಮೃತ ಮಹೋತ್ಸವವನ್ನು ಆಚರಿಸಲಿದೆಯೆಂಬುದೇನೂ ಸಣ್ಣ ಮಾತಲ್ಲ. ಪ್ರಾರಂಭದಿಂದ ಚಂದ್ರಿಕೆಯ ಸಂಪಾದಕರಾಗಿದ್ದವರು ಯ. ಗು. ಕುಲಕರ್ಣಿಯವರು; ಶಿಕ್ಷಕರೆಂದು ನಿವೃತ್ತರಾದ ನಂತರ ಗಳಗನಾಥರು, ಅವರ ನಂತರ ಗು.ಭ. ಕುಲಕರ್ಣಿಯವರು ಈ ಸ್ಥಾನವನ್ನಲಂಕರಿಸಿದ್ದರು. ೧೯೫೪ರಲ್ಲಿ ಗು.ಭ. ಕುಲಕರ್ಣಿ ನಿವೃತ್ತರಾದ ಮೇಲೆ ಬಂದ ಜಿ. ಎಚ್. ಹೊಸೂರರವರು ೧೯೬೦ರ ವರೆಗೆ ಸಂಪಾದಕರಾಗಿದ್ದರು. ಅಲ್ಲಿಂದ ಇಲ್ಲಿಯವರೆಗೂ ಚಿದಂಬರ ಮೂರ್ತಿ ಚಕ್ರವರ್ತಿಯವರು ಸಂಪಾದಕರಾಗಿದ್ದಾರೆ.



ಗಳಗನಾಥರು

## ಸಾಹಿತ್ಯ ಸೇವೆ

ಈ ಶತಮಾನದ ಪ್ರಾರಂಭಕಾಲದಲ್ಲಿ ಹೊಸಗನ್ನಡ ಸಾಹಿತ್ಯ ಸ್ಪಷ್ಟ ರೂಪ ತಳೆಯುತ್ತಿತ್ತು. ಆ ಕಾಲದಲ್ಲಿಯೇ ಬೆಳಕಿಗೆ ಬಂದ ಗಳಗನಾಥರು ನಿಶ್ಚಿತವಾಗಿಯೂ 'ಚಂದ್ರಿಕೆ' ಕನ್ನಡಿಗರಿಗೆ ನೀಡಿದ ವಜ್ರಗಳ ಖನಿ. ಅವರು ಮುಖ್ಯವಾಗಿ ಮರಾಠಿಯಿಂದ ಜನಪ್ರಿಯ ಐತಿಹಾಸಿಕ ಕಾದಂಬರಿಗಳನ್ನು ಅನುವಾದಿಸುವ ಮೂಲಕ ಹಾಗೂ ಅನೇಕ ಸ್ವತಂತ್ರ ಕೃತಿಗಳ ಮೂಲಕ 'ಚಂದ್ರಿಕೆ'ಯನ್ನು ಜನಪ್ರಿಯಗೊಳಿಸಿದರು. ಅವರ ಒಟ್ಟು ೨೪ ಕಾದಂಬರಿಗಳಲ್ಲಿ ೧೩ 'ಚಂದ್ರಿಕೆ'ಯಲ್ಲೇ ಧಾರವಾಹಿಯಾಗಿ ಬಂದವು. ಗಳಗನಾಥರಲ್ಲದೆ ಶ್ರೀಕಂಠಶಾಸ್ತ್ರಿ, ಜಿ. ಎಚ್. ಹೊಸೂರ, ಭೀ. ಪ. ಕಾಳೆ ಮುಂತಾದವರ ಕಾದಂಬರಿಗಳೂ ಧಾರವಾಹಿಯಾಗಿ ಪ್ರಕಟವಾಗಿವೆ. ಅಲ್ಲದೆ 'ಚಂದ್ರಿಕೆ'ಯು ಸಾಹಿತ್ಯದ ಅನೇಕ ಮುಖಗಳಲ್ಲಿ ವಿಪುಲ ಕಾರ್ಯ ಮಾಡಿತು. ಚಿಂತನ ಸಾಹಿತ್ಯ, ಸಾಮಾಜಿಕ ಸಾಹಿತ್ಯ, ಸಂತ ಸಾಹಿತ್ಯ, ಆಧ್ಯಾತ್ಮಿಕ ಸಾಹಿತ್ಯ ಮುಂತಾದ ವಿಷಯಗಳಲ್ಲೂ ಅಭ್ಯಾಸಪೂರ್ಣ ಲೇಖನಗಳನ್ನು ಕಾಲಕಾಲಕ್ಕೆ ಪ್ರಕಟಿಸಿದೆ.

## ವೈಶಿಷ್ಟ್ಯ

'ಸದ್ಬೋಧ ಚಂದ್ರಿಕೆ'ಯು ಸಮಕಾಲೀನತೆಗೆ ವಿಶೇಷ ಮಹತ್ವ ಕೊಡುತ್ತಿತ್ತು. ತತ್ಸಂಬಂಧೀ ಸಾಹಿತ್ಯ ಪ್ರಸಾರ ಮಾಡುತ್ತಿತ್ತು. ಸತ್ಪುರುಷ ಮಂಡಲ ಕೀರ್ತಿಕೆಯಲ್ಲಿ ಅನೇಕ ಸಾಧು ಸಂತರ ಪರಿಚಯ ನೀಡಿತು. ಯುದ್ಧಕಾಲದಲ್ಲಿ ರಾಷ್ಟ್ರದ ದುರ್ದಸೆ ಕಂಡು ನಾಗೇಶ ಅವರ 'ಅವನತಿಗೀಡಾದ ಭಾರತವರ್ಷ'ವನ್ನು ಪ್ರಕಟಿಸಿತು. ಪರಿಸರಕ್ಕನುಸಾರವಾಗಿ ಆಗಾಗ ಪ್ರಸಿದ್ಧ ಬಾಳ ಗಂಗಾಧರ ಟಿಳಕ, ಮಹಾತ್ಮಾ ಗಾಂಧಿ

ಮುಂತಾದವರ ಕಟು ಅಭಿಪ್ರಾಯದ ಲೇಖನಗಳನ್ನೂ ಹೊರ ತಂದಿತು. ಭಾರತೀಯತೆಯು ಜಾಗೃತಿಯಾಗಿ, ಸ್ವಾತಂತ್ರ್ಯದ ಇಚ್ಛೆ, ಅಭಿಮಾನ ಮೂಡಲು ತೊಂದರೆಯಾದ ಹಿಂದೂ-ಮುಸ್ಲಿಂ ಬಿಕ್ಕಟ್ಟು ಕಂಡು, ಸಹಕ್ಕಾದ 'ಹಿಂದೂಗಳು ಬಲಿಷ್ಠರಾಗುವದೆಂತು ?' ಕಾದಂಬರಿ ಹೊರ ಬಂತು. ಕನ್ನಡಿಗರ ಕುಶಲ ನಿಶಿತಮತಿತ್ವ ತೋರಿಸುವ 'ಕನ್ನಡಿಗರ ಕಾರಸ್ಥಾನ' ಹೊರ ಬಿದ್ದಿತು. 'ಶ್ರಾಂತಿಮಾರ್ತಾಂಡ', 'ಶ್ರಾದ್ಧಮಾರ್ತಾಂಡ'ಗಳು ಜನರಿಗೆ ವೈಧಿಕ ಧರ್ಮಸಂಹಿತೆಯ ದರ್ಶನ ಮಾಡಿಸಿದವು. ಭಕ್ತಿಯೇ ಮುಕ್ತಿಯ ಜೀವಾಳ ಎನ್ನಲು ದಾಸಬೋಧ, ಮೀರಾಬಾಯಿ, ಏಕನಾಥ. ಹಂಸಗೀತೆ, ಗಂಗಡ ಮಾಮಾಳಪ್ಪನವರು ಹೊರಬಂದರು, 'ಚಂದ್ರಿಕೆ'ಯ ಮೂಲ ಮುತ್ತಾದರು. ಸಾಮಾಜಿಕ ಜೀವನದ ನೈಜ ದರ್ಶನ ತೋರಿದವು ವಿಷಕುಂಭ, ನೀಚ ಇನಾಂದಾರ, ಮನೋರಮಾ ಗ್ರಂಥಗಳು. ಈ ಕಾಲದ ಜನರಿಗೆ ಅಗತ್ಯವೆನಿಸಿದ ವೈಜ್ಞಾನಿಕ ಮನೋಭಾವ ಬೆಳೆಸಲು ಬಂದ 'ಪದಾರ್ಥ ತತ್ವಜ್ಞಾನಿ'ಗಳನ್ನು ಮರೆಯುವಂತಿಲ್ಲ.

ಒಟ್ಟಿಗೆ ಹೇಳುವುದಾದರೆ 'ಸದ್ಬೋಧ ಚಂದ್ರಿಕೆ' ಜನತೆಗೆ ನೀಡದ ಸಾಹಿತ್ಯ ಪ್ರಕಾರವಿಲ್ಲ. ಗ್ರಂಥಗಳಲ್ಲಿ ಸಮಕಾಲೀನ ರಾಜಕೀಯ ಪ್ರವೇಶವಾಗಿರಲಿಲ್ಲ. ಆದರೆ ಸನಾತನ ಧರ್ಮದ ಪುನರುಜ್ಜೀವನವನ್ನು ಕಾಣುವ ಹಬ್ಬಯಕೆ ಇತ್ತು. ಭಾರತೀಯ ಸಾಹಿತ್ಯದ ಮೂಲ ಲಕ್ಷಣವೂ ಅದೇ ಆಗಿತ್ತು. ಇದಕ್ಕೆ ಸರಿಯಾಗಿ ಜನರ ಮನೋಧರ್ಮವನ್ನು 'ಸದ್ಬೋಧ ಚಂದ್ರಿಕೆ' ಸಂಸ್ಕಾರಗೊಳಿಸಿದಷ್ಟು ಇನ್ನಾವ ಸಮಕಾಲೀನ ಪತ್ರಿಕೆಗಳೂ ಮಾಡಲಿಲ್ಲವೆಂಬುದು ನಿರ್ವಿವಾದ. ಕಥೆ, ಕಾದಂಬರಿಗಳಲ್ಲಿ ನವರಸಗಳು ಅನಿವಾರ್ಯವೆನಿಸಿತು. ಎಷ್ಟೋ. ಆದರೆ 'ಚಂದ್ರಿಕೆ' ಪ್ರಕಟಿಸಿದ ಒಂದು ಕಾದಂಬರಿಯಲ್ಲೂ ಕೀಳ್ಮಟ್ಟದ ಬರೆಹ, ಅಶ್ಲೀಲತೆಯ ಇಣುಕು ಹಾಕದಿರುವುದೊಂದು ವಿಶೇಷ.

ಕನ್ನಡ ಪತ್ರಿಕಾ ಕ್ಷೇತ್ರದಲ್ಲಿ ಪ್ರಪ್ರಥಮವಾಗಿ ಕಾದಂಬರಿಗಳನ್ನು ಧಾರಾವಾಹಿಯಾಗಿ ನೀಡಿದುದು ಬಹುಶಃ 'ಸದ್ಬೋಧ ಚಂದ್ರಿಕೆ.' ಅಪಾರ ಸಂಖ್ಯೆಯ ಉತ್ತಮ ಗುಣಮಟ್ಟದ, ವಿವಿಧ ಗ್ರಂಥ ಸಾಹಿತ್ಯ ನೀಡಿದುದೂ 'ಸದ್ಬೋಧ ಚಂದ್ರಿಕೆ'ಯೇ.

ಇದರ ಶೈಲಿಯೇ ಸರಳ. ಗಳಗನಾಥರು ನಿರ್ಮಿಸಿದ ಮೈಲಿಗಲ್ಲೇ ಈ ಸರಳ ಗದ್ಯ ನಿರೂಪಣಾ ವೈಖರಿ. ಆಗ ಮಾತ್ರ ಉದಯಿಸುತ್ತಿದ್ದ ಕನ್ನಡ ಗದ್ಯ ಶೈಲಿಗೆ ಗಟ್ಟಿ ಬುನಾದಿ ಹಾಕಿದವರೂ ಅವರೇ. ಆ ಶೈಲಿ ಸಹಜ, ಶಕ್ತಿಯುತ, ವರ್ಣಮಯ. ಸುತ್ತ ಮುತ್ತಣ ದೇಸೀ ಶಬ್ದ ಮಾತುಗಳ ಬಳಕೆ, ಪಂಡಿತ-ಪಾಮರರನ್ನು ಮೆಚ್ಚಿಸುವ ರೀತಿಯಲ್ಲಿತ್ತು. ಜೀವನದ ಕೈಗನ್ನಡಿಯಾಗಿತ್ತು ಬರೆಹ. ಹೇಡಿಯನ್ನು ಕೂಡ ವೀರನನ್ನಾಗಿ ಮಾಡುತ್ತಿತ್ತು ಆ ಕಾಲದ ಗಂಡು ಶೈಲಿ. ವೀರರಸಪತ್ರಾದ, ಸಂದರ್ಭೋಚಿತ ನೀತಿ-ಆಡು ನುಡಿಗಳು ಜನ ಮನದಲ್ಲಿ ಇಳಿದವು, ಉಳಿದವು, ಬೆಳೆದವು.

೧೯೧೮-೧೯ 'ಸದ್ಬೋಧ ಚಂದ್ರಿಕೆ'ಯ ಸುವರ್ಣಕಾಲ. ಪ್ರತಿ ಓದುಗನೂ ಮುಂದಿನ ಸಂಚಿಕೆಗಾಗಿ ಕಾತರಿಸುತ್ತಿದ್ದನು. ಸತ್ವಶಾಲೀ ಲೇಖಕರ ಬಳಗದಲ್ಲಿ ಗಳಗನಾಥರು, ರಾಮಚಂದ್ರ ತ್ರ್ಯಂ. ಕರ್ಪೂರ, ಭೀ. ಪ. ಕಾಳೆ, ನಾಗೇಶ ಮುಂತಾದವರು ಸೇವೆ ಸಲ್ಲಿಸಿದರು. ಅವರೆಲ್ಲ ಶತಮಾನದ ಹೊಸಗನ್ನಡ ಗದ್ಯ-ಸಾಹಿತ್ಯ ರಥದ ರಥಿಕರೆನ್ನಲು ಕಾರಣ ಬೇಕಾಯಿತು. ಇದೇ ಕನ್ನಡದ ಅಂತಃಶಕ್ತಿಯನ್ನು ಬೆಳೆಸಿತು. ✡



**ಬೆಳಕನ್ನು ಹರಡಲು ಎರಡು ದಾರಿಗಳಿವೆ: ಹಣತೆಯಾಗುವುದು ಅಥವಾ ಹಣತೆಯ ಬೆಳಕನ್ನು ಪ್ರತಿಫಲಿಸುವ ಕನ್ನಡಿಯಾಗುವುದು.**

**—ಎಡಿತ್ ವಾರಟನ್**

# ಪ್ರಾಣಿಲೋಕದಲ್ಲಿ ಪ್ರಣಯ

**ಎ. ಮಾಧವ ಉಡುಪ**

ಮಾನುಕುಲವಿನ್ನೂ ಆಗ ಬೆಳೆದಿರಲಿಲ್ಲ. ಆಗ ಇದ್ದ ಗಂಡು, ಹೆಣ್ಣು ಆಡಂ ಮತ್ತು ಈವ್ ಮಾತ್ರ. ಸ್ವಚ್ಛಂದವಾಗಿ ಜೀವಿಸುತ್ತಿದ್ದ ಅವರು ಒಂದು ದಿನ ಪ್ರಲೋಭನೆಗೆ ಒಳಬಿದ್ದರು. ಈವ್‌ಳ ಕೈಯಲ್ಲಿದ್ದ ಹಣ್ಣು ಆಡಂನನ್ನು ಬರಸೆಳೆದು ಪ್ರಣಯ ಪಾಠ ಕಲಿಸಿತು. ಅದೇ ಮಾನುಕುಲದ ಸೃಷ್ಟಿಗೆ ನಾಂದಿಯಾಯಿತು ಎಂಬುದು ಬೈಬಲ್ಲಿನಲ್ಲಿರುವ ಕತೆ. ಅದು ಮಾನುಕುಲದ ಕತೆ ಮಾತ್ರವಲ್ಲ. ಯಾವತ್ತೂ ಜೀವಕೋಟಿಯ ಕತೆ. ಆಡಂ ಮತ್ತು ಈವ್ ಜೀವಕೋಟಿಯನ್ನೇ ಪ್ರತಿನಿಧಿಸುವ ಗಂಡು ಹೆಣ್ಣುಗಳಾದರೆ, ಆ ಹಣ್ಣು ಗಂಡನ್ನು ಆಕರ್ಷಿಸಲು ಹೆಣ್ಣು ಒಡ್ಡುವ ಪ್ರಲೋಭನೆಯ ಪ್ರತೀಕ. ಗಂಡು ಹೆಣ್ಣು ಒಂದನ್ನೊಂದು ಹಂಬಲಿಸುವಂತೆ ಮಾಡಿ, ಅವುಗಳನ್ನು ಒಂದುಗೂಡಿಸಿ, ಸಂತಾನ ಸಮೃದ್ಧಿಯಿಂದ ಕುಲವನ್ನು ಉಳಿಸಿ, ಬೆಳೆಸುವುದೇ ಆ ಪ್ರಲೋಭನೆಯ ಮೂಲೋದ್ದೇಶ. ಪ್ರಾಣಿಲೋಕದಲ್ಲೂ ಆ ಉದ್ದೇಶ ಸಾಧನೆಗಾಗಿ ಪ್ರಣಯದ ಮುಖವಾಡ ಧರಿಸಿ ಗಂಡು ಹೆಣ್ಣುಗಳನ್ನು ಕಾಡುವ ಆ ಪ್ರಲೋಭನೆಯ ಪರಿ ಬಗೆ ಬಗೆಯದು.

ಸ್ವಯಂವರದ ಸಂಪ್ರದಾಯ ತನಗೆ ಬೇಕಾದ ಗಂಡನ್ನು ಹೆಣ್ಣು ತಾನೇ ಆರಿಸಿಕೊಳ್ಳುವ ಪದ್ಧತಿ– ಪುರಾಣ ಕಾಲದಲ್ಲಿ ಇದ್ದ ಬಗ್ಗೆ ಉಲ್ಲೇಖಗಳಿವೆ. ಬುದ್ಧಿಬಲಕ್ಕಿಂತಲೂ ಬಾಹುಬಲಕ್ಕೆ ಹೆಚ್ಚು ಪ್ರಾಧಾನ್ಯ ಇದ್ದ ಆ ಕಾಲದಲ್ಲಿ ಸ್ವಯಂವರದ ವೇಳೆ ಗಂಡಿನ ಪೌರುಷ ಪರೀಕ್ಷೆ ನಡೆದು, ಗೆದ್ದವನು ಆ ಹೆಣ್ಣಿನ ಕೈ ಹಿಡಿಯುವುದು ಅಂದಿನ ಸಂಪ್ರದಾಯವಾಗಿತ್ತು. ಆ ಸಂಪ್ರದಾಯ ಮಾನುಕುಲದಿಂದ ಮರೆಯಾಗುತ್ತಿದ್ದರೂ ಪ್ರಾಣಿಲೋಕದಲ್ಲಂತೂ ಅನೂಚಾನವಾಗಿ ನಡೆದುಕೊಂಡು ಬಂದಿದೆ. ಅವುಗಳಲ್ಲಿ ಆಯ್ಕೆಯ ಹಕ್ಕು ಮನುಷ್ಯರಲ್ಲಿದ್ದಂತೆ ಗಂಡಿಗಲ್ಲ, ಹೆಣ್ಣಿಗೆ. ಒಂದು ಹೆಣ್ಣಿನ ಒಲುಮೆಗಾಗಿ ಅನೇಕ ಗಂಡುಗಳು ನಾ ಮುಂದು, ತಾ ಮುಂದು ಎಂದು ಮುಗಿಬಿದ್ದರೂ, ಬಹುವು ನೆಲುವೆಲ್ಲ ಹೆಣ್ಣಿನ ಆಯ್ಕೆಯನ್ನೇ ಹೊಂದಿಕೊಂಡಿದೆ. ಆ ಆಯ್ಕೆಯ ಸತ್ವಪರೀಕ್ಷೆಯೂ ಒಂದೊಂದು ಜಾತಿಯಲ್ಲಿ ಒಂದೊಂದು ತರ.

ಸಾಮಾನ್ಯವಾಗಿ ಪ್ರಾಣಿಲೋಕದಲ್ಲಿ ಪ್ರಣಯ





ಪರೀಕ್ಷೆ ಪೌರುಷದ ಪರೀಕ್ಷೆಯೇ ಆಗಿರುತ್ತದೆ. ಅದಕ್ಕಾಗಿ ಗಂಡುಗಳ ನಡುವೆ ಭಯಂಕರ ಕಾದಾಟವೇ ಜರುಗುತ್ತದೆ. ಹೆಣ್ಣು ಆಗ ಆ ಕಾದಾಟದ ಅಂತ್ಯದ ಗಳಿಗೆಯನ್ನೇ ನಿರೀಕ್ಷಿಸುತ್ತಾ ಮೂಕ ಪ್ರೇಕ್ಷಕನಂತಿರುತ್ತದೆ. ಅದರ ಒಲವು ಲಭಿಸುವುದು ಆ ಕಾದಾಟದಲ್ಲಿ ಗೆದ್ದ ಗಂಡಿಗೆ ಮಾತ್ರ. ಆ ಒಲುಮೆ ಸುಖ ಕಾಣದೆ ಕಾದಾಟದಲ್ಲಿ ಸೋತು ಸುಣ್ಣವಾಗಿ, ನೋವಿನಿಂದ ನರಳಿ, ಜೀವ ತೊರೆಯುವ ಪ್ರಾಣಿ ಪಕ್ಷಿಗಳಿವೆ. ಆದರೆ ಹೆಣ್ಣು ಸ್ಟಿಲ್ಟ್ ಪಕ್ಷಿ ತನಗಾಗಿ ಜರಗುವ ಈ ಚಿತ್ರಹಿಂಸೆಯನ್ನು ಸಹಿಸದು. ಆದ್ದರಿಂದ ಅದು ಕಾದಾಟದ ಅಂತಿಮ ಗಳಿಗೆಯ ವರೆಗೆ ಕಾಯುವುದಿಲ್ಲ. ಅವುಗಳ ಸಾಮರ್ಥ್ಯಗಳ ಅಳತೆಗಾಗಿ ಸ್ವಲ್ಪ ಹೊತ್ತು ಅವುಗಳ ಹೋರಾಟವನ್ನು ವೀಕ್ಷಿಸುತ್ತದೆ. ಮರುಕ್ಷಣವೇ ಮಧ್ಯೆ ಪ್ರವೇಶಿಸಿ, ಹೋರಾಟವನ್ನು ನಿಲ್ಲಿಸುವಂತೆ ಕರೆ ಕೊಟ್ಟು, ತಾನು ಮೆಚ್ಚಿದ ಗಂಡಿನ ಬಳಿಸಾರುತ್ತದೆ.

ಆದರೆ ಏಪ್ಗಮೃಗಗಳಲ್ಲಿ ಪ್ರಣಯಪರೀಕ್ಷೆಯ ತರವೇ ಬೇರೆ. ಗಂಡು ಏಪ್ಗಮೃಗ ಇನ್ನೂ ದೂರದಲ್ಲಿರುವಾಗಲೇ ಹೆಣ್ಣು ಏಪ್ಗಮೃಗ ಅಲ್ಲಿಗೆ ಧಾವಿಸಿ ಅದನ್ನು ತಿವಿಯತೊಡಗುತ್ತದೆ. ಗಂಡು ಸಿಟ್ಟಾಗದೆ ಅದನ್ನು ಎದುರಿಸಿದಲ್ಲಿ ಮಾತ್ರ ಇನಿಯಳ ಒಲುಮೆ ಅದಕ್ಕೆ ಲಭ್ಯ. ಭವಿಷ್ಯದಲ್ಲಿ ಎದುರಾಗಬಹುದಾದ ಹತ್ತು ಹಲವು ಕಷ್ಟಕಂಟಕಗಳನ್ನು ಎದುರಿಸುವ ಗಂಡೆದೆ ಆ ಗಂಡಿಗೆ ಇದೆಯೇ? ಎಂಬುದನ್ನು ಪರೀಕ್ಷಿಸುವುದೇ ಆ ತೆರನ ಆತಿಥ್ಯದ ಉದ್ದೇಶವಾಗಿರಬೇಕು.

ಪೌರುಷದ ಅಳತೆಗೋಲು ಕಾದಾಟ ಮಾತ್ರವಲ್ಲ. ಬೇಟೆಯ ಜಾಣ್ಮೆಯನ್ನೇ ಅದರ ಅಳತೆಗೋಲಾಗಿ ಸ್ವೀಕರಿಸುವ ಪಕ್ಷಿಗಳೂ ಇವೆ. ಮಿಂಚುಳ್ಳಿ ಆ ವರ್ಗಕ್ಕೆ ಸೇರಿದ್ದು. ಗಂಡು ಮಿಂಚುಳ್ಳಿ ಹೆಣ್ಣಿನ ಎದುರು ತನ್ನ ಬೇಟೆಯ ಚಾತುರ್ಯವನ್ನು ನಾನಾ ಬಗೆಗಳಲ್ಲಿ ಪ್ರದರ್ಶಿಸುತ್ತದೆ. ಕ್ಷಣಾರ್ಧದಲ್ಲಿ ಮುಳುಗಿ, ಎದ್ದು, ಮೀನನ್ನು ಹಿಡಿದು ತಂದು, ಹೆಣ್ಣಿನೆದುರು ರಾಶಿಹಾಕುತ್ತದೆ. ಆದರೆ ಆ ಕೂಡಲೇ ಹೆಣ್ಣು ಅದಕ್ಕೆ ಒಲಿಯದು. ಗಂಡಿನಲ್ಲಿ ಪಟ್ಟು ಹಿಡಿದು ಹೋರಾಡುವ ಸ್ಥೈರ್ಯ ಇದೆಯೇ? ಎಂಬುದನ್ನು ಒರೆಗೆ ಹಚ್ಚಲು ಅದು ನಾಲ್ಕೈದು–ಕೆಲವೊಮ್ಮೆ ಇನ್ನೂ ಹೆಚ್ಚು–ದಿನಗಳವರೆಗೆ, ಆ ಗಂಡಿನ ಕಡೆಗೂ ನೋಡದು. ಅಷ್ಟಾದರೂ ಯಾವ ಗಂಡಿನಲ್ಲಿ ತನಗಾಗಿ ಬಿಡದ ಛಲವಿದೆಯೋ ಆ ಗಂಡಿನ ಪ್ರೀತಿಯ ಆಳಕ್ಕೆ ನುಗ್ಗಿ, ಅದು ತಂದಿತ್ತ ಮೀನನ್ನು ಸ್ವೀಕರಿಸುತ್ತದೆ. ಒಲವಿನ ಬದುಕಿಗೆ ಅದೇ ಅದರ ಸಮ್ಮತಿ. ಮುಂದೆ ಮೊಟ್ಟೆಯಿಟ್ಟಾಗ ವೈರಿಗಳ ಬಾಯಿಂದ ಅದನ್ನು ರಕ್ಷಿಸಲೂ, ಎಂತಹ ಕಷ್ಟದ ದಿನಗಳಲ್ಲೂ ಆಹಾರ ಪೂರೈಸಲೂ ಅಂತಹ ಪರಾಕ್ರಮವನ್ನು ಗಂಡಿನಲ್ಲಿ ಅವು ಬಯಸುತ್ತಿರಬೇಕು.

ಬೆಚ್ಚನೆಯ ಮನೆಯಲ್ಲಿ ಸುಖ ಬಾಳುವೆಯ ಕನಸು ಕಾಣುವ ಪೆರಡೈಸ್ ಹಕ್ಕಿಗಳು ತಮ್ಮ

ಇನಿಯನ ಪೌರುಷವನ್ನಳೆಯುವುದು ಆತ ಎಂತಹ ಮನೆ ಕಟ್ಟಿ ನಮ್ಮನ್ನು ಕರೆಸಿಕೊಂಡಾನೆಂಬುದರಿಂದ. ಹಾಗಾಗಿ ಗಂಡು ಹಕ್ಕಿಗಳು ಕೊಂಬೆರೆಂಬೆಗಳಿಂದ ಮನೆಯನ್ನು ಕಟ್ಟಿ, ಫಲ ಪತ್ರ ಪುಷ್ಪಗಳಿಂದ ಅದನ್ನು ಅಲಂಕರಿಸಿ ಹೆಣ್ಣು ಹಕ್ಕಿಗೆ ಆಹ್ವಾನವೀಯುತ್ತದೆ. ಯಾವ ಮರ ಅದರ ಮನಸ್ಸನ್ನಾಕರ್ಷಿಸುವುದೋ ಆ ಗಂಡು ಹಕ್ಕಿಯ ರಚನಾಕೌಶಲಕ್ಕೆ ಮನಸೋತು, ಅದರ ಮನದನ್ನೆಯಾಗಿ ಆ ಮನೆಯನ್ನದು ಸೇರುತ್ತದೆ. ನೀಲಿ ಬಣ್ಣದ ಕಣ್ಣುಗಳಿರುವ ಆ ಹೆಣ್ಣು ಪೆರಡೈಸ್ ಹಕ್ಕಿಯ ಮನ ಮೆಚ್ಚಿಸಲು ಕೆಲವು ಗಂಡುಗಳು ತಮ್ಮ ಮನೆಯಲ್ಲಿ ನೀಲಿ ಬಣ್ಣದ ಕಲ್ಲುಗಳನ್ನೂ ನೀಲಿ ಬಣ್ಣದ ಹೂ ಹಣ್ಣುಗಳನ್ನೂ ತಂದಿರಿಸುವುದನ್ನು ಗುರುತಿಸಿದ್ದಾರೆ. ಒಲುಮೆಗಾಗಿ ಅವು ತೋರಿಸುವ ಜಾಣ್ಮೆ, ಕಲಾತ್ಮಕ ಕೌಶಲ್ಯಗಳು ಬೆರಗುಗೊಳಿಸುವಂಥವು.

ಚಿನ್ನಾಭರಣ, ಆಸ್ತಿಪಾಸ್ತಿ, ಅಂತಸ್ತು, ಐಶ್ವರ್ಯಗಳಿಗೆ ಬಾಯ್ಬಿಟ್ಟು ಮದುವೆಯ ಬೆಸುಗೆಗೆ ಓಗೊಡುವ ಯುವಕ–ಯುವತಿಯರಂತೆ, ಪ್ರಾಣಿಲೋಕದಲ್ಲೂ ಉಡುಗೊರೆಗಳ ಚೆಲುವಿಗೆ ಮನಸೋತು, ಗಂಡಿಗೆ ಒಲಿಯುವ ಜೀವಿಗಳಿವೆ. ಆ ಉಡುಗೊರೆ ಹೊಟ್ಟೆಯ ಹಸಿವೆಗೆ ಮಾತ್ರವಲ್ಲ, ಕಣ್ಣಿನ ಹಸಿವಿಗೋ ಭವಿಷ್ಯದ ಕನಸಿಗೋ ಆಹಾರವನ್ನೊದಗಿಸುವಂಥದಾಗಿರಬಹುದು. ಸೊಳ್ಳೆಯಂತಿರುವ ನ್ಯಾಟ್ ಎಂಬ ಕೀಟ ತಿನಿಸನ್ನು ತನ್ನ ಜೊಲ್ಲಿನಿಂದ ತೋಯಿಸಿ ಹೆಣ್ಣುಗಳಿಗೆ ತಂದೊಪ್ಪಿಸುತ್ತದೆ. ಜೇಡರ ಬಲೆಯಲ್ಲಿ ಸುತ್ತಿದ ನೊಣವು ಗಂಡು ಜೇಡರ ಹುಳು ಹೆಣ್ಣಿಗೆ ಸಲ್ಲಿಸುವ ಕಾಣಿಕೆ. ಕೆಲವು ಜಾತಿಯ ಗುಬ್ಬಿಗಳು ಹೆಣ್ಣಿನ ಒಲುಮೆಯನ್ನು ಗೆಲ್ಲಲು ಒಳ್ಳೆಯ ಹಣ್ಣುಗಳನ್ನು ಆರಿಸಿಕೊಂಡು ಇನಿಯಳ ಬಳಿ ಸಾರುತ್ತವೆ. ತನಗೆ ಒಪ್ಪಿಗೆಯಾದ ಗಂಡು ಸಲ್ಲಿಸುವ ಕಾಣಿಕೆಗಳನ್ನು ಮಾತ್ರ ಹೆಣ್ಣು ಸ್ವೀಕರಿಸುತ್ತದೆ. ಪ್ರೇಯಸಿಯ ಪ್ರೀತಿಯನ್ನು ಗೆಲ್ಲಲು ಬಣ್ಣ ಬಣ್ಣದ ಕಲ್ಲುಗಳನ್ನೂ ಪತ್ರ–ಪುಷ್ಪಗಳನ್ನೂ ತಮ್ಮ ಮನೆಯಲ್ಲಿ ತಂದಿರಿಸುವ ಪೆರಡೈಸ್ ಹಕ್ಕಿಗಳ ಬಗ್ಗೆ ನಾವು ಈಗಾಗಲೇ ತಿಳಿದಾಗಿದೆ. ಗಂಡು ಪೆಂಗ್ವಿನ್ ಪಕ್ಷಿಗಳೂ ಪ್ರಣಯ ಸ್ಪರ್ಧೆಯಲ್ಲಿ ಹೆಣ್ಣಿನೆದುರು ಬಣ್ಣಬಣ್ಣದ ಕಲ್ಲುಗುಂಡುಗಳನ್ನು ತಂದಿರಿಸುತ್ತವೆ. ತನಗೆ ಮೆಚ್ಚಿಗೆಯಾದ ಕಲ್ಲುಗುಂಡನ್ನು ಹೆಣ್ಣು ಹಕ್ಕಿ ಕೊಕ್ಕಿನಿಂದ ಎತ್ತಿ ಹಿಡಿದು, ಅದನ್ನು ಬಂದಿತ್ತ ಗಂಡಿಗೆ ತನ್ನ ಒಪ್ಪಿಗೆ ಸೂಚಿಸುತ್ತದೆ. ಟೆರ್ನ್ ಹಕ್ಕಿಗಳು ಚಿಕ್ಕ ಕೊಂಬೆ ರೆಂಬೆಗಳನ್ನೇ ತಮ್ಮ ಪ್ರೇಯಸಿಗೆ ಕೊಡುಗೆಯಾಗಿ ಕೊಡುತ್ತವೆ. ತನ್ನೊಡನೆ ಮನೆ ಗೂಡು ಕಟ್ಟಿ ಕಾಪಾಡುವ ಭರವಸೆ ಯಾವ ಹಕ್ಕಿ





ಯಿಂದ ಹೆಚ್ಚು ಸಿಗುತ್ತದೋ ಆ ಹಕ್ಕಿಗೆ ಒಲವಿನ ಹೋರಾಟದಲ್ಲಿ ಜಯ ಲಭಿಸುತ್ತದೆ.

ಕಲಾವಂತಿಕೆಯನ್ನೇ ವರಪರೀಕ್ಷೆಯ ಮಾನದಂಡವಾಗಿ ಉಪಯೋಗಿಸುವ ಜೀವಿಗಳೂ ಇವೆ. ಪ್ರಣಯ ಪರ್ವದಲ್ಲಿವು ತಮ್ಮ ಬೆಡಗು ಬಿನ್ನಾಣಗಳಿಂದ, ನೃತ್ಯ ಗೀತಗಳಿಂದ ಪ್ರೇಯಸಿಯ ಮನವನ್ನು ಮುಟ್ಟಿ, ತಟ್ಟುತ್ತವೆ. ನವಿಲುಗಳು ಪ್ರಣಯ ಭಿಕ್ಷೆಗಾಗಿ ರೆಕ್ಕೆ ಬಿಚ್ಚಿ ಕುಣಿದು ಹೆಣ್ಣನ್ನು ಓಲೈಸುತ್ತವೆ. ಏಡಿಗಳೂ ಈ ರೀತಿ ಕುಣಿಕುಣಿದು ಹೆಣ್ಣಿನ ಪ್ರೀತಿ ಗೆಲ್ಲುತ್ತವೆ. ಹೆಣ್ಣು ಚೇಳು ಗಂಡಿನ ಕೈ ಹಿಡಿದು ಸ್ವಲ್ಪ ದೂರ ನಡೆದಾಡಿ ಹೆಚ್ಚು ಸುಖ ಕೊಡುವ ಗಂಡಿನ ಸಖ್ಯಕ್ಕೆ ಸಮ್ಮತಿಸುತ್ತದೆ. ಪ್ರಾನ್ಸ್ ಜಾತಿಗೆ ಸೇರಿದ ಮತ್ಸ್ಯಗಳು ಮಧುರವಾದ ನಾದಗೈಯುತ್ತಾ ಮನದನೆಯ ಮನಸೂರೆಗೊಳ್ಳುತ್ತವೆ. ಪ್ರೇಮಗೀತೆಗಳಿಂದ ಹೆಣ್ಣಿನ ಮನ ಮಿಡಿಸಿ ಅದರ ಒಲವನ್ನು ಗೆಲ್ಲುವ ಹಕ್ಕಿಗಳೂ ಕೀಟಗಳೂ ಇವೆ.

ಪಕ್ಷಿಗಳ ದಾಂಪತ್ಯ ಜೀವನ ದೀರ್ಘಕಾಲದ್ದೇನಲ್ಲ. ಅವು ಕೂಡಿ ಬಾಳುವುದು ಹೆಚ್ಚೆಂದರೆ ಮರಿಯಾಗುವ ತನಕ ಮಾತ್ರ. ಆ ಮೇಲೆ ಗಂಡು ಹಕ್ಕಿ ಇನ್ನೊಬ್ಬ ಪ್ರೇಯಸಿಯನ್ನು ಹುಡುಕಿಕೊಂಡು ಹೊರಟುಹೋಗುತ್ತದೆ. ಆದರೆ ರೇವನ್ ಹಕ್ಕಿಗಳ ದಾಂಪತ್ಯ ಜೀವನ ಈ ರೀತಿ ತಾತ್ಕಾಲಿಕವಲ್ಲ. ಅವುಗಳಲ್ಲಿ ಒಮ್ಮೆ ಗಂಡು ಹೆಣ್ಣಿನ ಸಂಬಂಧ ಬೆಳೆದರೆ ಅವು ಕೊನೆಯವರೆಗೂ ಕೂಡಿ ಬಾಳುತ್ತವೆ. ಬಾಳಿನುದ್ದಕ್ಕೂ ಸಾಮರಸ್ಯವಿರಬೇಕೆಂಬ ಬಯಕೆಯಿಂದ, ಅವು ಒಂದುಗೂಡುವ ಮುಂಚೆ ಸಾಕಷ್ಟು ಯೋಚಿಸುತ್ತವೆ. ಹೆಣ್ಣು ಹಕ್ಕಿ ಗಂಡು ಹಕ್ಕಿಯೊಂದಿಗೆ ಕೆಲವು ದಿನ ಒಡನಾಡಿಕೊಂಡಿದ್ದು, ತನಗೆ ಹೊಂದಿಕೆಯಾದಲ್ಲಿ ಮಾತ್ರ ಒಪ್ಪಿಗೆ ಸೂಚಿಸುತ್ತದೆ. ತನ್ನೊಡನೆ ಹೊಂದಿಕೊಳ್ಳುವ ಹಕ್ಕಿಯನ್ನದು ಮೆಚ್ಚಿ ಕೊನೆಯವರೆಗೂ ಅದರೊಡನೆ ಬಾಳುತ್ತದೆ. ಹದ್ದುಗಳಲ್ಲೂ ಈ ತೆರನ ಅಖಂಡ ದಾಂಪತ್ಯ ಜೀವನವನ್ನು ಗುರುತಿಸಿದ್ದಾರೆ. ಕಾಗೆ ಜಾತಿಯ ರಾಕ್ ಪಕ್ಷಿಗಳಲ್ಲಿನ ಗಂಡು ಹೆಣ್ಣುಗಳ ನಿಷ್ಠೆ ಅಸದೃಶವಾದುದು. ಅವು ಎಷ್ಟು ಅನ್ಯೋನ್ಯವಾಗಿರುತ್ತವೆಂದರೆ, ಒಂದೊಮ್ಮೆ ಒಂದು ಹಕ್ಕಿ ತೀರಿಹೋದರೂ ಇನ್ನೊಂದು ಹಕ್ಕಿ ಬೇರೆ ಹಕ್ಕಿಯ ಸಖ್ಯ ಬಯಸದು. ✡

ಪ್ರಿಯಾರಾಧನೆಯ ಬಣ್ಣಗಳು ವಿಶೇಷವಾಗಿ ಹಕ್ಕಿಗಳಲ್ಲಿ ಕಾಣುತ್ತವೆ. ಹಕ್ಕಿಗಳ ರೆಕ್ಕೆ, ಪುಕ್ಕ, ಗರಿಗಳು ಮನಮೋಹಕ ಬಣ್ಣಗಳಿಂದ ಕೂಡಿರುತ್ತವೆ. ಈ ಬಣ್ಣಗಳು ಅವುಗಳ ಜೀವ ರಕ್ಷಣೆಗೆ ನೆರವಾಗುವುದಿಲ್ಲ, ಅಷ್ಟೇ ಅಲ್ಲದೆ ಇಂತಹ ಅಸಾಧಾರಣ ವರ್ಣವೈವಿಧ್ಯಗಳು ಗಂಡು ಹಕ್ಕಿಗಳಲ್ಲಿ ಹೆಚ್ಚು ಕೇಂದ್ರೀಕೃತವಾಗಿರುತ್ತವೆ ಎಂಬುದು ಗಮನಿಸಬೇಕಾದ ಅಂಶ. ರೆಕ್ಕೆ ಪುಕ್ಕಗಳ ಈ ಸೊಬಗಿನ ಬೆಡಗಿನ ಬಣ್ಣಗಳು ಪ್ರತಿಸ್ಪರ್ಧಿಗಳ ಅಥವಾ ಶತ್ರುಗಳ ಕಡೆಗೆ ತೋರಲ್ಪಡುವುದಿಲ್ಲ, ಸಂಗಾತಿಗಳ ಮುಂದೆ ಪ್ರದರ್ಶಿಸಲ್ಪಡುತ್ತವೆ. ಗಂಡು ಹಕ್ಕಿಗಳು ಹೆಣ್ಣು ಹಕ್ಕಿಗಳ ಮುಂದೆ ಹೆಮ್ಮೆಯಿಂದ ಗಂಭೀರವಾಗಿ ತಮ್ಮ ಆಕರ್ಷಕ ಬಣ್ಣಗಳನ್ನು ಮೆರೆಯುತ್ತವೆ. ಇದರಿಂದ ಸಂಗಾತಿಯನ್ನು ಗೆಲ್ಲುವುದು ಅವುಗಳ ಗುರಿ. ಆ ಕಾರಣದಿಂದಲೇ ಇಂತಹ ಬಣ್ಣಗಳನ್ನು ಪ್ರಿಯಾರಾಧನೆಯ ಬಣ್ಣಗಳೆಂದು ಕರೆಯುವುದು.

* * *

ಬೊಂಬಾಯಿಯ "ಕೇಂದ್ರೀಯ ಕೋಳಿ ಸಾಕಣೆ ಕೇಂದ್ರ" ಅಭಿವೃದ್ಧಿಪಡಿಸಿರುವ ಒಂದು ತಳಿ ವರ್ಷಕ್ಕೆ ೨೬೦ ಮೊಟ್ಟೆಗಳನ್ನಿಡಬಲ್ಲದು !

– 'ವಿಜ್ಞಾನ ಸೌರಭ'ದಿಂದ

# ಒಂದು 'ಕಾ-ಬಾ' ಸಂವಾದ

**೧೯೭೪ರ ಫೆಬ್ರುವರಿ ೨೩ರಂದು ಪ್ರಸಿದ್ಧ ಗಾಂಧಿವಾದಿಗಳಾದ ಕಾಕಾ ಕಾಲೇಲಕರರು ಪವನಾರ್ ಆಶ್ರಮದಲ್ಲಿ ವಿನೋಬಾ ಅವರನ್ನು ಸಂಧಿಸಿದಾಗ ನಡೆದ ಮಾತುಕತೆಗಳ ಒಂದಂಶವನ್ನು ಇಲ್ಲಿ ಕೊಡಲಾಗಿದೆ. ಇಂದು ಇದು ಪ್ರಕಟವಾಗುವ ವೇಳೆಗೆ ಕಾಲೇಲಕರರೂ ಇಲ್ಲ, ವಿನೋಬಾ ಅವರೂ ಇಲ್ಲ. ಕಾಲಮಾನದ ದೃಷ್ಟಿಯಿಂದ ಈ ಸಂದರ್ಶನ ಸ್ವಲ್ಪ ಹಳೆಯದಾದರೂ ಅಸ್ಸಾಂ ಸಮಸ್ಯೆ, ಅಕಾಲಿಗಳ ಚಳವಳಿ, ಗೋವೆಯಲ್ಲಿ ಕನ್ನಡ ಕೂಲಿಕಾರರ ಉಚ್ಚಾಟನೆಯಂತಹ ಜ್ವಲಂತ ಸಮಸ್ಯೆಗಳು ಭುಗಿಲೇಳುತ್ತಿರುವಾಗ ಇದು ಸಾಮಯಿಕವಾಗಿರುವುದೆಂದು ಇಲ್ಲಿ ಕೊಡಲಾಗಿದೆ.**

ಬಾಬಾ: ನೀವು ಕೇಳಿದ ಪ್ರಶ್ನೆಗಳಿಗೆ ನನ್ನ ಉತ್ತರವಿಷ್ಟು: (೧) ನಿಮ್ಮ ಆರೋಗ್ಯ ಹೇಗಿದೆ?–ಉತ್ತಮವಾಗಿದೆ. (೨) ವಾಚನಾದಿಗಳು ಹೇಗೆ ನಡೆಯುತ್ತಾ ಇವೆ?–ಅಷ್ಟಕ್ಕಷ್ಟೆ. ಸಾಧ್ಯವಾದಷ್ಟು ನಿರ್ವಿಕಾರವಾದ, ನಿರ್ವಿಚಾರವಾದ ಶೂನ್ಯ ಅವಸ್ಥೆಯಲ್ಲಿರಲು ಪ್ರಯತ್ನಿಸುತ್ತೇನೆ. (೩) ದಿನದಲ್ಲಿ ಎರಡು ಮೂರು ಗಂಟೆಗಳಷ್ಟು ಕಾಲ ಸಭೆ ಸಮ್ಮೇಲನಗಳಲ್ಲಾಗಲಿ ಚರ್ಚಾಗೋಷ್ಠಿಗಳಲ್ಲಾಗಲಿ ಕಳೆದುಹೋಗುತ್ತದೆ. ಆದರೆ ನಾನು ಹೇಳಲಿರುವುದನ್ನು ಮುಂದಾಗಿ ಯೋಚಿಸಿಟ್ಟುಕೊಳ್ಳದೆ ಯುಕ್ತ ಸಮಯಕ್ಕೆ ಏನು ತೋರುವುದೋ ಅದನ್ನು ಹೇಳುವ ವ್ರತವನ್ನು ರೂಢಿಸಿಕೊಂಡಿದ್ದೇನೆ.

ಕಾಕಾ: ಮಾತಾಡುತ್ತಾ ಮಾತಾಡುತ್ತಾ ನೀವು ಆಗಾಗ ಒಳ್ಳೆಯ ಸೂಚನೆಗಳನ್ನೇ ಕೊಡುತ್ತೀರಿ. ಅವುಗಳು ಪ್ರಕಟವಾದಾಗ ನಾವೆಲ್ಲ ತಪ್ಪದೆ ಓದುತ್ತೇವೆ. ಆದರೆ ಇದರ ಹೊರತಾಗಿ ನಿಮ್ಮಲ್ಲಿ ನಡೆಯುವ ಚಿಂತನದ ಸ್ವರೂಪ ಹೇಗೆ ಇರುತ್ತದೆನ್ನುವುದನ್ನು ಸ್ವಲ್ಪ ಪರಿಚಯಿಸುತ್ತೀರಾ?

ಬಾಬಾ: ಗಾಢವಾಗಿ ನಿದ್ದೆ ಹತ್ತಿದಾಗ ಅರ್ಥಾತ್ ನಾವೆಲ್ಲ ನಿಃಸ್ವಪ್ನಾವಸ್ಥೆಯಲ್ಲಿದ್ದಾಗ ಯಾವ ವಿಚಾರಗಳೂ ನಮ್ಮಲ್ಲಿ ಸುಳಿಯುವುದಿಲ್ಲ. ಜಾಗ್ರತಾವಸ್ಥೆಯಲ್ಲಿರುವಾಗಲೂ ಇದೇ ಪರಿಸ್ಥಿತಿಯಿರಬೇಕು. ಆ ಸ್ಥಿತಿಗೂ ನಾನು ಈಗ ಹೇಳಿದ ಸ್ಥಿತಿಗೂ ಇರುವ ಅಂತರವೆಂದರೆ ನಿದ್ರಾವಸ್ಥೆಯಲ್ಲಿ ಎಲ್ಲವೂ ಶೂನ್ಯವಾಗಿದ್ದರೆ ಸಾಕ್ಷಿತ್ವವಿರುವುದಿಲ್ಲ. ಆದರೆ ಎರಡನೆ ಸ್ಥಿತಿಯಲ್ಲಿ ಶೂನ್ಯತ್ವವಿದ್ದೂ ಸಾಕ್ಷಿತ್ವವಿರುತ್ತದೆ.

ಕಾಕಾ: ನಾನೂ ಒಂದೆರಡು ಮಾತು ಹೇಳಬೇಕೆನ್ನುತ್ತೇನೆ. (೧) ವಿಶ್ವಾತ್ಮೈಕ್ಯಭಾವವನ್ನು ಮೈಗೂಡಿಸಿಕೊಳ್ಳಲು ನಾನು ಸತತವಾಗಿ ಪ್ರಯತ್ನಿಸುತ್ತಿದ್ದೇನೆ. ಮನುಷ್ಯೇತರ ಪ್ರಾಣಿಗಳ ಪೈಕಿ ಪಶುಪಕ್ಷಿಗಳೇ ಮನಸ್ಸಿನಲ್ಲಿ ಬರುತ್ತವೆಯೋ ಹೊರತು ಜಲಚರಜೀವಿಗಳು ಏಕೆ ಬರುವುದಿಲ್ಲ? ಎಂಬ ವಿಚಾರ ಒಮ್ಮೆ ಬಂತು.



ವಿನೋಬಾ

(೧೧-೯-೧೮೯೫—೧೫-೧೧-೧೯೮೨)

316 3



ಚಿತ್ರ: ಪಿ. ಎಸ್. ಚಂದ್ರಶೇಖರ

## ಆನಂದ ರಹಸ್ಯ

ಪರಮೇಶ್ವರ ಒಬ್ಬ ಪರಿಪೂರ್ಣ ಕಲಾವಿದ. ಆತ ಎಂದೂ ಅಪರಿಪೂರ್ಣ ಚಿತ್ರ ರಚನೆ ಮಾಡಿಯೇ ಇಲ್ಲ-ಮಾಡುವದಿಲ್ಲ ಕೂಡ. ಅಂತೆಯೇ ಆತ ನಮ್ಮ ತಂದೆಯೂ ಹೌದು. ತಂದೆಯೆಂದಾದರೂ ತನ್ನ ಮಕ್ಕಳಿಗೆ ದುಃಖವೊಡ್ಡುತ್ತಾನೆಯೆ? ಆತ ನಮಗಾಗಿ ಆನಂದಮಯವಾದ ಸೃಷ್ಟಿಯನ್ನೇ ಮಾಡಿದ್ದಾನೆ. ಆದರೆ ನಮ್ಮದೂ ಅದ್ಭುತ ಸಾಮರ್ಥ್ಯ!! ನಾವು ಆನಂದದಲ್ಲೇ ದುಃಖವನ್ನು ಸೃಷ್ಟಿಸುತ್ತೇವೆ!

ಎದುರಿಗೆ ಕಾಣುತ್ತದಲ್ಲಾ-ಆನಂದದಿಂದ ನಳನಳಿಸುವ ಆ ವೃಕ್ಷ-ಇತರರಿಗೆ ಆನಂದ ನೀಡುವುದೇ ಅದಕ್ಕೊಂದು ಆನಂದ. ಹೂವು-ಹಣ್ಣು-ಎಲೆ-ನೆರಳು ಎಲ್ಲವನ್ನೂ ಇತರರಿಗೆ ನೀಡಿಬಿಡುತ್ತದೆ. ಯಾರಾದರೂ ತನ್ನನ್ನು ಕಡಿದುಕೊಳ್ಳಲು ಬಂದರೆ ಅದಕ್ಕೂ ಸಮ್ಮತಿಸುವುದರಲ್ಲೇ ಆನಂದ ಅದಕ್ಕೆ. ಅದು ಸದಾ ತ್ಯಾಗಮಯಿಯೇ. ಆನಂದದ ರಹಸ್ಯ ಅಡಗಿರುವುದು ಇಲ್ಲಿಯೇ- ಕೊಡು, ಕೊಡು, ನಿನ್ನದೆಲ್ಲವನ್ನೂ ಇತರಿಗೆ ಕೊಡು. ಕೊಡು; ಕೊಟ್ಟಷ್ಟೂ ಮರಳಿಪಡಿಯುತ್ತೀ. ಸೃಷ್ಟಿ ಬಲು ಉದಾರಿ. ಅದಕ್ಕೆ ಗಣಿತವೂ ಗೊತ್ತು. ಒಂದು ಬೀಜ ಬಿತ್ತಿದರೆ ಸಾವಿರವಾಗಿ ಬರುತ್ತದೆ. ಆದರೆ ಸೊನ್ನೆಯನ್ನಿತ್ತರೆ ಸಾವಿರಪಟ್ಟು ಸೊನ್ನೆಯೆ ನಿಮಗೆ. ತ್ಯಾಗ ಮಾಡಲು ಗೊತ್ತಿರದವನಿಗೆ ಆನಂದದ ರಹಸ್ಯದ ಅರಿವು ಹೇಗಾದೀತು? ಆ ಆನಂದದ ಅನುಭವವಾದರೂ ಹೇಗಾಗಲು ಸಾಧ್ಯ?

—ಆಚಾರ್ಯ ವಿನೋಬಾ

ಸರಿ, ಈ ನ್ಯೂನತೆಯನ್ನು ಸರಿಪಡಿಸಲು ಜಲಚರಗಳ ಬಗೆಗೆ ಸಾಕಷ್ಟು ಓದಿಕೊಂಡೆ. ನಾನು ಓದಿದ ಪುಸ್ತಕಗಳಲ್ಲಿ ಅಧ್ಯಾತ್ಮ-ವಿಜ್ಞಾನಗಳೆರಡನ್ನೂ ಚೆನ್ನಾಗಿ ಮೇಳವಿಸಲಾಗಿತ್ತು. ಆದರೆ ನಾನು ಮಾತ್ರ ಅಧ್ಯಾತ್ಮದ ಸಹಾಯದಿಂದ ವಿಷಯವನ್ನು ಅರ್ಥವಿಸಿಕೊಂಡೆ. ಕ್ರಿಮಿಕೀಟಗಳಾಗಲಿ ರಕ್ತಕಣಗಳಾಗಲಿ ಪ್ರಾಣಿಗಳೇ ಆಗಿರುವುದರಿಂದ ಅವುಗಳ ಬಗೆಗೆ ಇನ್ನೂ ಹೆಚ್ಚು ಹೆಚ್ಚಾಗಿ ತಿಳಿದುಕೊಂಡು ಅವುಗಳೊಂದಿಗೆ ಆತ್ಮೈಕ್ಯವನ್ನು ಸಾಧಿಸಬೇಕೆಂಬ ಔತ್ಸುಕ್ಯ ಉಂಟಾಗಿದೆ. (೨) ಮರಗುಳಿತನ ಹೆಚ್ಚಾಗಿದೆ. ವಿಸ್ಮರಣವು ಒಂದು ರೀತಿಯಲ್ಲಿ ಆಂಶಿಕ ಮರಣವೇ ಆಗಿರುವುದರಿಂದ ಮರಣದ ಬಗೆಗೆ ಆಳವಾಗಿ ಯೋಚಿಸುತ್ತಿದ್ದೇನೆ.

ವರ್ಷೆರಡು ವರ್ಷಗಳಲ್ಲೇ ಈ ಶರೀರ ಬಿದ್ದುಹೋಗುವುದು ಎಂದೆಲ್ಲಾ ನೀವು ಆಗಾಗ ಹೇಳುತ್ತಿರುವಿರೆಂದು ನಾವೆಲ್ಲಾ ಕೇಳಿದ್ದೇವೆ. ನಾವಿಬ್ಬರೂ ಒಟ್ಟಿಗೇ ಜೈಲಿನಲ್ಲಿದ್ದಾಗ ವಿಚಾರ ವಿನಿಮಯ ನಡೆಸುತ್ತಾ ಇದ್ದದ್ದು ನಿಮಗೆ ನೆನಪಿರಲು ಸಾಕು. ಅದರ ಆಧಾರದ ಮೇಲೆ ಹೇಳುವುದಾದರೆ ನಾನು ಸತ್ತ ಮೇಲೆ ಹತ್ತು ವರ್ಷಗಳ ವರೆಗೂ ನೀವು ಮರಣದ ಲೆಕ್ಕ ಹಾಕಬೇಡಿ.

ಮರಣಾಧೀನನಾಗುವ ಬದಲು ಮರಣದ ಅಖಂಡವಾದ ಅನುಭವವನ್ನು ಪಡೆದು ಅದರ ಹುಮ್ಮಸ್ಸಿನಲ್ಲಿಯೇ ನಾನು ಇದ್ದುಬಿಡುತ್ತೇನೆ. ಮರಣದ ಬಗೆಗೆ ಜನರಿಗೆ ಸರಿಯಾದ ಕಲ್ಪನೆಯೇ ಇಲ್ಲ. ಒಂದು ವೇಳೆ ಇದ್ದಿದ್ದರೆ ಮರಣವು ವಿಶ್ವಾತ್ಮನ ಒಂದು ಸುಂದರವಾದ, ಪ್ರೇಮಲವಾದ ಅನುಭೂತಿಯೆಂಬುದರ ಅರಿವು ಅವರಿಗಾಗುತ್ತಿತ್ತು.

ಬಾಬಾ: ಹೌದು. ಆ ಮಾತನ್ನು ನಾನೂ ಒಪ್ಪಿಕೊಳ್ಳುತ್ತೇನೆ. ನಾನು ಸ್ವಲ್ಪದರಲ್ಲೇ ಗಗನವಿಜ್ಞಾನದ ಬಗೆಗೆ ನಿಮ್ಮಿಂದ ತಿಳಿದುಕೊಂಡೆ. ನೀವು ಮೊದಲು ತಾರೆಗಳೊಡನೆ ತಾದಾತ್ಮ್ಯವನ್ನು ಸ್ಥಾಪಿಸಿದಿರಿ. ಅದು ನಿಮ್ಮ 'ಮಾತ-

ತೋ ಮಹೀಯಾನಿನಲ್ಲಿಯ ಪ್ರಯೋಗವಾಗಿತ್ತು. ಈಗ ಸೂಕ್ಷ್ಮ ಜೀವಜಂತುಗಳೊಡನೆಯೂ ತಾದಾತ್ಮ್ಯವನ್ನು ಸ್ಥಾಪಿಸಲು ಪ್ರಯತ್ನಿಸುತ್ತಿದ್ದೀರಿ. ಇದು ನಿಮ್ಮ ಅಣೋರಣೀಯಾನಿನಲ್ಲಿಯ ಪ್ರಯೋಗವಾಗಲಿದೆ.

ಕಾಕಾ: ಈ ದಿನಗಳಲ್ಲಿ ಸರಕಾರದ ಬಗೆಗೆ ಟೀಕೆ ಟಿಪ್ಪಣಿಗಳು ಕೇಳಿಬರುತ್ತಾ ಇವೆ. ಸರಕಾರ ಸರಿಯಾಗಿ ನಡೆಯುತ್ತಾ ಇಲ್ಲ; ಈ ಬಗೆಗೆ ನೀವು ಗಾಂಧೀವಾದಿಗಳು ಏನಾದರೂ ಮಾಡಲೇಬೇಕು ಎಂದು ಜನರು ನನಗೆ ಹೇಳುವುದುಂಟು. ಆಗ ನಾನು, ನಮ್ಮ ಧುರೀಣರೆಂದರೆ ವಿನೋಬಾ ಮಾತ್ರ. ಗಾಂಧೀಜಿಯೆ ಅವರನ್ನು ಮುಖಂಡರನ್ನಾಗಿ ನಿಯಮಿಸಿದರು. ಹೀಗಿರುವಾಗ ನೀವು ಅವರ ಬಳಿ ಹೋಗಿ ಈ ಮಾತನ್ನೇಕೆ ಕೇಳುವುದಿಲ್ಲ? ಎಂದು ಕೇಳುತ್ತೇನೆ.

ಅಲ್ಲದೆ ಮುಂದುವರೆದು, ಈಗಿರುವುದು ಪ್ರಜಾರಾಜ್ಯ. ಅಧಿಕಾರದ ಸೂತ್ರಗಳೆಲ್ಲ ಇರುವುದು ಜನರಿಂದ ಚುನಾಯಿತರಾದ ಪ್ರತಿನಿಧಿಗಳ ಕೈಯಲ್ಲಿ. ಹೀಗಾಗಿ, ಕೆಲಸ ಮಾಡುವುದು ಸರಕಾರ, ಟೀಕೆ ಮಾಡುವುದು ಮಾತ್ರ ಜನರಿಗೆ ಸೇರಿದ್ದು ಎಂಬ ವಿಚಾರ ಎಲ್ಲ ಕಡೆಗೆ ಬೆಳೆದಿದೆ. ಇದು ಪ್ರಜೆಗಳಿಂದ ನಿರ್ಮಿತವಾದಂತಹ ಸರಕಾರ. ಆದ್ದರಿಂದ ನಾವೆಲ್ಲ ಸೇರಿ ಅದನ್ನು ಬಲಪಡಿಸಬೇಕು. ಅದರ ಪ್ರತಿಷ್ಠೆಯನ್ನು ಹೆಚ್ಚಿಸಬೇಕು. ಆದರೆ ಹದ್ದು ಮೀರಿ ಅಧಿಕಾರ ಬೆಳೆಯಲು ಮಾತ್ರ ಸರಕಾರಕ್ಕೆ ಯಾವ ಅವಕಾಶವನ್ನೂ ಕೊಡಬಾರದು. ಎಲ್ಲ ಸಾರ್ವಜನಿಕ ಕಾರ್ಯಗಳೂ ಸಾರ್ವಜನಿಕ ಸಂಸ್ಥೆಗಳಿಂದಲೇ ನಿರ್ವಹಿಸಲ್ಪಡುವಂತಾಗಬೇಕು.

ನಿಜವಾಗಿಯೆಂದರೆ ಹೀಗೆ ಮಾಡಿದ ಕೆಲಸಗಳೇ ಪರಿಣಾಮಕರವಾಗಬಲ್ಲವು. ಆದ್ದರಿಂದ ಸಂಪತ್ತಾಗಲಿ ಅಧಿಕಾರವಾಗಲಿ ಸರಕಾರದ ಕೈಲಿ ಹೆಚ್ಚು ಹೆಚ್ಚಾಗಿ ಇರಕೂಡದು. ಸಾರ್ವಜನಿಕ ಸಂಸ್ಥೆಗಳು ಮಾನವತೆಯ ಸೇವೆ ಮಾಡಲಿ. ಹಾಗೆ ನೋಡಿದರೆ ಭಾರತಕ್ಕಷ್ಟೆ ನಮ್ಮ ದೃಷ್ಟಿಯನ್ನು ಸೀಮಿತಗೊಳಿಸಿಕೊಳ್ಳದೆ ಅದರ ಹೊರಗೂ ನಾವು ಮಾನವತೆಗಾಗಿ ಶ್ರಮಿಸಬೇಕು. ಈ ಕೆಲಸವನ್ನು ರಾಜಕೀಯಕ್ಕೆ ಸೇರದ ಸಾರ್ವಜನಿಕ ಜೀವನದಲ್ಲಿರುವ ಮುಖಂಡರೇ ವಹಿಸಿಕೊಳ್ಳಬೇಕು.

ಬಾಬಾ: ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವನ್ನು ನೂರಕ್ಕೆ ನೂರರಷ್ಟು ಒಪ್ಪಿಕೊಳ್ಳುತ್ತೇನೆ. ✡

('ನವನೀತ'ದಿಂದ)

---

ವಿನೋಬಾ ಭಾಷಾಭೇದಗಳಂತಹ ಸಂಕುಚಿತತೆಯ ಮೇರೆಯನ್ನು ಎಂದೋ ಮೀರಿದ್ದರು. ೨೫ ವರ್ಷಗಳ ಹಿಂದೆ ಅವರು ಭೂದಾನ ಪಾದಯಾತ್ರೆ ಕೈಕೊಂಡಾಗ ಕನ್ನಡ ನಾಡಿಗೂ ಬಂದು ಹೋಗಿದ್ದಾರೆ. ಆಗ ಅವರ ಬೆಳಗಾಂವಿ ಪ್ರಾರ್ಥನಾ ಸಭೆಯಲ್ಲಿ ಅಲ್ಲಿಯ ಕಟ್ಟಾ ಮರಾಠಿ ಧುರೀಣನೊಬ್ಬ ಕೇಳಿದ ಪ್ರಶ್ನೆಗೆ ಅವರಿತ್ತ ಉತ್ತರ ಮರಾಠಿಗರ ಬಾಯಿ ಮುಚ್ಚಿಸಿತು.

*
* *

ವಿನೋಬಾರ ತಾಯಿ ಧಾರವಾಡ ಜಿಲ್ಲೆಯ ಹಾವನೂರವರು. ತಮ್ಮ ಬಾಲ್ಯವನ್ನು ವಿನೋಬಾ ಆ ಹಳ್ಳಿಯಲ್ಲೇ ಕಳೆದರು.

*
* *

೧೯೭೫ ರಲ್ಲಿ ದೇಶದಲ್ಲಿ ತುರ್ತು ಪರಿಸ್ಥಿತಿ ಘೋಷಿಸಲ್ಪಟ್ಟಾಗ ಅದನ್ನು 'ಅನುಶಾಸನಪರ್ವ' ಎಂದು ಕರೆದು ವಿನೋಬಾ ಆಶೀರ್ವದಿಸಿ 'ಸರಕಾರಿ ಸಂತ'ನೆಂಬ ಟೀಕೆಗೂ ಗುರಿಯಾದರು.

# 'ವಿಮಾನಶಾಸ್ತ್ರಂ' ಭಾರದ್ವಾಜರದೇ?

ಎಸ್. ಬಾಲಚಂದ್ರರಾವ್

ನವೆಂಬರ್ ೧೯೮೨ ರ "ಕಸ್ತೂರಿ" ಯಲ್ಲಿ ಪ್ರಕಟವಾದ "ಭಾರದ್ವಾಜರ ವಿಮಾನಶಾಸ್ತ್ರಮ್" ಎಂಬ ಲೇಖನವು ಬಹಳಷ್ಟು ಸಮಸ್ಯೆಗಳಿಗೆ ಅವಕಾಶ ಒದಗಿಸಿಕೊಟ್ಟಿದೆ. ಸಂಸ್ಕೃತದ ಕೆಲವು ಗ್ರಂಥಗಳು ಭಾರತೀಯರು ವಿಜ್ಞಾನ ಮತ್ತು ಯಂತ್ರರಚನೆಯಲ್ಲಿಯೂ ಮುಂದುವರೆದಿದ್ದರೆಂಬುದನ್ನು ತೋರಿಸುತ್ತದೆ ಎಂಬ ಲೇಖಕರ ಅಭಿಪ್ರಾಯ ವಿಮಾನಶಾಸ್ತ್ರಕ್ಕೆ ನಿಜವಾಗಿಯೂ ಅನ್ವಯಿಸುತ್ತದೆಯೆ? ಪ್ರಾಚೀನ ಭಾರತೀಯರು ಗಣಿತ ಮತ್ತು ಖಗೋಲಶಾಸ್ತ್ರಗಳಲ್ಲಿ ಅತ್ಯದ್ಭುತವಾದ ಸಾಧನೆ ಮಾಡಿದ್ದರು ಎಂಬುದನ್ನು ಸಪ್ರಮಾಣವಾಗಿ ಸಾಧಿಸಬಹುದು. ಇಂತಹ ಹೆಗ್ಗಳಿಕೆಯನ್ನು ಖ್ಯಾತ ಗಣಿತದ ಇತಿಹಾಸಕಾರರೂ ಒಪ್ಪಿಕೊಂಡಿದ್ದಾರೆ.

ಭಾಗಶಃ ದೊರೆತ ಈ ಪ್ರಕರಣವು [ಭಾರದ್ವಾಜರ 'ವಿಮಾನಶಾಸ್ತ್ರಮ್'] ಆ ಕಾಲದಲ್ಲಿ ಭಾರತೀಯರಿಗೆ ವಿಮಾನ ರಚನೆಯ ಕಲೆಯು ಕರಗತವಾಗಿತ್ತೆಂಬುದನ್ನು ನಿಸ್ಸಂಶಯವಾಗಿ ತೋರಿಸುತ್ತದೆ ಎಂಬ ಲೇಖಕರ ಹೇಳಿಕೆಯು ಪ್ರಶ್ನಾರ್ಹ. ಭಾರದ್ವಾಜರ ವಿಮಾನಶಾಸ್ತ್ರದ ಬಗ್ಗೆ ಕೆಲವು ವರ್ಷಗಳ ಹಿಂದೆ ಬೆಂಗಳೂರಿನಲ್ಲಿ ಇರುವ ಭಾರತೀಯ ವಿಜ್ಞಾನ ಮಂದಿರದ ವಿಜ್ಞಾನಿಗಳಾದ ಹೆಚ್. ಎಸ್. ಎಸ್. ಮುಕುಂದ [illegible] ಗ್ರಂಥವನ್ನು ಈ ಕೆಳಗೆ ಸವಿಸ್ತಾರವಾಗಿ ವಿವರಿಸಿದೆ.

"ಬೃಹತ್ ವಿಮಾನಶಾಸ್ತ್ರ" ಎಂಬ ಒಂದು ಸಂಸ್ಕೃತ ಗ್ರಂಥ ಹಿಂದಿ ಅನುವಾದದೊಂದಿಗೆ ೧೯೫೯ ರಲ್ಲಿ ಪ್ರಕಟವಾಯಿತು. ಕೆಲವು ವರ್ಷಗಳ ನಂತರ, "ವೈಮಾನಿಕ ಶಾಸ್ತ್ರ" ಎಂಬ ಇನ್ನೊಂದು ಸಂಸ್ಕೃತ ಗ್ರಂಥ ಇಂಗ್ಲಿಷ್ ಅನುವಾದದೊಂದಿಗೆ ಮೈಸೂರಿನಲ್ಲಿ ಪ್ರಕಟವಾಯಿತು. ಈ ಎರಡು ಗ್ರಂಥಗಳಲ್ಲಿಯೂ ಸಂಸ್ಕೃತ ಶ್ಲೋಕಗಳು ಒಂದೇ ಆಗಿವೆ. ಎರಡನೇ ಗ್ರಂಥದ ಇಂಗ್ಲಿಷ್ ಅನುವಾದದ ಭಾಗದಲ್ಲಿ ಮಾತ್ರ ಅನೇಕ ರೀತಿಯ ವಿಮಾನಗಳ ರಚನೆಗೆ ಸಂಬಂಧಪಟ್ಟಂತೆ ರೇಖಾಚಿತ್ರಗಳನ್ನು ಸೇರಿಸಲಾಗಿದೆ. ಈ ಎರಡು ಗ್ರಂಥಗಳಲ್ಲಿಯೂ ಇರುವ ಹೇಳಿಕೆಯ ಪ್ರಕಾರ ವಿಮಾನಶಾಸ್ತ್ರವು ಋಷಿ ಭಾರದ್ವಾಜರದೆಂದು ಹೇಳಲಾದ 'ಯಂತ್ರ ಸರ್ವಸ್ವ'ದ ಒಂದು ಭಾಗ ಮಾತ್ರ.

ಮೈಸೂರಿನಲ್ಲಿ ಪ್ರಕಟವಾದ ವೈಮಾನಿಕ ಶಾಸ್ತ್ರದ ಮುನ್ನುಡಿಯಲ್ಲಿ ಹೇಳಿರುವಂತೆ ಆನೆಕಲ್ ಊರಿನ ಪಂಡಿತ ಸುಬ್ಬರಾಯಶಾಸ್ತ್ರಿಗಳು ಶ್ರೀಮಾನ್ ಜಿ. ವೆಂಕಟಾಚಲ ಶರ್ಮಾ ಎಂಬವರಿಗೆ ಆ ಗ್ರಂಥದ ಸಂಸ್ಕೃತ ಶ್ಲೋಕಗಳನ್ನು ಹೇಳಿ ಬರೆಸಿದರು. ಅನಂತರ ಈ ರೀತಿ ಬರೆಸಿದ [illegible] ಶಾಸ್ತ್ರಗ್ರಂಥದ ಅನೇಕ ಪ್ರತಿಗಳನ್ನು ತಯಾರು ಮಾಡಿ ಬೇರೆ ಬೇರೆ ಗ್ರಂಥಾಲಯಗಳಿಗೆ

ಕೆಳುಹಿಸಿಕೊಡಲಾಯಿತು. ಹೀಗೆ ಒಂದು ಪ್ರತಿಯು ೧೯೪೪ ರಲ್ಲಿ ಬರೋಡ ವಿಶ್ವವಿದ್ಯಾನಿಲಯದ ಗ್ರಂಥಾಲಯವನ್ನೂ ತಲುಪಿ ಆ ಪ್ರತಿಯನ್ನು ಆಧರಿಸಿಯೇ ಹಿಂದಿ ಅನುವಾದದೊಂದಿಗೆ 'ಬೃಹತ್ ವಿಮಾನಶಾಸ್ತ್ರ'ವು ಪ್ರಕಟವಾಯಿತು. ಈ ಪ್ರತಿಯಲ್ಲಿ ರೇಖಾಚಿತ್ರಗಳು ಇಲ್ಲ. ಆದರೆ, ಮೈಸೂರಿನಿಂದ ಪ್ರಕಟವಾದ ಗ್ರಂಥದಲ್ಲಿ ವಿಮಾನಗಳ ರಚನೆಗೆ ಸಂಬಂಧಪಟ್ಟಂತೆ ಅನೇಕ ರೇಖಾಚಿತ್ರಗಳಿವೆ.

ಸಂಶೋಧನೆಯಿಂದ ತಿಳಿದುಬಂದಿರುವ ಒಂದು ಗಮನಾರ್ಹವಾದ ಅಂಶವೆಂದರೆ- ವೈಮಾನಿಕ ಶಾಸ್ತ್ರದಲ್ಲಿ ಕೊಟ್ಟಿರುವ ರೇಖಾ ಚಿತ್ರಗಳನ್ನು ಸುಮಾರು ೧೯೦೦ ರಿಂದ ೧೯೧೯ರ ಕಾಲಾವಧಿಯಲ್ಲಿ ಪಂ. ಸುಬ್ಬರಾಯಶಾಸ್ತ್ರಿಗಳು ಬರೆಸಿದರು. ರೇಖಾಚಿತ್ರಗಳೆಲ್ಲ ಆಧುನಿಕ ಶೈಲಿಯಲ್ಲಿದ್ದು, ಅವುಗಳನ್ನು ರಚಿಸಿದವರು ಆಗ ಬೆಂಗಳೂರಿನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ಡ್ರಾಫ್ಟ್ಸ್‌ಮನ್ ಆಗಿ ಕೆಲಸ ಮಾಡುತ್ತಿದ್ದ ಎಲ್ಲಪ್ಪ ಎಂಬುವರು.

ಇನ್ನು ವಿಮಾನಶಾಸ್ತ್ರದ ಶೈಲಿಯಾದರೋ ಬಹಳ ಆಧುನಿಕವೂ ಸರಳವೂ ಆದ ಸಂಸ್ಕೃತ ಭಾಷೆಯಲ್ಲಿದ್ದು, ಅನುಷ್ಟುಪ್ ಛಂದಸ್ಸಿನಲ್ಲಿ ರಚಿಸಲ್ಪಟ್ಟಿದೆ. ಸಂಶೋಧನೆಯ ಅಂಗವಾಗಿ ಆರಿಸಿಕೊಂಡ ೫೦ ಶ್ಲೋಕಗಳ ಪೈಕಿ ಕೇವಲ ೩ ಶ್ಲೋಕಗಳು ವೇದಗಳಿಗೆ ಸಂಬಂಧಪಟ್ಟ ಛಂದಸ್ಸುಗಳಲ್ಲಿ ರಚಿಸಲ್ಪಟ್ಟವು ಹಾಗೂ ೩೫೮ ಪದಗಳ ಪೈಕಿ ಕೇವಲ ೬ ಪದಗಳು ಮಾತ್ರ ವೈದಿಕ ಶೈಲಿಯಲ್ಲಿವೆ ಎಂದು ಕಂಡುಬಂದಿದೆ. ಈ ಎಲ್ಲಾ ಅಂಶಗಳಿಂದ ಖಚಿತವಾಗಿ ತಿಳಿದುಬರುವ ವಿಷಯವೆಂದರೆ ವಿಮಾನಶಾಸ್ತ್ರವು ಇತ್ತೀಚೆಗೆ (ಈ ಶತಮಾನದಲ್ಲೇ) ರಚಿಸಲ್ಪಟ್ಟ ಗ್ರಂಥ ಮತ್ತು ಇಂದಿನ ವಿಜ್ಞಾನಕ್ಕೆ ಸಂಬಂಧಪಟ್ಟಂತೆ ಅರ್ಧಂಬರ್ಧ ಜ್ಞಾನವನ್ನು ಉಪಯೋಗಿಸಿಕೊಂಡು ರೇಖಾ ಚಿತ್ರಗಳನ್ನೂ ವಿವರಣೆಗಳನ್ನೂ ಕೊಡಲಾಗಿದೆ.

ಇಷ್ಟಲ್ಲದೆ, ಯಾಂತ್ರಿಕ ದೃಷ್ಟಿಯಿಂದ ಹೇಳುವುದಾದರೆ, "ವಿಮಾನಶಾಸ್ತ್ರವ"ದಲ್ಲಿ ವಿವರಿಸಲಾದ ವಿಮಾನಗಳ ರಚನೆಯು ಬಹಳ ಅವೈಜ್ಞಾನಿಕವಾಗಿದೆ. ಇಲ್ಲಿ ಹೇಳಲಾಗಿರುವ ಪದಾರ್ಥಗಳು ಎಲ್ಲಾ ಕಾಲ್ಪನಿಕವಾಗಿದ್ದು, ಅವಶ್ಯವಾದ ಯಾವ ರಾಸಾಯನಿಕ ಗುಣಗಳೂ ಅವುಗಳಿಗಿಲ್ಲ. ವಿವರಿಸಲ್ಪಟ್ಟ ವಿಮಾನಗಳು ಆಕಾಶದಲ್ಲಿ ಹಾರುವುದಿರಲಿ, ಭೂಮಿಯ ಮೇಲೆ ವಸ್ತುತಃ ರಚಿಸಲು ಕೂಡ ಬರುವುದಿಲ್ಲ! ನ್ಯೂಟನ್ನನ ನಿಯಮಗಳನ್ನು ಅವು ನಿರ್ದಾಕ್ಷಿಣ್ಯವಾಗಿ ಉಲ್ಲಂಘಿಸುತ್ತವೆ.

ಆಧುನಿಕ ವಿಜ್ಞಾನದ ಅಲ್ಪ ಸ್ವಲ್ಪ ಜ್ಞಾನವನ್ನು ಉಪಯೋಗಿಸಿಕೊಂಡು, ಸಂಸ್ಕೃತದಲ್ಲಿ ಒಂದು ಗ್ರಂಥವನ್ನು ರಚಿಸಿ ಆ ಗ್ರಂಥ ರಚನೆಯ ಕೀರ್ತಿಯನ್ನು ವೇದಗಳಿಗೋ ಅಥವಾ ಒಬ್ಬ ಕಾಲ್ಪನಿಕ 'ಭಾರದ್ವಾಜ'ನಿಗೋ 'ಭೃಗು ಮಹರ್ಷಿ'ಗಳಿಗೋ ಅರ್ಪಿಸಿ, ಜನಸಾಮಾನ್ಯರಲ್ಲಿ ತಪ್ಪು ನಂಬಿಕೆ ವಿಶ್ವಾಸಗಳನ್ನು ಹುಟ್ಟಿಸುವ ಕೆಲವು ಸಂಪ್ರದಾಯವಾದಿಗಳ ಪ್ರವೃತ್ತಿಯು ಶೋಚನೀಯ ಮಾತ್ರವಲ್ಲ, ಖಂಡನೀಯವೂ ಆಗಿದೆ. ಪ್ರಾಚೀನ ಗ್ರಂಥಗಳಲ್ಲಿ ಹೇಳಿರುವುದೆಲ್ಲ ವೈಜ್ಞಾನಿಕ ಮತ್ತು ಉಚ್ಚ ಮಟ್ಟದ ಜ್ಞಾನವೆಂದು ನಂಬುವುದು ಮತ್ತು ಇತರರನ್ನೂ ನಂಬಿಸುವುದು ಸಾರ್ವಕಾಲೀನ ಮತ್ತು ಸಾರ್ವತ್ರಿಕ ಜ್ಞಾನಕ್ಕೆ ಎಸಗುತ್ತಿರುವ ಅಪಚಾರವೇ ಸರಿ. "ನೂರು ಶ್ರುತಿ–ಗ್ರಂಥಗಳೂ ಅಗ್ನಿಯು ತಣ್ಣಗಿದೆ ಎಂದಾಗಲಿ ಅಥವಾ ಪ್ರಕಾಶಮಾನವಾಗಿಲ್ಲ ಎಂದಾಗಲಿ ಹೇಳಿದರೆ, ಅವು ಪ್ರಾಮಾಣ್ಯವನ್ನು ಹೊಂದಲಾರವು" (ನ ಹಿ ಶ್ರುತಿಶತಮಪಿ ಶೀತೋಗ್ನಿಃ ಅಪ್ರಕಾಶೋ ವಾ ಇತಿ ಬ್ರುವತ್ ಪ್ರಾಮಾಣ್ಯಮುಪೈತಿ) ಎಂಬ ಆದಿ ಶಂಕರರ ವಾಣಿಯನ್ನು ಜ್ಞಾಪಿಸಿಕೊಳ್ಳೋಣ. "ಪುರಾಣಮಿತ್ಯೇವ ನ ಸಾಧು ಸರ್ವಂ, "ಎಂಬುದಾಗಿ ಕವಿಕುಲಗುರುವಾದ ಕಾಳಿ–ದಾಸನೂ ಹೇಳಿಲ್ಲವೇ ? ✿



ನವೋದಯ ಕಾಲದಲ್ಲಿ ಕನ್ನಡವನ್ನು
ಉದ್ಧರಿಸಿದ ಪುಣ್ಯಪುರುಷರು
ಒಬ್ಬೊಬ್ಬರಾಗಿ ಕಣ್ಮರೆಯಾಗುತ್ತಿದ್ದಾರೆ

# ಆನಂದವಂಚಿತ 'ಆನಂದಕಂದ'

**ನಾ. ಅ. ಹೊಸಕೇರಿ**

ಬೆಟಗೇರಿಯವರೆ, ನೀವು ಆನಂದಕಂದ ಎಂದು ಏಕೆ ಹೆಸರಿಟ್ಟುಕೊಂಡಿರಿ? ದೈವ ನಿಮ್ಮ ಆನಂದವನ್ನೆಲ್ಲ ಕೊಂದುಹಾಕಿದೆ," ಎಂದು ಸಾಂತ್ವನದ ನುಡಿಯನ್ನು ಆಡಿದವರು ಅವರ ನಿಕಟವರ್ತಿಗಳಲ್ಲಿ ಒಬ್ಬರು: ಸಂದರ್ಭ ೨೮ ವರ್ಷಗಳ ಹಿಂದೆ– ಒಬ್ಬರ ಮೇಲೊಬ್ಬರಂತೆ ಬೆಟಗೇರಿ ಅವರ ಮಡದಿ, ಮಗಳು ಮತ್ತು ಅವರ ವಿಶ್ವಾಸಪಾತ್ರನಾಗಿದ್ದ ಜಯಂತಿಯ ಪರಿಚಾರಕ ಹನುಮಂತ ಇವರೆಲ್ಲರನ್ನೂ ಬೆಟಗೇರಿಯವರು ಕಳೆದುಕೊಂಡಾಗ. ಮುದುಡಿ ಹೋಗಿದ್ದ ಬೆಟಗೇರಿಯವರು ನಿಟ್ಟುಸಿರು ಸುಯ್ಯುತ್ತ ಬಾಡಿದ ಮೊಗದಲ್ಲಿ ಇಲ್ಲದ ನಗೆಯನ್ನು ಎಳೆದು ತರಲು ಹೆಣಗುತ್ತಿದ್ದ ಆ ಅಂದಿನ ಚಿತ್ರ ಇನ್ನೂ ನನ್ನ ಕಣ್ಣ ಮುಂದೆ ಕಟ್ಟಿನಿಂತಿದೆ. ಕಾವ್ಯನಾಮ 'ಆನಂದಕಂದ'ನೆಂದಾದರೂ ಜೀವನದಲ್ಲಿ ಅವರು ಕಂಡ ಆನಂದ ಅಷ್ಟಕ್ಕಷ್ಟೇ. ಒಳ್ಳೊಳ್ಳೆಯ ಆನಂದಮಯ ಸಮಯದಲ್ಲಿಯೂ ದೈವ ಅವರಿಗೆ ಅಡ್ಡಗಾಲು ಹೊಡೆದ ಅನೇಕ ಸಂದರ್ಭಗಳನ್ನು ನಾನು ಬಲ್ಲೆ.

ಚವಲದಲ್ಲೂ ಡವಲು ಎಂಬ ಈ ಹಿಂದಿನ ಕಾಲದಲ್ಲಿ ಪ್ರಚಲಿತವಿದ್ದ ನಾಣ್ನುಡಿ ಕವಿಭೂಷಣರ ವೇಷ ಭೂಷಣಗಳಿಗೆ ಚೆನ್ನಾಗಿ ಅನ್ವಯಿಸುತ್ತದೆ. ನಿರಾಡಂಬರವಾಗಿದ್ದರೂ ತುಂಬ ಅಚ್ಚುಕಟ್ಟಾಗಿದ್ದ ಅವರ ಉಡುಗೆ ತೊಡಿಗೆ 'ಡೌಲು' ಎನಿಸುತ್ತಿತ್ತು. ದಪ್ಪ ಖಾದೀ ಧೋತರವನ್ನು ತಿದ್ದಿ ತೀಡಿ ಉಟ್ಟು, ಅಷ್ಟೇ ದಪ್ಪ ಖಾದಿ ಬಿಳಿ ಅಂಗಿಯನ್ನು ತೊಟ್ಟು ಮೇಲೊಂದು ಸರಿಯಾಗಿ ಮಡಿಕೆ ಹಾಕಿದ ಶಾಲನ್ನು ಹೊದ್ದು ಕವಿಭೂಷಣರು ಎಂತಹ ಸಿರಿವಂತರ ವೇಷ ಭೂಷಣಗಳ ಮಧ್ಯದಲ್ಲಿಯೂ ಎದ್ದು ಕಾಣುತ್ತಿದ್ದರು. ಅವರ ಕ್ರಾಪ್ ಕಟ್ ಮತ್ತು ಬೈತಲೆಯೂ ಅಷ್ಟೇ ವಿಶಿಷ್ಟವಾದದ್ದು. ಆನಂದಕಂದರು ಬಹಳ ಹಿಂದೆ ಬರೆದ ಕತೆಯೊಂದರಲ್ಲಿ 'ಕ್ರಾಪ್' ಬಗ್ಗೆ ಸುಂದರ ವಿವರಣೆ ಕೊಟ್ಟಿದ್ದಾರೆ. ಬಹುಶಃ ಅದು ಸ್ವಾನುಭವವಿರಬೇಕು. ಹಳ್ಳಿಯ ಹುಡುಗನೊಬ್ಬ ಪಟ್ಟಣಕ್ಕೆ ಬರುತ್ತಾನೆ. ನಗರದ ಕ್ರಾಪ್ ಪದ್ಧತಿಗೆ ಮಾರುಹೋಗಿ ತಲೆಗೂದಲು ಅದರಂತೆ ಕತ್ತರಿಸಿಕೊಳ್ಳುತ್ತಾನೆ. ನಾಲ್ಕಾರು ತಿಂಗಳ ನಂತರ ಹಳ್ಳಿಗೆ ಮರಳಿದಾಗ ಅಲ್ಲಿಯ ನಾಪಿತನಿಗೆ ಇವನ ಕೂದಲು ಕತ್ತರಿಸುವುದು ಹೊಸ ವಿಷಯವಾಗುತ್ತದೆ. ಆಗ ಕ್ರಾಪ್ ಕತ್ತರಿಸುವ ಬಗೆಯನ್ನು ಅವನು ಈ ರೀತಿ ವಿವರಿಸಿ ತಿಳಿಸುತ್ತಾನೆ. "ಇಲ್ಲಿ ಚವಲಿಯಷ್ಟು ಆ ಮೇಲೆ ಪಾವಲಿಯಷ್ಟು ಆ ಮೇಲೆ ಎಂಟಾಣೆಯಷ್ಟು ಕೂದಲು ಉಳಿಸುತ್ತಾ ಹೋಗು," ಎಂದು. ಬೆಟಗೇರಿಯವರನ್ನು ನಾನು ನೋಡುತ್ತ ಬಂದ ಕಾಲದಿಂದ ಕೊನೆಯವರೆಗೂ ಅವರು ತಮ್ಮ



ಮೊದಲಿನ ನಮುವನ್ನು ಕಾಪಾಡಿಕೊಂಡು ಬಂದು ನೇರವಾದ ಬೈತಲೆ ತೆಗೆದುಕೊಂಡೇ ಬದುಕಿದರು.

‘ಚವಲಿಯಲ್ಲಿ’ ಎಂಬ ಶಬ್ದದ ಅರ್ಥ ಈಗಿನವರಿಗೆ ಆಗುವುದಿಲ್ಲ. ಚವಲಿ ಎಂದರೆ ಈಗಿನ ನಮ್ಮ ಪೈಸೆಯ ಆಕಾರದ ಬೆಳ್ಳಿಯ ಅಂಶವಿದ್ದ ನಾಣ್ಯ. ರೂಪಾಯಿಯಲ್ಲಿ ಇಂತಹ ಎಂಟು ನಾಣ್ಯಗಳು. ಪಾವಲಿ ಎಂದರೆ ಇಂದಿನ ೨೫ ಪೈಸೆಗೆ ಸರಿಸಮ. ಚವಲಿಯಷ್ಟು, ಪಾವಲಿಯಷ್ಟು ದುಡಿಮೆಯಾದರೆ ಸಾಕು ಎನ್ನುವಂತಿದ್ದ ಅಂದಿನ ದಿನಗಳಲ್ಲಿ ಚವಲಿಯಲ್ಲೇ ಡೌಲು ಮಾಡಿಕೊಳ್ಳಲು ಅನುಕೂಲ ಇತ್ತು. ಸಾಮಾನ್ಯವಾಗಿ ವ್ಯಕ್ತಿಯೊಬ್ಬನ ಜೀವನದಲ್ಲಿ ಆರ್ಥಿಕ

ಸ್ಥಿತ್ಯಂತರಗಳುಂಟಾದಂತೆ ಅವನ ವೇಷ ಭೂಷಣಗಳಲ್ಲಿಯೂ ಬದಲಾವಣೆಯನ್ನೂ ಜೀವನದ ಮೌಲ್ಯಗಳಲ್ಲಿ ಏರು ಪೇರುಗಳನ್ನೂ ಕಾಣಬಹುದು. ಬೆಟಗೇರಿಯವರ ಜೀವನದಲ್ಲಿ ಹೀಗಾಗಲಿಲ್ಲ. ಮೊದಲಿನಿಂದಲೂ ಕೊನೆಯವರೆಗೂ ಅವರ ವೇಷ ಭೂಷಣದಂತೆ ಜೀವನ ಮೌಲ್ಯಗಳು ಏಕರೀತಿಯಾಗಿದ್ದುದಲ್ಲದೆ ಅಚ್ಚುಕಟ್ಟಾಗಿ ಉಳಿದು ಮೋರೆ ನೋಡಿ ಮಣೆ ಹಾಕುವುದು ಅವರಿಗೆ ಒಗ್ಗಲಿಲ್ಲ.

ಅಚ್ಚುಕಟ್ಟುತನ ಅವರಲ್ಲಿ ಎಳೆತನದಿಂದಲೇ ಮೈಗೂಡಿ ಬಂದಿತ್ತು ಎಂಬುದನ್ನು ಅವರ ಪ್ರಾರಂಭದ ಸಾಹಿತ್ಯ ಕೃತಿಗಳಲ್ಲಿಯೇ ನಾವು ಕಂಡುಕೊಳ್ಳಬಹುದು. 'ಮುದ್ದನ ಮಾತು'ಗಳಲ್ಲಿಯೇ ಆಗಲಿ, ಅವರ ಪ್ರಾರಂಭದ ಕತೆ ಕವನಗಳಲ್ಲಿಯೇ ಆಗಲಿ, ಶಬ್ದಸಂಪತ್ತನ್ನು ಬಳಸುವ ರೀತಿ ಅತ್ಯಂತ ಸಮರ್ಪಕವಾದುದನ್ನು ನೋಡಬಹುದಾಗಿದೆ. ಬರವಣಿಗೆಯಲ್ಲಿ ಸಡಿಲು ಇರುತ್ತಿರಲಿಲ್ಲ. ಶಬ್ದಗಳಿಗಾಗಿ ತಡವರಿಸಿ ಅವರ ಬರವಣಿಗೆ ಎಂದೂ ಕುಂಟುತ್ತಿರಲಿಲ್ಲ ಎಂಬುದನ್ನು ಅವರ ಜೀವನದ 'ತೇಜೀ' ಕಾಲದ ೨೦ ವರ್ಷಗಳ ನಿಕಟ ಸಂಬಂಧದಲ್ಲಿ ಕಂಡುಕೊಂಡಿದ್ದೇನೆ. ಇನಿದಾದ ಈ ಕನ್ನಡದ ನುಡಿಯನ್ನು ಅವರು ಎನಿತೆನಿತು ಅದಕು ಇದಕು ಎದಕೂ ಬಳಸಿಕೊಂಡಿದ್ದಾರೆ ಎಂಬುದನ್ನು ಓದಿ ನೋಡಿಯೆ ಸವಿಯಬೇಕು.

ಅವರ ಜೀವನದ ತೇಜೀ ಕಾಲದಲ್ಲಿ ಅಂದರೆ ೧೯೪೪ರಿಂದ ೧೯೬೪ರ ವರೆಗಿನ ಅವಧಿಯಲ್ಲಿ– ನಮ್ಮ ಅವರ ಸಂಪರ್ಕ ದಿನ ನಿತ್ಯದ್ದಾಗಿತ್ತು. 'ಜಯಂತಿ' ನಮ್ಮ ಮುದ್ರಣಾಲಯದಲ್ಲಿ ಮುದ್ರಣಗೊಳ್ಳಲು ಪ್ರಾರಂಭವಾದ ನಂತರ ಅವರ ನಮ್ಮ ಸಂಬಂಧ ಬಾಂಧವ್ಯಕ್ಕೆ ಇಳಿಯಿತು. ಈ ಅವಧಿಯಲ್ಲಿಯ ನನ್ನ ನೆನಪುಗಳನೇಕ ಇಂದಿಗೂ ಹಚ್ಚ ಹಸಿರು.

### ಜಯಂತಿ

ಆಲೂರ ವೆಂಕಟರಾಯರೆಂದರೆ 'ಜಯ ಕರ್ನಾಟಕ' ಜಯ ಕರ್ನಾಟಕವೆಂದರೆ ವೆಂಕಟರಾಯರು ಎಂಬಂತೆ 'ಜಯಂತಿ'–ಬೆಟಗೇರಿ ತಾದಾತ್ಮ್ಯವಾಗಿ ಹೋಗಿತ್ತು. ನಾವು ಚಿಕ್ಕವರಿದ್ದಾಗ 'ಜಯ ಕರ್ನಾಟಕ' 'ಪ್ರಬುದ್ಧ ಕರ್ನಾಟಕ' ಸಂಚಿಕೆಗಳ ಆಗಮನವನ್ನು ನಿರೀಕ್ಷಿಸುತ್ತಿದ್ದಂತೆ ನಮ್ಮ ಮುಂದಿನ ತಲೆಮಾರಿನವರು 'ಜಯಂತಿ'ಗಾಗಿ ಕಾಯುತ್ತಿದ್ದರು. ನನ್ನ ಸ್ನೇಹಿತರನೇಕರು 'ಜಯಂತಿ' ಮೂಲಕವೇ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಪ್ರವೇಶ ಪಡೆದು ಇಂದು ಹೆಸರಾಂತ ಸಾಹಿತಿಗಳಾಗಿದ್ದಾರೆ. 'ಜಯಂತಿ'ಯ ಕಾರ್ಯಾಲಯವೆಂದರೆ ಉದಯೋನ್ಮುಖ ಬರೆಹಗಾರರ ಕಾರ್ಯಾಗಾರವೇ–ಕಮ್ಮಟವೇ ಆಗಿತ್ತು ಎಂಬುದನ್ನು ಅಲ್ಲಿ ಸಾಹಿತ್ಯ ಸಂಸ್ಕಾರ ಪಡೆದ ಅನೇಕ ಪ್ರಸಿದ್ಧ ಬರೆಹಗಾರರು ಸರಳ ಮನಸ್ಸಿನಿಂದ ಒಪ್ಪಿಕೊಳ್ಳುತ್ತಿದ್ದಾರೆ. ಇಂದು ಸಾಹಿತ್ಯ ಪರಿಷತ್ತು ಸರಕಾರದ ಧಾರಾಳವಾದ ನೆರವಿನಿಂದ ನಡೆಸುತ್ತಿರುವ ಸಾಹಿತಿ–ಕಮ್ಮಟಗಳ ಕಾರ್ಯವನ್ನು ಬೆಟಗೇರಿಯವರು ಯಾರೊಬ್ಬರ ನೆರವಿಲ್ಲದೆ–ಸ್ವಸಂತೋಷಕ್ಕಾಗಿ ಮಾಡುತ್ತಿದ್ದರು.

ಬೆಟಗೇರಿಯವರ ಮತ್ತು ನನ್ನ ನಡುವಿನ ಸಂಬಂಧ ಹೆಚ್ಚು ಆತ್ಮೀಯವಾಗಲು 'ಜಯಂತಿ'ಯ ಪ್ರಾರಂಭದ ದಿನಗಳಲ್ಲಿ ನಡೆದ ಒಂದು ಘಟನೆ ಕಾರಣವಾಯಿತು. ಇಂದು 'ರಾವಬಹಾದ್ದೂರ' ಎಂದು ಹೆಸರಾಗಿರುವ ಕನ್ನಡ ಸಾಹಿತಿ–ಆಗ ಕೇವಲ ಆರ್.ಬಿ. ಕುಲಕರ್ಣಿ ಎಂದು ಕೆಲವೇ ಗೆಳೆಯರಿಗೆ ಮಾತ್ರ ಪರಿಚಿತರಾಗಿದ್ದರು. ಕಾಲೇಜಿನಲ್ಲಿ ಇದ್ದಾಗ ಇವರು ಒಂದೆರಡು ಕತೆಗಳನ್ನು ಬರೆದಿದ್ದರು. ಆರ್.ಬಿ. ಅವರ ಒಬ್ಬ ಗೆಳೆಯನು ಇವರದೊಂದು ಕತೆಯನ್ನು ತಾನು ಬರೆದುದು ಎಂದು 'ಜಯಂತಿ'ಯಲ್ಲಿ ಪ್ರಕಟನೆಗಾಗಿ ಕೊಟ್ಟನು. ಕತೆ ಒಳ್ಳೆಯದೇ ಇದ್ದುದರಿಂದ ಅದು ಪ್ರಕಟವೂ ಆಯಿತು. ಆರ್.ಬಿ.ಗೆ ಇದು ದೊಡ್ಡ ಆಘಾತವೇ ಆಯಿತು. ನಿಜ ಸಂಗತಿಯನ್ನು ಬೆಟಗೇರಿ ಅವರಿಗೆ ತಿಳಿಸಿ, ಅನ್ಯಾಯ ಸರಿಪಡಿಸುವ ಹೊಣೆ ನನ್ನ ಮೇಲೆ ಬಿತ್ತು. ಆರ್.ಬಿ. ಅವರನ್ನು ಬೆಳಗೇರಿ ಅವರ ಭೆಟ್ಟಿ ಮಾಡಿಸಿ, ವಿಷಯ ವಿವರಿಸಿ ಹೇಳಿದೆವು. ಬೆಟಗೇರಿ ಅವರು ಆರ್.ಬಿ.ಯ ಉಳಿದ ಕಥೆಗಳನ್ನು

ಪ್ರಕಟವಾದ ಕಥೆಯ ಮೂಲ ಪ್ರತಿಯನ್ನೂ ಓದಿ ನೋಡಿ ಅನ್ಯಾಯವಾದುದನ್ನು ಮನಗಂಡು ನೊಂದುಕೊಂಡರು. ತನ್ನದೆಂದು ಹೇಳಿದ ವ್ಯಕ್ತಿಯನ್ನು ಕರೆಯಿಸಿಕೊಂಡು ತಿಳಿಹೇಳಿ ಅನಂತರದ ಸಂಚಿಕೆಯಲ್ಲಿ ತಪ್ಪು ತಿಳುವಳಿಕೆಯಿಂದ ಲೇಖಕರ ಹೆಸರು ಬದಲಾಗಿ ಅಚ್ಚಾಯಿತೆಂದು ತಿದ್ದುಪಡಿ ಪ್ರಕಟಿಸಿದುದಲ್ಲದೆ ಆರ್.ಬಿ.ಯ 'ಚಂದ್ರಗ್ರಹಣ' ವೆಂಬ ಕತೆಯನ್ನೂ ಪ್ರಕಟಿಸಿದರು. ಅನಂತರ ಇನ್ನೂ ನಾಲ್ಕಾರು ಆರ್.ಬಿ.ಯ ಕತೆಗಳು 'ಜಯಂತಿ'ಯಲ್ಲಿ ಬೆಳಕು ಕಂಡವು.

'ಜಯಂತಿ'ಯ ಸಂಪಾದಕೀಯ ಜೀವನ ಬೆಟಗೇರಿಯವರಿಗೆ ಒಂದು ಅನುಭವ ಮಂಟಪವಾಗಿತ್ತು. ತಮ್ಮ ಬರೆಹಗಳು 'ಜಯಂತಿ'ಯಲ್ಲಿ ಮೂಡಬೇಕು ಎಂದು ಬಯಸುತ್ತಿದ್ದ ಹೊಸ ಲೇಖಕರು ಅವರ ಸುತ್ತು ಮುತ್ತು ಇಲ್ಲವೆ ಕಣ್ಮುಂದೆ ಸುಳಿಯುತ್ತಿರಬೇಕು ಎಂದು ಜಯಂತಿ ಕಾರ್ಯಾಲಯಕ್ಕೆ ನಿತ್ಯ ಸಂದರ್ಶಕರಾಗಿದ್ದರು. ಸಾರ್ವಜನಿಕ ಕ್ಷೇತ್ರಗಳಲ್ಲಿಯ ಕಾರ್ಯಕರ್ತರೂ ಸಾಹಿತಿಗಳೂ ಇಲ್ಲಿ ನಡೆಯುತ್ತಿದ್ದ ಸುಖ-ಸಂಕಥಾ-ವಿನೋದಗಳಲ್ಲಿ ಪಾಲ್ಗೊಂಡು ರಸನಿಮಿಷ ಅನುಭವಿಸಲೆಂದು ಬರುತ್ತಿದ್ದರು. ಬೆಟಗೇರಿಯವರಿಗೆ ಇದರಿಂದ ಆನಂದ ಹೆಚ್ಚುತ್ತಿದ್ದರೂ ಅನೇಕ ಸಲ ಕೆಲಸಕ್ಕೆ ತೊಂದರೆಯಾಗಿ ಹೊರೆಯೇ ಆಗುತ್ತಿತ್ತು. ಹೀಗೆ ನೆರೆಯುತ್ತಿದ್ದವರಿಗಾಗಿ ಚಹಾಪಾನದ ವೆಚ್ಚ ಬೆಟಗೇರಿಯವರ ಮನೆ ವೆಚ್ಚಕ್ಕಿಂತಲೂ ಆಗಾಗ ಹೆಚ್ಚೇ ಆಗುತ್ತಿತ್ತು. ಈ ವೆಚ್ಚವನ್ನು 'ಜಯಂತಿ'ಯ ಲೆಕ್ಕಾಚಾರದಲ್ಲಿ ಅತಿಥಿಗಳೊಡನೆ ಇಲ್ಲವೆ ಲೇಖಕರೊಡನೆ ಉಪಹಾರ ಎಂದು ಬರೆಯುತ್ತಿದ್ದರು. "ನಡೆಯಿರಿ, ಲೇಖಕರೊಡನೆ ಉಪಹಾರಕ್ಕಾಗಿ ಹೋಗೋಣ," ಎಂಬುದು ಕೆಲ ಕಾಲ ಚೇಷ್ಟೆಯ ಮಾತೇ ಆಗಿತ್ತು.

ಸಂಪಾದಕೀಯ ಜೀವನದಲ್ಲಿ ಅವರಿಗೆ ಸರಸ-ವಿರಸಗಳೆರಡೂ ಸಮನಾಗಿಯೇ ಅನುಭವ ತಂದು ಕೊಟ್ಟವು. ಕಹಿ ಪ್ರಸಂಗಗಳಲ್ಲಿ ಎರಡು ಇಲ್ಲಿ ಉಲ್ಲೇಖನೀಯ. ಈ ಮೊದಲು ಬರೆದಂತೆ ಜಯಂತಿ ಕಾರ್ಯಾಲಯವನ್ನು ನೋಡಿಕೊಳ್ಳುತ್ತಿದ್ದ ಹನುಮಂತನ ನಿಧನದಿಂದ ತೆರವಾದ ಸ್ಥಳಕ್ಕೆ ಮತ್ತೊಬ್ಬನನ್ನು ಬೆಟಗೇರಿ ಅವರು ನಿಯಮಿಸಿ ಕೊಂಡರು. ಈತನಿಗೆ ಕತೆ, ಕಾದಂಬರಿ ಓದುವ ಚಟವಿತ್ತು. 'ಜಯಂತಿ'ಯಲ್ಲಿ ಪ್ರಕಟವಾದ ಹಾಗೂ ಪ್ರಕಟನೆಗೆಂದು ಬರುತ್ತಿದ್ದ ಕತೆಗಳನ್ನೆಲ್ಲ ಇವನು ಓದುತ್ತಿದ್ದ. ಬೆಟಗೇರಿಯವರು ಕತೆಗಾರರಿಗೆ ನೀಡುತ್ತಿದ್ದ ಸೂಚನೆಗಳನ್ನು ಗಮನಿಸುತ್ತಿದ್ದ. ತಾನೂ ಒಬ್ಬ ಕತೆಗಾರನಾಗಬೇಕು ಎಂದು ಹಂಬಲಿಸಿ 'ನಿರಾಕೃತ' ಕತೆಗಳಲ್ಲಿಯ ಕೆಲವನ್ನು ತೆಗೆದುಕೊಂಡು ಅಲ್ಲಿಂದಷ್ಟು ಇಲ್ಲಿಂದಷ್ಟು ತುಂಡುಗಳನ್ನು ಆಯ್ದು ತೇಪೆ ಹಚ್ಚಿ ಒಂದು ಕತೆ ಹೊಸೆದು ತಾನು ಬರೆದ ಕತೆಯೆಂದು ಬೆಟಗೇರಿಯವರಿಗೆ 'ಜಯಂತಿ'ಯಲ್ಲಿ ಪ್ರಕಟಿಸಬೇಕೆಂದು ದುಂಬಾಲು ಬಿದ್ದ. ಕತೆ ಓದಿದ ಬೆಟಗೇರಿಯವರು ಅವನಿಗೆ, "ಕತೆ






ಗಾರನಾಗುವದು ಹೀಗಲ್ಲಪ್ಪಾ. ನೀನು ಸ್ವಂತ ಕತೆ ಬರೆಯಬೇಕು. ಬೇರೆ ಜನರು ಬರೆದದ್ದನ್ನು ತಂದು ಹಚ್ಚಿದ ಹಚ್ಚಬಾರದು," ಎಂದು ಬುದ್ಧಿವಾದ ಹೇಳಿದರು. ಇದರಿಂದ ಅವಮಾನವಾಯಿತೆಂದು ಬಗೆದು ಈತನು 'ಜಯಂತಿ'ಗೆ ಶರಣು ಹೊಡೆದು-ಒಂದು ಬೀಡಿ ಅಂಗಡಿ ತೆಗೆದ. ಕತೆಗಾರನಷ್ಟೇ ಅಲ್ಲ, ಸಂಪಾದಕನೂ ಆಗಲೆಣಿಸಿ ಕೆಲ ಸ್ನೇಹಿತರನ್ನು ಕೂಡಿಕೊಂಡು ಒಂದು ಮಾಸಪತ್ರಿಕೆ ಪ್ರಾರಂಭಿಸಿ ತಾನೇ ಅದರ ಸಂಪಾದಕನಾದ. ಈ ಪತ್ರಿಕೆಯ ಮೊದಲ ಸಂಚಿಕೆಯಲ್ಲಿ 'ಜಯಂತಿ' ಯಲ್ಲಿ ನಿರಾಕೃತವಾಗಿದ್ದ ಒಂದೆರಡು ಸಣ್ಣ ಕತೆಗಳು ಅಚ್ಚಾಗಿದ್ದುದು ಅಚ್ಚರಿಯದೇನಲ್ಲ. ಆದರೆ ಮೊದಲ ಸಂಚಿಕೆಯ ಪ್ರತಿಯನ್ನು ಕೈಯಲ್ಲಿ ಹಿಡಿದುಕೊಂಡು ಬಂದು ಆತನು ಬೆಟಗೇರಿ ಅವರ ಮುಂದಿನ ಕುರ್ಚಿಯಲ್ಲಿ ಕುಳಿತು "ನಾನೂ ಸಂಪಾದಕನಾಗಿದ್ದೇನೆ. ನಿಮ್ಮ ಸಮಾನ ಸ್ಕಂಧನಾಗಿದ್ದೇನೆ," ಎಂದದ್ದು ಮಾತ್ರ ಧಾರ್ಷ್ಟ್ಯದ ಮಾತೇ ಆಗಿತ್ತು. ಇದರಿಂದ ನೊಂದುಕೊಂಡ ಬೆಟಗೇರಿಯವರು ಈ ಘಟನೆಯನ್ನು ವಿವರಿಸುತ್ತ, "ಬೀಡಿ ಅಂಗಡಿಯವರೂ ಹೊಟೆಲ್ ಮಾಣಿಗಳೂ ಸಂಪಾದಕರಾಗತೊಡಗಿದರೆ ಪತ್ರಿಕಾ ಪ್ರಪಂಚದ ಗತಿ ಏನು?" ಎಂದು ಬರೆದದ್ದು ಮಾತ್ರ ಕೆಲ ಕಾಲ ಬಿರುಗಾಳಿಯನ್ನೇ ಎಬ್ಬಿಸಿತು. ಈಗ ಕಾಲ ಬದಲಾಗಿದೆ. ಹೊಸ ಮನ್ವಂತರದಲ್ಲಿ ಪತ್ರಿಕೆಗಳೆಲ್ಲ ಪತ್ರಿಕಾ ಪ್ರಪಂಚಕ್ಕೆ ಭೂಷಣವೆನ್ನುವಂತಿಲ್ಲ. ಮಾಡರ್ನ್ ರಿವ್ಯೂ, ಇಂಡಿಯನ್ ರಿವ್ಯೂ, ಜಯ ಕರ್ನಾಟಕ, ಜಯಂತಿ, ಪ್ರಬುದ್ಧ ಕರ್ನಾಟಕ ಇವೆಲ್ಲ ಹಳೆಯ ಕತೆ.

ಇನ್ನೊಬ್ಬ ಸು-ಶಿಕ್ಷಿತ ದ್ವಿ-ಪದವೀಧರರೊಬ್ಬರು ಇಂತಹದೇ ಇನ್ನೊಂದು ಘಟನೆಗೆ ಕಾರಣರಾದರು. ಬಿ.ಎ., ಎಲ್‌ಎಲ್.ಬಿ. ಪದವಿ ಪಡೆದವರೊಬ್ಬರು, ಪ್ರಾಚಾರ್ಯ ವಿ. ಕೃ. ಗೋಕಾಕ ಅವರು ಕರ್ನಾಟಕ ಕಾಲೇಜಿನಲ್ಲಿದ್ದಾಗ ವಿದ್ಯಾರ್ಥಿಯಾಗಿದ್ದರು. ಅವರು ಈ ಮಹಾಶಯರ ಕವನ ಸಂಗ್ರಹ ಒಂದಕ್ಕೆ ಮುನ್ನುಡಿ ಬರೆಯುತ್ತ, ಕವನಗಳನ್ನು ಮೆಚ್ಚಿ ಭವಿಷ್ಯ ಉಜ್ವಲವಿದೆಯೆಂದು ಆಶೀರ್ವಾದ ಮಾಡಿದ್ದನ್ನು ಈ ಕವಿ, ತಾನಾಗಲೇ ಶಿಖರಕ್ಕೆ ಏರಿದಂತೆ ಭಾವಿಸಿದ್ದ. ತನ್ನ ಕವನ ಸಂಗ್ರಹವನ್ನು ವಿಮರ್ಶೆಗೆ ಕೊಟ್ಟು 'ಜಯಂತಿ'ಯಲ್ಲಿ ಪ್ರಕಟನೆಗೆ ಎಂದು ಎರಡು ಕವಿತೆಗಳನ್ನು ಕೊಟ್ಟ. ಸಾಮಾನ್ಯ ಕವನ. ಬೆಟಗೇರಿಯವರು ಕೂಡಲೇ ಪ್ರಕಟಿಸಲಿಲ್ಲ. "ನನ್ನಂತಹನ ಕವನ ನೀವು ಪ್ರಕಟಿಸುವುದಿಲ್ಲವೆಂದರೆ ಏನರ್ಥ?" ಎಂದು ಕವಿಮಹಾಶಯರು ಜಟಿ ಅಪ್ಪಳಿಸಿ ಆಡಿದ ಬಿರುನುಡಿಗಳನ್ನು ಸಹಿಸಿಕೊಂಡು ಬೆಟಗೇರಿ ಸಮಾಧಾನ ಮಾಡಲೆತ್ನಿಸಿದರು. "ನಿಮಗೆ ಪಾಠ ಕಲಿಸುತ್ತೇನೆ," ಎಂದು ಹೇಳಿ ಚಾಣಕ್ಯ ಪ್ರತಿಜ್ಞೆ ಕೈಕೊಂಡು ಈ ಮಹಾಶಯ ತಿಂಗಳೊಪ್ಪತ್ತಿನಲ್ಲಿಯೇ 'ಚಾಣಕ್ಯ' ಎಂಬ ಮಾಸಪತ್ರಿಕೆ ಪ್ರಾರಂಭಿಸಿ ಮೊದಲ ಸಂಚಿಕೆಯಲ್ಲಿ ಚಾಣಕ್ಯನಂತಹ ಹಬ್ಬಳಿಕೆಯ ಮಾತಗಳನ್ನೇ ಸಂಪಾದಕೀಯದಲ್ಲಿ ಘೋಷಿಸಿ ಒಂದು ಪ್ರತಿಯನ್ನು ಬೆಟಗೇರಿಯವರಿಗೆ ತಂದುಕೊಟ್ಟ. ಚಾಣಕ್ಯ ಅಲ್ಪಾಯುಷಿಯಾಯಿತು ಎಂದು ಬೇರೆ ಹೇಳಬೇಕಾಗಿಲ್ಲ. ಇಂತಹ ಇನ್ನೂ ಒಂದೆರಡು ಘಟನೆಗಳನ್ನು ವಿವರಿಸಲು ಸ್ಥಳಾವಕಾಶವಿಲ್ಲ.

## ಅಚ್ಚುಗನ್ನಡ

ಕಿರುಕಳಗಳು, ತೊಂದರೆಗಳು, ಆಪತ್ತುಗಳು ಏನೇ ಇರಲಿ – ಎಷ್ಟೇ ಇರಲಿ ಅವನ್ನೆಲ್ಲ ನುಂಗಿಕೊಂಡು 'ಜಯಂತಿ' ಬದುಕಿದಷ್ಟು ಕಾಲ ಚೆನ್ನಾಗಿಯೇ ಬಾಳಿತು. ಈಗ 'ಜಯಂತಿ'ಯೂ ಇಲ್ಲ, ಬೆಟಗೇರಿ ಅವರೂ ಇಲ್ಲ. 'ಜಯಂತಿ' ಸಂಪುಟಗಳು ಮಾತ್ರ ಸಾಹಿತ್ಯಾಭ್ಯಾಸಿಗೆ ವಿಪುಲ ಸಾಮಗ್ರಿ ಒದಗಿಸಬಲ್ಲವು. 'ಜಯಂತಿ'ಯ ಮುದ್ರಕನೆಂದು ಬೆಟಗೇರಿ ಅವರೊಡನೆ ಸುದೀರ್ಘ ಕಾಲದ ಸಂಬಂಧ ಮಾತ್ರ ನನಗೆ ಒಂದು ಸ್ಮರಣೀಯ ಅನುಭವ. ಮುದ್ರಣಕ್ಕೆ ಕೊಡುತ್ತಿದ್ದ ಲೇಖನಗಳ ಪ್ರತಿಯೊಂದು ಶಬ್ದವನ್ನೂ ಓದಿ ತಕ್ಕ ತಿದ್ದುಪಡಿ ಮಾಡಿಕೊಡುತ್ತಿದ್ದುದರಿಂದ ಮೊಳೆ ಜೋಡಿಸುವವರು – ಸಂತೋಷದಿಂದ ಕೆಲಸ ಮಾಡುತ್ತಿದ್ದರು. ಅಚ್ಚಿನ ಕರಡು ಪ್ರತಿ ತಿದ್ದುವಲ್ಲಿ ಕೂಡ ಅವರು ಕೆಲಸಗಾರರಿಗೆ ಅನುಕೂಲವಾಗುವಂತೆ ಸರಿಪಡಿಸಿಕೊಳ್ಳುತ್ತಿದ್ದರು. ಸ್ವತಃ ಅವರ ಬರೆಹಗಳಂತೂ ಸಮಾ–

ಚ್ಯವೇ ಆಗುತ್ತಿದ್ದುದರಿಂದ – ಆ ಲೇಖನಗಳ ಕರಡಿನಲ್ಲಿ ದೋಷ ಇರುತ್ತಿರಲೇ ಇಲ್ಲ. ಅಲ್ಲೊಂದು ಇಲ್ಲೊಂದು ಮೂಡದಿದ್ದ ವಿರಾಮ ಚಿಹ್ನೆ ಇಲ್ಲದೆ ಅವತರಣಿಕೆಗಳನ್ನಷ್ಟೇ ಹಾಕುತ್ತಿದ್ದರು. ಇದು ಒಂದು ಅಂಶ.

ಅಚ್ಚ ಕನ್ನಡದ ಕೆಚ್ಚನ್ನು – ಅಂದರೆ ಇಂಗ್ಲೀಷಿನ ಸೋಂಕು ಇಲ್ಲದ ಶೈಲಿ ಎಂದೇನೂ ಅಲ್ಲ – ನಾನು ಕಂಡುಕೊಂಡದ್ದು ಹೆಚ್ಚಾಗಿ ಬೆಟಗೇರಿ ಅವರ ಬರೆಹಗಳಲ್ಲಿಯೇ. “ವಿರಾಮ ಚಿಹ್ನೆಗಳು ಕನ್ನಡದವಲ್ಲ, ಇಂಗ್ಲೀಷಿನಿಂದ ಬಂದವು ಅವನ್ನೇಕೆ ನೀವು ಬಳಸುತ್ತೀರಿ?” ಎಂದು ಕೇಳಿದೆ– “ಸಂಗತಿ ಸಂಗದೋಷ” ಎಂದರು. “ವಿರಾಮ ಚಿಹ್ನೆಗಳ ನೆರವಿಲ್ಲದೆ ನೀವು ಬರೆಯಬಲ್ಲಿರಾ?” ಎಂದೆ. “ಪ್ರಯತ್ನ ಮಾಡುತ್ತೇನೆ,” ಎಂದರು. ‘ಸಾಮಾಜಿಕನ ಸಂವಚನ’ಗಳಲ್ಲಿ ಕೆಲವೆಡೆ ಆ ಪ್ರಯತ್ನವನ್ನು ಮಾಡಿಯೂ ಇದ್ದಾರೆ. ನೂರಾರು ಜನ ಬರೆಹಗಾರರ ಭಾಷೆಯನ್ನು ಒಪ್ಪ ಹಾಕಿ ಲಿಪಿಯನ್ನು ಓದಿ ಓದಿ ತಲೆ ಬೇಸರವೆನಿಸುವಂತಹ ಕೆಲಸವನ್ನು ಅವರು ಹಸನ್ಮುಖದಿಂದ ಮಾಡುತ್ತಿದ್ದರು. ಆದರೆ ಅದೆಲ್ಲ ‘ಕರ್ಮಣ್ಯೇವಾಧಿಕಾರಸ್ತೆ’ ಆಯಿತು.

“ಕನ್ನಡ ನಾಡಿನ ಹಾಡನ್ನೂ ಬರೆಯುವುದಕ್ಕೆ ಸಾಲದು ಮುಗಿಲು,” ಎಂದರು ಬೆಟಗೇರಿಯವರು. ಆದರೂ ಕನ್ನಡದ ಕತೆಯನ್ನು ಮನಃಪೂರ್ವಕವಾಗಿ ಬರೆದರು. ಬೆಟಗೇರಿ ಅವರ ಕತೆಯನ್ನು ‘ಕಸ್ತೂರಿ’ ಸಂಪಾದಕರು ಇದಕ್ಕಾಗಿ ಮೀಸಲಾಗಿಸಿದ ಕೆಲವೇ ಪುಟಗಳಲ್ಲಿ ಬರೆಯಲಾಗದು. ಇದಕ್ಕಾಗಿ ಒಂದು ಸಂಚಿಕೆಯೇ ಮೀಸಲಾಗಬೇಕು. ಹಾಗೆ ನೋಡಿದಲ್ಲಿ ಬೇಂದ್ರೆ ವಿಶೇಷ ಸಂಚಿಕೆ ಬರಬೇಕಾಗಿತ್ತು. ನಾವು ನಮ್ಮವರನ್ನು ಗೌರವಿಸುವುದು ಅಗತ್ಯ. ವ್ಯಕ್ತಿಪೂಜೆಗಾಗಿ ಅಲ್ಲ, ಗುಣಪೂಜೆಗಾಗಿ.

ಬೆಟಗೇರಿ ಜೀವನ, ಶಾಂತ – ಗಂಭೀರ, ರೌದ್ರಕ್ಕೆ ಇಲ್ಲಿ ಎಡೆ ಕಡಿಮೆ. ಕನ್ನಡ ನುಡಿ ಅವರ ಸಾಹಿತ್ಯ ನಿರ್ಮಿತಿಯಲ್ಲಿ ನವರಸಗಳ ರುಚಿ ಉಂಡಿತು. ಗಾಂಧೀ ಭಾರತ ರಚನೆಗೂ ತೊಡಗಿದರು. ಶಕ್ತಿ ಸಾಲದೆಂದು ಕೈ ಬಿಟ್ಟರು. ದೇಹ ಶಿಥಿಲವಾದಂತೆ ತಾನು ಮಾಡಬೇಕಾದ ಕೆಲಸ, ಪೂರ್ಣ ಮಾಡಲಾಗಲಿಲ್ಲವೆಂಬ ಕೊರಗು ಅವರನ್ನು ಕೊರೆಯುತ್ತಿತ್ತು. ಕಾಣ ಬಂದ ಸ್ನೇಹಿತರ ಮುಂದೆ ತಮ್ಮ ವ್ಯಥೆ ತೋಡಿಕೊಳ್ಳುತ್ತಿದ್ದರು. ಅವರ ಜೀವನದ ಪ್ರವಾಹವು ಶಾಂತವಾಗಿಯೇ ಕೊನೆಗಂಡಿತು. ತನ್ನದು–ತನ್ನ ಒಡೆತನದ್ದು ಎಂಬ ಮನೆ ಬೇಕು ಎಂದು ಹಂಬಲಿಸಿದರು. ತನ್ನ ಒಡೆತನದ ಮನೆಯಲ್ಲಿ ಕಾಲಿರಿಸಿದ ನಂತರ ಮೂರನೆಯ ದಿನವೇ ತುಂಬ ತೃಪ್ತಿಯಿಂದ ಶಾಂತ ಮುಖ ಮುದ್ರೆ ಬೀರುತ್ತಲೆ ಇಹಲೋಕ ಯಾತ್ರೆ ಮುಗಿಸಿದರು. ಅವರ ಪಾರ್ಥಿವ ಶರೀರವನ್ನು ನೋಡಲು ಬಂದವರೆಲ್ಲ ಶಾಂತರಾಗಿಯೇ ಸ್ತಬ್ಧರಾಗಿಯೇ ಗೌರವ ಅರ್ಪಿಸಿದರು. ಇದೊಂದು ಸಡಗರವೇ ಎನಿಸುತ್ತಿತ್ತು. ಅಂತ್ಯಯಾತ್ರೆಯೂ ಹಾಗೆಯೇ. ಅವರ ಜೀವನವೇ ಗೊತ್ತು ಗುರಿಯಿಲ್ಲದೇ ಸಾಗಿತ್ತು. ಕೊನೆಯ ಯಾತ್ರೆಯೂ ತಿರುವುಗಳು ಬಂದಲ್ಲೆಲ್ಲ ತಿರುಗದೆ ನೇರವಾಗಿ ನಗರದ ರಾಜಮಾರ್ಗದ ಮೂಲಕ ಪ್ರದಕ್ಷಿಣೆ ಹಾಕಿ ರುದ್ರಭೂಮಿಗೆ ಬಂದಿತು. ಅಲ್ಲಿಯ ವಾತಾವರಣವೂ ಶಾಂತವೇ, ಗಂಭೀರವೇ. ಸ್ನೇಹಿತ ಸಾಹಿತಿ ಎನ್ಕೆ ಅವರು ಹೇಳಿದಂತೆ ಶಿವನು ಕೂಡ ತನ್ನ ರೌದ್ರತೆಯನ್ನು ಕಡಿಮೆ ಮಾಡಿ ಶಿವಶಾಂತಿ ಬೀರಿ ಇವರನ್ನು ಬರಮಾಡಿಕೊಂಡನು. ಎಲ್ಲವೂ ಶಾಂತ. ಅಗ್ನಿದೇವನೂ ಶಾಂತವಾಗಿಯೇ ಉರಿದನು.

## ಬೆಟಗೇರಿಯವರು ಯಾರ ಸೊತ್ತು?

ಸ್ಮಶಾನ ಯಾತ್ರೆ ರಾತ್ರಿ ಬೇಡ ಮುಂಜಾನೆ ಮಾಡೋಣ ಎಂದಾಗ ಅವರ ಬಳಗದ ಒಬ್ಬಿಬ್ಬರು ಸನಾತನಿಗಳು ಅದಕ್ಕೊಪ್ಪಲಿಲ್ಲ. “ಬೆಟಗೇರಿ ಸಾರ್ವಜನಿಕ ಸೊತ್ತು. ಈಗ ಅವರ ಮೇಲೆ ನಿಮ್ಮ ಅಧಿಕಾರವಿಲ್ಲ,” ಎಂದು ನಾನು ತಿಳಿ ಹೇಳಬೇಕಾಯಿತು. “ಈ ಪಾರ್ಥಿವ ಶರೀರವೂ ನಿಮ್ಮದು ಎನ್ನುತ್ತೀರಾ?” ಎಂದರು. “ಈ ಪಾರ್ಥಿವ ಶರೀರವಷ್ಟೇ ಅಲ್ಲ– ಈ ಶರೀರ ಸಜೀವವಿದ್ದಾಗಲೂ ಅದು ಸಾರ್ವಜನಿಕ ವಸ್ತುವಾಗಿತ್ತು,” ಎಂದೆ. ಹಾಗೆ ನೋಡಿದಲ್ಲಿ ಆನಂದಕಂದ

ರಿಗೆ ಸಾವು ಇಲ್ಲ. ಕನ್ನಡ ನುಡಿಯನ್ನು ಸವಿಯಬಲ್ಲ ಸಹೃದಯರಿಗೆ ಕೊರತೆಯಾಗುವ ತನಕ ಅವರು ಅಮರ.

ನನ್ನ ದೃಷ್ಟಿಯಲ್ಲಿ ಬೆಟಗೇರಿ ಅವರ ಸಾಧನೆ ಇಂದು ಅಗೋಚರ. ಅವರಿಂದ ನಮಗೆ ದೊರೆಯಬೇಕಾಗಿದ್ದ ಫಲ ದೊರಕಲಿಲ್ಲವೆಂದರೂ ಸರಿಯೆ. ಅವರ ಕಾವ್ಯಗುಣ ಗ್ರಹಣಶಕ್ತಿ ಅದ್ಭುತವಾದದ್ದು. ಅದಕ್ಕೆ ಕಾರಣ ಅವರ ಪರಿಪೂರ್ಣ ಅಭ್ಯಾಸ ಪದ್ಧತಿ. ಇದಕ್ಕೆ ನಿದರ್ಶನವೆಂದು ಕುಮಾರವ್ಯಾಸ ಭಾರತ ಹಾಗೂ ದಾಸ ಸಾಹಿತ್ಯದ ಬಗೆಗೆ ಅವರ ಭಾಷಣ ಲೇಖನಗಳು. ಗಮಕಿ ಹಲಸಿಗಿ ಅವರು ಒಂದೊಂದು ಪದ್ಯವನ್ನು ಹೇಳುತ್ತಾ ಹೋದಂತೆ ಆ ಪದ್ಯದ ಪ್ರತಿ ಪದಾರ್ಥ ಭಾವಾರ್ಥ ಹಾಗೂ ಸಂದರ್ಭ ಇತ್ಯಾದಿಗಳನ್ನು ವಿವರಿಸಿ ಹೇಳುವ ಅವರ ಸಾಮರ್ಥ್ಯ ಬೆರಳು ಕಚ್ಚುವಂತಹದು. ತಿಂಗಳುಗಟ್ಟಲೆ ಈ ಕಾರ್ಯಕ್ರಮ ನಡೆದು ಅನೇಕರಿಗೆ ಕುಮಾರವ್ಯಾಸ ದರ್ಶನ ಪಡೆಯಲು ಸಾಧ್ಯವಾಯಿತು. ಕುಮಾರವ್ಯಾಸನ ಬಗೆಗೆ ಅಧಿಕಾರ ವಾಣಿಯಿಂದ ಮಾತಾಡಬಲ್ಲವರೊಬ್ಬರ ಭಾಷಣ ಮಾಲಿಕೆ ಒಮ್ಮೆ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಏರ್ಪಡಿಸಿದ್ದೆ. ಬೆಟಗೇರಿ ಅವರು ಅಧ್ಯಕ್ಷರಾಗಿದ್ದರು. ಮೂರೂ ದಿನಗಳ ಅವರ ಸಮಾರೋಪ ಭಾಷಣ ಮತ್ತು ಕೊನೆಯ ದಿನದ ಅವರ ಪೂರಕ ಭಾಷಣವನ್ನು ಆ ವಿದ್ವಾಂಸರೂ ತುಂಬ ಮೆಚ್ಚಿಕೊಂಡು "ನೀವು ನನಗೆ ಕುಮಾರವ್ಯಾಸನ ಬಗ್ಗೆ ಒಳನೋಟ ಕೊಟ್ಟಿರಿ", ಎಂದು ಹರ್ಷೋದ್ಗಾರ ತೆಗೆದರು. "ಕನ್ನಡಕ್ಕೆ ಕುಮಾರವ್ಯಾಸನಿತ್ತ ಕೊಡುಗೆ ಎಂದರೆ ಅವನು ಬಳಸಿದ ದೇಶೀ ನುಡಿಗಳು. ನಾವು ಅವನ ಈ ಶಬ್ದ ಭಾಂಡಾರವನ್ನು ಸೂರೆಗೊಂಡು, ಇಂದಿಗೆ ಕನ್ನಡದ ಕೆಚ್ಚನ್ನು ಹೆಚ್ಚಿಸಬೇಕು" ಎಂದು ಬೆಟಗೇರಿಯವರು ಪದೇ ಪದೇ ಹೇಳುತ್ತಿದ್ದರು. ಇದಕ್ಕಾಗಿ ಒಂದು ಸಮಾನ ಶಬ್ದ ಸೂಚಿ ಸಿದ್ಧವಾಗಬೇಕು ಎಂದು ಅವರ ಅಭಿಲಾಷೆ. ಅವರ ಶಕ್ತಿಯ ಅಳವು ಮೀರಿದ್ದಕ್ಕಾಗಿ ಅದು ಫಲಿಸದೆ ಹೋಯಿತು. ಸನಾತನ ದೃಷ್ಟಿಯ ಸಂಪ್ರದಾಯಶರಣತೆಯೊಂದಿಗೆ ಲೌಕಿಕರ ಭಾವನೆಗಳನ್ನೂ ಲಕ್ಷಿಸಿ ಆಧುನಿಕ ಚಿಕಿತ್ಸಕ ವಿಮರ್ಶಾಬುದ್ಧಿಯನ್ನೂ ಅಳವಡಿಸಿಕೊಂಡು ಅವರು ಕಾವ್ಯ ವಿವರಣೆ ನೀಡುತ್ತಿದ್ದುದರಿಂದ ಅದರಲ್ಲೊಂದು ಸಮನ್ವಯತೆ ಮೂಡಿ ಬಂದು, ಅವರ ಮಾತುಗಳು ತುಂಬ ಸಮಂಜಸವಾಗಿರುತ್ತಿದ್ದವು.

ದಾಸ ಸಾಹಿತ್ಯದ ಬಗೆಗೂ ಅವರು ತಮ್ಮ ಚಿಕಿತ್ಸಕ ಬುದ್ಧಿಯನ್ನು ಉಪಯೋಗಮಾಡಿಕೊಂಡು ಒಂದು ಹೊಸ ದೃಷ್ಟಿಯಲ್ಲಿ ಮೆರಗು ಇತ್ತರು. ದಾಸಸಾಹಿತ್ಯ, ವಿಶೇಷವಾಗಿ ಪುರಂದರದಾಸರನ್ನು ಕುರಿತು, ನಾನು ನೂರಾರು



# ಕವಿ ಆನಂದಕಂದವಾಣಿ

೧ ನಾನಿದನೆ ಹಾಡುವೆನು ಹಾಡು! ನನ್ನದು ಈ ಕನ್ನಡ ನಾಡು

೨ ಎನಿತು ಇನಿದು ಈ ಕನ್ನಡನುಡಿಯು ಮನವನು ತಣಿಸುವ ಮೋಹನ ಸುಧೆಯು

೩ ಇರಲಿರಲಿ ತೆರವಿಲ್ಲವೀಗೊಂದರದು ಹಂಬಲ ಹಿಡಿಯಲು ಹೊರಡಿ ನಾಡಿನ ಹರಿಬ
ತಾಗಿಯೆ ರಣದೊಳೆಲ್ಲರು ಮಡಿಯಲು

೪ ಪ್ರಜಾರಾಜ್ಯ ಬಂತು ಬಂತು ಸಕಲ ಪ್ರಜಾರಾಜ್ಯ ಪ್ರಜೆಗಳಿಗೇ ಇಲ್ಲಿ ಗೊತ್ತು
ಯಾರದು ಈ ರಾಜ್ಯ

೫ ಓ, ಮಂತ್ರವಾಗಬಲ್ಲದು ಕನ್ನಡ, ಸೂತ್ರವಾಗಲು ಸಲ್ಲುದು ಕನ್ನಡ, ಶಾಸ್ತ್ರ
ವಾಗಲು ಬಲ್ಲದು ಕನ್ನಡ, ಶಾಸನವಾಗಲು ಸಲ್ಲುದು ಕನ್ನಡ

೬ ಓ ಕನ್ನಡವೆ, ಕನ್ನಡಿಗನ ಉಸಿರೆ ಕರುಳೆ, ಬಾಳೆ ಬಿಡುಗಡೆಯೆ!
ನಿನ್ನ ಮರೆದೆನಪ್ಪೊಡೆ ನಾನು ಬೀಳ್ವೆ ಅಳಾಗುವೆ ಗೋಳಿಡುವೆ
ನಿನ್ನರಿದೆನಪ್ಪೊಡೆ ಏಳುವೆ ಬಾಳುವೆ ಆಳುವೆ!

೭ ಏಸು ಬಿತ್ತಿದರೇನು, ಏಸು ಬೆಳೆದ್ದರೇನು
ಕಾಯಲೆಂದು ನೆಟ್ಟ ಬೇಲಿಗಳೆ ಹೊಲವ ಮೇಯುತಿವೆ ನೋಡಾ!

೮ ನಮ್ಮ ನಮ್ಮ ಕಜ್ಜಂಗಳ ಒಮ್ಮನದಿಂ ಮಾಡುತಿದ್ದರೆ ಸುಮ್ಮಾನದ ಸುಗ್ಗಿ
ಎಲ್ಲೆಲ್ಲೂ ಕಾಣಯ್ಯಾ! ನಮ್ಮ ನಮ್ಮ ಕಜ್ಜಂಗಳನುಳಿದು ಅನ್ಯರ ಕಜ್ಜಂಗಳಿಗೆ
ಕೈಯಿಕ್ಕಿದರೆ ದುಮ್ಮಾನವೆಂದಿಗೂ ತಪ್ಪದು ನೋಡಯ್ಯಾ! ತನ್ನ ಕಜ್ಜವೆಂಬುದೆ
ಮಾನವನಿಗೊಂದು ಮಹಾ ತಪಸ್ಸು ಕಾಣಯ್ಯ!

೯ ಕೂಡಿರುವದು ಜೀವಕುಲದ ಧರ್ಮ ಕಾಣಣ್ಣಾ! ಕೂಡಿರುವವರನು ಕೆಡಿಸುವ
ಧರ್ಮಗಳು ಧರ್ಮವೆಂತಹವು ಹೇಳಣ್ಣಾ!

೧೦ ಬಂದಿದೆ ಬರುತಲಿದೆ ಹಿರಣ್ಯಕಶಿಪುವಿನ ಆಡಳಿತ
ಝಣ್ ಝಣ್ ಥಣ್ ಥಣ್ ಕುಣಿಯುತಿದೆ ಹಣದ ಭೂತ
ಭೂಮಂಡಲದ ಸಿರಿ ಸಾಲದಾಗಿದೆ ಆ ದಾನವನ ಆಶೆಯು
ಪಿಶಾಚಿಗೆ, ಎಂತಲೇ ಉಡ್ಡಾಣಕಾಟಿಸುತಲಿದೆ ಬಾನಗೋಲಂಗಳೆಡೆಗೆ.

೧೧ ಮೈ ಹುಚ್ಚನದು ಪರಮಾರ್ಥದಿಂದಲ್ಲ, ಲೌಕಿಕದಿಂದಣ್ಣಾ! ಮನಸು ಪಡೆದ
ಪ್ರತ್ಯಕ್ಷಾನುಭಗಳು ಲೌಕಿಕವಣ್ಣಾ! ಇಂತಿರುವಾಗ ಲೌಕಿಕವನೆಲ್ಲ
ಕುರುಡುಗಣ್ಣಿಂದ ನೋಡಿ ಕಳೆಯೆಂಬ ಪರಮಾರ್ಥಿಗಳನು ಹುಟ್ಟುವದಕ್ಕೆ
ಮೊದಲೆ ಹೆಣಗಳ ಲೋಕದಲ್ಲಿ ಇಕ್ಕೆನುವ ನಮ್ಮ ಕಾಲರಾಮ.

೧೨ ಇದ್ದುದನು ಇದ್ದಂತೆಯೆ ಬರೆದೊರೆಯುವದು ಅದೆಂತಹ ಸಾಹಿತ್ಯವಯ್ಯಾ!
ವಾಸ್ತವವನ್ನು ಆದರ್ಶದ ಕಡೆಗೆ ಒಲಿಸುವ, ಆದರ್ಶವನ್ನು ವಾಸ್ತವಪ್ರಪಂಚಕ್ಕೆ
ಎಳೆಯುವ ಎದೆಯ ಮಾತುಗಳ ಸ್ರೋತವೇ ನಿಜವಾದ ಸಾಹಿತ್ಯ!

ಸಂಗ್ರಹ —ದ. ಲ. ಕೆರೂರ

ಭಾಷಣಗಳನ್ನು ಕೇಳಿದ್ದೇನೆ. ಅದರಲ್ಲಿ ನನ್ನ ಮನ ಮೆಚ್ಚಿದವು ಹೆಚ್ಚಾಗಿ ಬೆಟಗೇರಿ ಅವರ ಭಾಷಣಗಳೆ. ಅದಕ್ಕೆ ದಾಸರು ಉಪಯೋಗಿಸಿದ ಶಬ್ದಗಳಿಗೆ ಅವರು ನೀಡುತ್ತಿದ್ದ ಅರ್ಥ ವಿವರಣೆ ಮತ್ತು ರೂಪಾಂತರ ಪಾಠಾಂತರಗಳ ವಿಶ್ಲೇಷಣೆಯೇ ಕಾರಣ. "ನಾಲ್ಕು ನೂರು ವರ್ಷಗಳ ಹಿಂದೆ ರಚಿತವಾದ ಈ ಗೀತಗಳು ಕಂಠದಿಂದ ಕಂಠಕ್ಕೆ ಇಳಿದು ಬರುವಾಗ ಆದ ರೂಪಾಂತರಗಳನ್ನು ಗಮನದಲ್ಲಿಟ್ಟುಕೊಂಡು ಮೂಲದಲ್ಲಿ ಏನಿದ್ದಿರಬಹುದು ಎಂಬುದನ್ನು ಊಹಿಸಿ ಮೂಲರೂಪದಲ್ಲಿ ಗೀತೆಗಳನ್ನು ಪುನರ್ರಚಿಸುವುದು ಅತ್ಯಗತ್ಯ," ಎಂದು ಅವರು ಹೇಳುತ್ತಿದ್ದರು. ಪುರಂದರದಾಸರ ಕೀರ್ತನೆಗಳನ್ನು ಈ ದೃಷ್ಟಿಯಿಂದ ಸಂಪಾದಿಸುವಲ್ಲಿ ಕೆಲಮಟ್ಟಿಗೆ ಮಾತ್ರ ನಾನು ಯಶಸ್ವಿಯಾದೆ ಎಂದು ಅವರು ಹೇಳುತ್ತಿದ್ದರು. "ದಾಸರು ರಚಿಸಿದ ಮುಂಡಿಗೆಗಳಿಗೆ ವಿಶೇಷವಾಗಿ ಕನಕದಾಸರ ಸಾಹಿತ್ಯದಲ್ಲಿ ಬರುವ ಅನೇಕ ಸಂಗತಿಗಳನ್ನು ಮುಂಡಿಗೆಗಳನ್ನು ಅರ್ಥಪೂರ್ಣವಾಗಿ ವಿವರಿಸುವ ಕೆಲಸ ನಡೆಯಬೇಕು. ಇಂದಿನ ಚಿಕಿತ್ಸಕ ದೃಷ್ಟಿಯಲ್ಲಿ ಈ ಕ್ಷೇತ್ರದಲ್ಲಿ ತುಲನಾತ್ಮಕ ವಿಮರ್ಶಾತ್ಮಕ ಸಂಶೋಧನೆ ನಡೆಯಬೇಕು. ಈ ಭಕ್ತಿಗೀತಗಳಲ್ಲಿಯ ಶಬ್ದಸಂಪತ್ತು ಇಂದಿನ ಕನ್ನಡದಲ್ಲಿ ಸತ್ವಯುತವಾಗಿ ಬಳಕೆಯಲ್ಲಿ ಬರುವಂತಾಗಬೇಕು. ನಾನು ಮಾಡಬೇಕೆಂದಷ್ಟು ಕಾರ್ಯ ನನ್ನಿಂದ ಆಗಲಿಲ್ಲ," ಎಂದು ಅವರು ಆಗಾಗ ವ್ಯಥೆಪಟ್ಟುಕೊಳ್ಳುತ್ತಿದ್ದುದನ್ನು ನಾನು ಬಲ್ಲೆ.

■

ಸಾಮಾನ್ಯವಾಗಿ ಆನಂದ ಪಡಬೇಕಾದ ಕಾಲದಲ್ಲಿಯೂ ಅವರು ಹೇಗೆ ಆದರಿಂದ ವಂಚಿತರಾಗುತ್ತಿದ್ದರು ಎಂಬುದನ್ನು ಒಂದೆರಡು ಘಟನೆಗಳನ್ನು ವಿವರಿಸಿ ತೋರಿಸಬಹುದು. ಭಾವಗೀತೆಗಳನ್ನು ಹೇಳುವಾಗ ಶಬ್ದಾರ್ಥಕ್ಕೆ ಪ್ರಾಧಾನ್ಯವಿತ್ತು ಸಂಗೀತವನ್ನು ಅದರ ಸಂಗಾತಿಯಾಗಿಟ್ಟುಕೊಳ್ಳಬೇಕು ಎಂದು ಅವರು ಅಭಿಪ್ರಾಯವಿಟ್ಟುಕೊಂಡಿದ್ದರು. ಅನೇಕ ಸಲ ಅವರು ಕಾವ್ಯ ವಾಚನ ಕಾರ್ಯಕ್ರಮಗಳಲ್ಲಿ ಇದನ್ನು ಕವಿಗಳಿಗೆ ಸೂಚಿಸುತ್ತಿದ್ದರು. ಆದರೆ ಅವರಿಗೆ ಪ್ರಿಯವಾದ ಅವರದೇ ಒಂದು ಕವನವನ್ನು ವಿಚಿತ್ರ ರೀತಿಯಲ್ಲಿ ಆರಂಭಿಸಿ ಹಾಡಿದ್ದು ಅವರ ಮನ ನೋಯಿಸಿತು. ಖ್ಯಾತ ಗಾಯಕಿ ಸುಮನ ಕಲ್ಯಾಣಪುರರು ಆನಂದ ಕಂದರ "ಒಡನಾಡಿ ಬೇಕೆಂದು" ಕವನವನ್ನು ಮಧುರವಾಗಿಯೇ ಹಾಡಿದ್ದಾರೆ. ಆದರೆ ಆರಂಭದ 'ಒಡನಾಡಿ' ಮಾತ್ರ ಎಳೆದೆಳೆದು "ವ ssss ಡನಾ sssಡಿ' ಎಂಬುದು, ಮೊದಲ ಸಲ ಅದನ್ನು ಬೆಟಗೇರಿಯವರು ಕೇಳಿದಾಗ ಅವರ ಮನ ಕಲಕಿತ್ತು. "ಪಾಪ, ಕನ್ನಡದ ಗಂಧವೇ ಈಕೆಗೆ ಇಲ್ಲ. ಇಂಥ ಜನರಿಂದ ಈ ಹಾಡು ಹೇಳಿಸಬಾರದಿತ್ತು." ಎಂದು ನೊಂದುಕೊಂಡರೂ ಒಟ್ಟಾರೆ ಹಾಡು ಚೆನ್ನಾಗಿ ಬಂದಿದೆ ಎಂದು ಸಮಾಧಾನಪಟ್ಟುಕೊಂಡರು. ಅದೇನೇ ಇರಲಿ. ಬೆಟಗೇರಿಯವರು "ಒಡನಾಡಿ ಬೇಕೆಂದು ಬಯಸಿದೊಡೆ" ಬಂದು ನಿಂದ ಆ ಒಡನಾಡಿ ಇನ್ನೂ ಬೇಕು ಬೇಕು ಎನ್ನುತ್ತಿರುವಾಗಲೆ ಬಿಟ್ಟುಹೋದುದು ವಿಧಿವಿಲಾಸವೆ!

ಇನ್ನೊಂದು ಘಟನೆ. ಅವರ ಷಷ್ಠ್ಯಬ್ದಿ ಪೂರ್ತಿಗೆ ಸಂಬಂಧಪಟ್ಟುದು. ಬೆಟಗೇರಿಯವರಿಗೆ ಅರವತ್ತು ವರುಷ ತುಂಬುವವು ಎಂದು ತಿಳಿದ ಅವರ ಅಭಿಮಾನಿಯೊಬ್ಬರು ತಮ್ಮದೇ ಒಂದು ಸಮಿತಿ ರಚಿಸಿಕೊಂಡು ಅದರ ಕಾರ್ಯಾಲಯಕ್ಕಾಗಿ ಕರ್ನಾಟಕ ವಿದ್ಯಾವರ್ಧಕ ಸಂಘದ ಕಟ್ಟಡದಲ್ಲಿ ಇಂಬು ಕೊಡಿರಿ ಎಂದು ಕಾರ್ಯದರ್ಶಿಗಳನ್ನು ಬಾಯಿ ಮಾತಿನಲ್ಲಿ ಕೇಳಿದರು. ಬಾಯಿ ಮಾತಿನಲ್ಲೇ ಒಪ್ಪಿಗೆಯೂ ದೊರೆತು ಕಾರ್ಯಾರಂಭವಾಗಿ ಎಲ್ಲ ಸಿದ್ಧತೆಯೂ ಆಯಿತು.

ಕಾರ್ಯಕ್ರಮ ಗೊತ್ತಾಗಿ ಆಮಂತ್ರಣ ಪತ್ರಿಕೆ ಮುದ್ರಿಸುವಲ್ಲಿ ಆ ವ್ಯಕ್ತಿ ದುಡುಕಿದ. ಕರ್ನಾಟಕ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ಸತ್ಕಾರ ಸಮಿತಿ ಏರ್ಪಡಿಸಿದ ಕಾರ್ಯಕ್ರಮ ಎಂಬರ್ಥ ಬರುವಂತೆ ಪತ್ರಿಕೆಯ ಒಕ್ಕಣೆ ಇತ್ತು. ಅನಧಿಕೃತವಾಗಿ ಈ ರೀತಿ ಮಾಡಿ- ನಮ್ಮ ಹೆಸರ

ವನ್ನು ದುರುಪಯೋಗ ಮಾಡಿಕೊಂಡಿದ್ದೀರಿ. ನೀವು ಈ ಕಾರ್ಯಕ್ರಮ ಕೂಡಲೇ ರದ್ದು ಮಾಡಿರಿ ಎಂದು ಸಂಘದ ಕಾರ್ಯದರ್ಶಿಗಳು ಈ ವ್ಯಕ್ತಿಗೆ ತಿಳಿಸಿದರು. ಇದಕ್ಕೆ ಅವರು ಒಪ್ಪಿಕೊಳ್ಳದೆ ತಮ್ಮ ಕಾರ್ಯಕ್ರಮವನ್ನು ನಡೆಸಿಯೇ ತೀರುವ ದಾಗಿ ಹಟ ಹಿಡಿದರು. ಚರ್ಚೆ ವಿಕೋಪಕ್ಕೆ ಹೋಗಿ ವೈಯಕ್ತಿಕ ಘರ್ಷಣೆಯ ಮಟ್ಟಕ್ಕೆ ಏರಿ ವಿರಸದಲ್ಲಿ ಕೊನೆಗೊಂಡಿತು. ಕಾರ್ಯಕ್ರಮ ನಿಂತುಹೋಯಿತು. ಆ ವ್ಯಕ್ತಿ ಬೆಟಗೇರಿ ಅವ ರನ್ನು ತಮ್ಮ ಮನೆಗೆ ಕರೆದೊಯ್ದು ಅಲ್ಲಿಯೇ ಅವರನ್ನು ಸತ್ಕರಿಸಿ, ಉಡುಗೊರೆ ಇತ್ತು ತೃಪ್ತನಾಗಬೇಕಾಯಿತು. ಈ ಘಟನೆ ತುಸು ಅಸ-ಮಾಧಾನಕ್ಕೆ ಕಾರಣವಾದರೂ ಮುಂದೆ ವಿಶಾಲ ತಳಹದಿಯ ಮೇಲೆ ಸತ್ಕಾರ ಸಮಿತಿ ರಚನೆ ಯಾಗಿ, ಸಮಾರಂಭ ತುಂಬ ಯಶಸ್ವಿಯಾಗಿ ನಡೆ ಯಿತು. ಆಗ ಒಂದು ಹಮ್ಮಿಣಿಯನ್ನೂ ಅರ್ಪಿಸ ಲಾಯಿತು. ಇದೇ ಸಂದರ್ಭದಲ್ಲಿ ಮಿಂಚಿನ ಬಳ್ಳಿ ಯವರು 'ಆನಂದಕಂದ' ಎಂಬ ಅಭಿನಂದನ ಗ್ರಂಥವನ್ನು ಪ್ರಕಟಿಸಿದರು. ಇಂತಹ ಅನೇಕ ಘಟನೆಗಳು ಬೇಟಗೇರಿ ಅವರ ಜೀವನದಲ್ಲಿ ನಡೆದುಹೋದುದರಿಂದ ಆಗಾಗ ಆನಂದದ ಬಟ್ಟಲುಗಳು ಕೂಡ ತುಳುಕಿ ಚೆಲ್ಲಿ ಹೋದುವು. ಅವನ್ನೆಲ್ಲ ಇಲ್ಲಿ ವಿವರಿಸುವುದರಿಂದ ಮಾಸಿದ ಗಾಯಗಳು ಮತ್ತೆ ಹಸಿಯಾಗುವ ಸಂಭವವಿರು ದರಿಂದ ನಿದರ್ಶನಕ್ಕೆ ಮಾತ್ರ ಒಂದೆರಡು ಹೇಳಿದ್ದೇನೆ ಅಷ್ಟೆ. ✡

(ಬೆಟಗೇರಿಯವರ ಸಾಹಿತ್ಯಕ ಜೀವನವನ್ನು ಚಿತ್ರಿಸುವ 'ಜಯಂತಿ' ಎಂಬ ಕಥೆಯೊಂದನ್ನು 'ಅಶ್ವತ್ಥ'ರು ಬರೆದಿದ್ದು ಅದಕ್ಕಾಗಿ 'ಕಸ್ತೂರಿ'ಯ ೧೯೭೦ ನವಂಬರ್ ಸಂಚಿಕೆ ನೋಡಿ. –ಸಂಪಾದಕ)



## ಆದರ್ಶದ ಬದುಕು

ಶ್ರೀ ಶೀತಲ್ ಸಹಾಯ್ ಮಧ್ಯಪ್ರದೇಶದ ಭಾ.ಜ.ಪ. ದ ಶಾಸಕರು. ಅವರ ಒಬ್ಬನೇ ಮಗ ರಾಜು, ತನ್ನ ಹನ್ನೊಂದನೆಯ ವಯಸ್ಸಿನಲ್ಲಿ ಕ್ಯಾನ್ಸರಿನಿಂದ ವಿಧಿವಶನಾದ. ಪುತ್ರಶೋಕವನ್ನು ಹತ್ತಿಕ್ಕಲು ಯತ್ನಿಸುತ್ತಿದ್ದ ಸಹಾಯ್ ತಮ್ಮ ಸ್ವಂತ ಊರಾದ ಗ್ವಾಲೇರಿನಲ್ಲಿ ಒಂದು ಸುಸಜ್ಜಿತವಾದ ಕ್ಯಾನ್ಸರ್ ಆಸ್ಪತ್ರೆಯನ್ನು ತೆರೆಯುವ ದೃಢ ಸಂಕಲ್ಪ ಮಾಡಿದರು. ತಮ್ಮ ಜೀವಿತದಲ್ಲಿ ಸಂಗ್ರಹಿಸಿದ ೫೦,೦೦೦ ರೂಪಾಯಿಗಳನ್ನು ಈ ಘನೋದ್ದೇಶಕ್ಕೆ ದಾನವಾಗಿ ನೀಡಿ, ಆ ಆಸ್ಪತ್ರೆಗಾಗಿ ಒಂದು ಪ್ರತ್ಯೇಕ ಟ್ರಸ್ಟನ್ನೂ ಸ್ಥಾಪಿಸಿದರು. ಮೂರು ಹಂತಗಳಲ್ಲಿ ಪೂರ್ಣಗೊಳ್ಳಬೇಕಾಗಿದ್ದ ಈ ಯೋಜನೆ ೫೫ ಲಕ್ಷ ರೂಪಾಯಿ ವೆಚ್ಚದ ತನ್ನ ಪ್ರಥಮ ಹಂತವನ್ನು ಆಗಲೇ ಪೂರ್ತಿಗೊಳಿಸಿ ಸಮಾಜಕ್ಕೆ ತನ್ನ ಸೇವೆ ಸಲ್ಲಿಸ-ಲಾರಂಭಿಸಿದೆ. ಕಳೆದ ಒಂದು ದಶಕದಿಂದ ಸಹಾಯ್ ಸಾರ್ವಜನಿಕರಿಂದ ಇದಕ್ಕಾಗಿ ಹಣ ಸಂಗ್ರಹಿಸುತ್ತಿದ್ದಾರೆ. ಇವರ ಕಳಕಳಿಯ ವಿನಂತಿಯ ಮೇರೆಗೆ ೧೯೬೨ ರಲ್ಲಿ ರಾಜ್ಯದ ಎಲ್ಲ ಶಾಸಕರು, ಎಂ. ಪಿ. ಗಳು ತಮ್ಮ ಒಂದು ತಿಂಗಳ ವೇತನ-ವನ್ನು ಇದಕ್ಕೆ ಉದಾರವಾಗಿ ದೇಣಿಗೆ ನೀಡಿದರು. ಮರಣಶಯ್ಯೆಯಲ್ಲಿದ್ದ ಮುಸ್ಲಿಂ ಬಂಧುವೊಬ್ಬ ತನ್ನ ಇಡಿ ಜೀವಿತದ ಗಳಿಕೆಯನ್ನೆಲ್ಲಾ ಈ ಟ್ರಸ್ಟಿಗೆ ದಾನಮಾಡಿದ ಪ್ರಸಂಗವನ್ನು ಇಂದಿಗೂ ಹೃದಯದುಂಬಿ ಸ್ಮರಿಸಿಕೊಳ್ಳುತ್ತಾರೆ ಸಹಾಯ್.

(ಆಧಾರ: 'ಸಂಡೇ' ಆಂಗ್ಲ ಸಾಪ್ತಾಹಿಕ)

–ಎಸ್. ಪಿ. ಶ್ಯಾನಭಾಗ

ಅಂದು ಇಂದುಗಳಲ್ಲಿ
ಅದೆಂಥ ಅಂತರ...!

# ಕಾಜಲ್ – ಕಾಜಲ್!

**ಶ್ರೀನಿವಾಸ ವಾಡಪ್ಪಿ**

ಸುಮಾರು ಹದಿನೈದು ವರುಷಗಳ ಹಿಂದಿನ ಮಾತು. ಸುಖೀಜೀವನದ ಹೊಂಗನಸುಗಳನ್ನು ಕಾಣುತ್ತ, ಜಾಲಿಯಾಗಿ ಕಾಲೇಜಿನಲ್ಲಿ ಕಲಿಯುತ್ತಿರಬಹುದಾದ ದಿನಗಳವು. ಪರೀಕ್ಷೆ ಸಮೀಪಿಸಿದಾಗ ಹಗಲು ರಾತ್ರಿಯೆನ್ನದೆ ಓದಿ ತುಂಬಿಕೊಂಡಿರುತ್ತಿದ್ದ ಭೌತಶಾಸ್ತ್ರವನ್ನು ಪರೀಕ್ಷೆಯ ದಿನ ಬಂದು ಕಾಗದದ ಮೇಲೆ ಪ್ರವಹಿಸಿ ತಲೆ ಒದರಿಕೊಳ್ಳುತ್ತಿದ್ದ ದಿನಗಳವು.

ಆಗಲೇ ನಾನು ನನ್ನ ಸ್ನೇಹಿತನೊಂದಿಗೆ ರೀಗಲ್ ಚಿತ್ರಮಂದಿರದಲ್ಲಿ 'ಕಾಜಲ್' ಚಿತ್ರ ನೋಡಿದೆವು. ಹಿಂದಿ ನನಗೆ ಶಬ್ದಶಃ ಅರ್ಥವಾಗುತ್ತಿತ್ತು. ಬಿತ್ತಾರೆ ಚಿತ್ರದ ಒಳಸೊರಗುಗಳು ಗೊತ್ತಾಗಲಿಲ್ಲವೆಂದೇನಲ್ಲ. ಆದರೆ, ಜೀವನದ ಜಟಿಲತೆಯ ಅರಿವು ನನಗೆ ಆಗ ಆಗಿರಲಿಲ್ಲ–ವೆಂಬುದು ಸ್ಪಷ್ಟ. ಭಾವುಕತೆ, ಪ್ರಣಯ, ಮಾನವೀಯ ದುಗುಡ ದುಮ್ಮಾನಗಳು ಪರಂಪರೆಯ ಬಗ್ಗೆ ಇರುವ ಅವಿಚ್ಛಿನ್ನ ಆದರ ಇವುಗಳೆಲ್ಲವನ್ನೂ ಒಳಗೊಂಡ ಆ ಸಾಮಾಜಿಕ ಚಿತ್ರದ ಪ್ರಣಯ ಸಂಗೀತ, ಪ್ರಣಯ ದೃಶ್ಯಗಳು ನನ್ನ ಮೇಲೆ ಪ್ರಭಾವ ಬೀರಿದ್ದವೆಂಬುದು ನನಗಿನ್ನೂ ಖಚಿತವಾಗಿ ನೆನಪಿದೆ.

ಈಗ ೧೫ ವರುಷಗಳ ನಂತರ ಅದೇ ಚಿತ್ರವನ್ನು ಅದೇ ಚಿತ್ರಮಂದಿರದಲ್ಲಿ ನೋಡಿದೆ. ಥಟ್ಟನೆ ಗಾಬರಿಯಾದಂತೆ ಅನಿಸಿತು. ಮೊದಲನೆಯದಾಗಿ ೧೫ ವರುಷಗಳ ಜೀವನವನ್ನು ಈಗಾಗಲೇ ಕಳೆದುಬಿಟ್ಟಿದ್ದೇನೆ ಎಂಬುದರ ಅರಿವಾಗಿ ಪ್ರೌಢಿಮೆ ನನ್ನಲ್ಲಿ ಕಾಣಿಸಿಕೊಳ್ಳುತ್ತಿದೆಯೋ ಇಲ್ಲವೇ ಎಂಬುದನ್ನು ಪರೀಕ್ಷಿಸುವಂತಾಯಿತು.

ಎರಡನೆಯದಾಗಿ, ಈ ಕಳೆದ ೧೫ ವರುಷಗಳಲ್ಲಿ. ಜೀವನದ ವಿಶ್ವವಿದ್ಯಾನಿಲಯದಿಂದ ಕಲಿತದ್ದು ನಾನಾ ಬಗೆಯ ವಿಷಯಗಳನ್ನು. ಸ್ನಾತಕೋತ್ತರದ ಹತ್ತು ಹಲವಾರು ತರಬೇತಿಗಳು ಬೇರೆ ಬೇರೆ ಶಹರಗಳಲ್ಲಿ. ಸಮಾಜವಾದದ ಅಸ್ಪಷ್ಟ ಕಲ್ಪನೆಗಳು, ಹೊಸ ಪರಂಪರೆಯ ಸಾಹಿತ್ಯ, ಪರಂಪರೆಯ ತೊಡರುಗಳ ವಿರುದ್ಧ ಬಂಡೇಳುವ ಪ್ರವೃತ್ತಿ, ಅನೇಕ ಭಿನ್ನ ರೀತಿಯ ವಿಚಾರಗಳಿಗೆ ಸ್ಪಂದಿಸುತ್ತಾ ಬದುಕಿಗೊಂದು ಹೊಸ ಆಯಾಮ ಕಲ್ಪಿಸುವ ಹುಡುಗಾಟ. ಜೀವನದ ಸಮಸ್ಯೆಗಳನ್ನು ಎದುರಿಸುವುದರಲ್ಲಿಯೋ ಬಹುತೇಕ ಸಮಯ ಕಳೆಯುವ ಈ ದಿನಗಳಲ್ಲಿ 'ಕಾಜಲ್' ಚಿತ್ರ ಮತ್ತೊಮ್ಮೆ ನನಗೆ ಅರ್ಥಪೂರ್ಣವಾಗಿ ಕಂಡಿತು.

ಸಾಹಿರ ಲುಧಿಯಾನವಿ ಈ ಚಿತ್ರಕ್ಕೆ ಗೀತೆಗಳನ್ನು ಬರೆದಿದ್ದಾರೆಂಬುದೇ 'ಕಾಜಲ್' ಚಿತ್ರದ ಒಂದು ವೈಶಿಷ್ಟ್ಯ. ಶೋಷಣೆಯ ವಿರುದ್ಧ ಸಮರ್ಥವಾಗಿ ಪ್ರತಿಭಟಿಸುವ, ಸಾವಿರಾರು ವರುಷಗಳಿಂದ ಹೆಣ್ಣಿನ ಘನತೆಯನ್ನು ಗಾಬ

ವಾಗಿ ಕಾಣುವ ವಿಕ್ಷಿಪ್ತ ಸಮಾಜದ ವಿರುದ್ಧ ಸಿಡಿದೆದ್ದ ಸಮಾಜದ ದುರ್ಬಲ ವರ್ಗದವರ ಆಕ್ರೋಶಗಳನ್ನು ಸಮರ್ಥವಾಗಿ ಪ್ರತಿಪಾದಿಸಿದ ಕೆಲವೇ ಕವಿಗಳಲ್ಲಿ ಸಾಹಿರರೂ ಒಬ್ಬರು ಎಂಬುದು ಸಾಹಿತ್ಯಾಭ್ಯಾಸಿಗಳಿಗೆಲ್ಲರಿಗೂ ತಿಳಿದಿದೆ.

ಸಾಹಿತ್ಯ ಕೃತಿಯೇ ಇರಲಿ ಅಥವಾ ಕಲೆಯ ಯಾವುದೇ ಇನ್ನಿತರ ಅಭಿವ್ಯಕ್ತಿಯಾಗಲಿ ಮನದ ಆಳದಲ್ಲಿ ಅಚ್ಚಳಿಯದ ಪ್ರಭಾವ ಬೀರುವುದು ಅಲ್ಲಿಯ ವೈಯಕ್ತಿಕ ಅನಿಸಿಕೆಗಳು ಸಾರ್ವತ್ರಿಕವಾದಾಗ ಮಾತ್ರ. ನಾವು ಈ ಕಾದಂಬರಿ ಚೆನ್ನಾಗಿದ್ದೆ, ಈ ಕಲಾಕೃತಿ ಚೆನ್ನಾಗಿದೆ, ಈ ನಾಟಕ ಚೆನ್ನಾಗಿದೆ, ಈ ಚಲನಚಿತ್ರ ಚೆನ್ನಾಗಿದೆ ಎಂದು ಹೇಳುವುದರ ಹಿನ್ನೆಲೆಯಲ್ಲಿ ನಾವು ನಡೆದುಬಂದ ಸಾಮಾಜಿಕ ದಾರಿಯ ಉದ್ದಗಲವೂ ಇರುತ್ತದೆ.

ಇದರ ಜತೆಯಲ್ಲೇ ಪ್ರಣಯೋನ್ಮಾದದ ದೃಶ್ಯಗಳು. ದಟ್ಟ ದಾರಿದ್ರ್ಯದಿಂದ ಒಮ್ಮೆಲೇ ಸ್ಥಿತಿವಂತನಾಗುವವನ ಕಥೆ. ಮಾನವೀಯ ಅಂಶಗಳ ರಸವತ್ತಾದ ಚಿತ್ರಣ. ಪರಿಣಾಮ-ಕಾರಿಯೆನಿಸುವ ಸಾವಿನ ದೃಶ್ಯಗಳು ಇವೆಲ್ಲವುಗಳನ್ನು ನಮ್ಮ ಮಾನಸಿಕ ಸ್ಥಿತಿಯ ಹಿನ್ನೆಲೆಯಲ್ಲಿ ಪರೀಕ್ಷಿಸಿದಾಗ ಅವು ತುಂಬ ನವಿರಾಗಿ ನಮ್ಮೆದುರಿಗೆ ಬಿಚ್ಚಿಕೊಳ್ಳುತ್ತವೆ.

ಶತಮಾನಗಳ ಮಡಿವಂತಿಕೆಯ ಬದುಕು ನಮಗೆ ಸ್ಪಷ್ಟವಾದ ರೂಪರೇಷೆಗಳನ್ನು ಎಳೆದು ಬಿಟ್ಟಿದೆ. ಗಂಡಿನ ಪ್ರತಿಷ್ಠೆಗೆ ಧಕ್ಕೆ ಬರದಿರುವುದು, ಹೆಣ್ಣು ಯಾವಾಗಲೂ ತ್ಯಾಗಮಯಿ, ಸಹನಶೀಲೆ. ಅವಳ ಬದುಕೆಲ್ಲ ಬೇರೆಲ್ಲರ ಜೀವನ ಹಸನಾಗಿರಿಸುವದಕ್ಕಾಗಿಯೇ. ವಿಲೋಮ ವಿವಾಹಗಳು, ದೇವರಲ್ಲಿ ಅಸ್ಖಲಿತ ಶ್ರದ್ಧೆ, ಪಾಪ ಪುಣ್ಯಗಳ ಮಾನದಂಡ. ಪುನರ್ಜನ್ಮದಲ್ಲಿಯ ನಂಬಿಕೆಗಳು ಮತ್ತು ಅನೇಕ ತರಹದ ಮೂಢನಂಬಿಕೆಗಳನ್ನು ಪೋಷಿಸುವ ಬಹುತೇಕ ಚಲನಚಿತ್ರಗಳಿಗಿಂತ 'ಕಾಜಲ್' ಭಿನ್ನವಾಗಿಲ್ಲ ನಿಜ. ಆದರೆ ಒಳ್ಳೆಯದನ್ನು ಕೆಟ್ಟದ್ದೆಂದು ಸಾಬೀತು ಮಾಡುವ ಜಗತ್ತಿನ ವಿಚಿತ್ರ ರೀತಿ ನೀತಿಗಳನ್ನು ಯಾವ ಮುಲಾಜೂ ಇಲ್ಲದೆ ಖಂಡಿಸುವ ಸಾಹಿರರ ಗೀತೆಗಳು ಸಂವೇದನಾಶೀಲ ವ್ಯಕ್ತಿಯನ್ನು ಉದ್ದೀಪನಗೊಳಿಸುತ್ತವೆ.

ಭಾವನಾಪ್ರಧಾನ ಸಂಭಾಷಣೆಗಳು. ಪಾತ್ರದ ಆಳವನ್ನು ಹೊಕ್ಕು ಅಭಿನಯಿಸುವ ಕಲಾ ಚಾತುರ್ಯ ಇವುಗಳಿಂದಾಗಿ ಪ್ರೇಕ್ಷಕನ ಮಾನಸ್ಸನ್ನು ಸೂರೆಗೊಳ್ಳುವುದರಲ್ಲಿ ಸಫಲವಾಗುತ್ತದೆ 'ಕಾಜಲ್'.

ಚಿತ್ರ ನೋಡಿಯಾದ ಮೇಲೆ ಅದು ಮನದ ಮೇಲೆ ಕೆಲ ದಿನಗಳಾದರೂ ದಟ್ಟವಾದ ಪ್ರಭಾವ ಬೀರುವಂತಿದ್ದರೆ ಚಿತ್ರ ಮಾಧ್ಯಮ ಬದುಕಿಗೆ ಹತ್ತಿರವಾಗಿದೆ ಎಂಬುದು ನಿಸ್ಸಂದೇಹದ ಮಾತಾಗುತ್ತದೆ. ✡



## "ತನ್ಮಯತೆ"

ಜಗತ್ಪ್ರಸಿದ್ಧ ಕಲಾವಿದ ಪಿಕಾಸೊ ಚಿತ್ರರಚನೆಯಲ್ಲಿ ತೊಡಗಿದಾಗ ಒಂದೇ ಸಮನೆ ನಾಲ್ಕೈದು ಗಂಟೆಗಳ ವರೆಗೆ ನಿಂತುಬಿಡುತ್ತಿದ್ದ. ಆತನ ಸಂಗಾತಿ, ಫ್ರಾಂಕೊಯಿ ಗಿಲಟ್ ಒಮ್ಮೆ ಆತನನ್ನು ಕೇಳಿದಳು: "ಒಂದೇ ಸ್ಥಳದಲ್ಲಿ ಹೀಗೆ ನಾಲ್ಕೈದು ಗಂಟೆಗಳ ವರೆಗೆ ನಿಲ್ಲುವುದರಿಂದ ನಿನಗೆ ದಣಿವಾಗುವುದಿಲ್ಲವೆ?" ಅದಕ್ಕೆ ಪಿಕಾಸೊ ಮುಗುಳ್ನಕ್ಕು ತಲೆಯಾಡಿಸಿ ಹೇಳಿದ, "ಹಾಗೆ ನಿಲ್ಲುವದರಿಂದಲೇ ಕಲಾವಿದರು ಹೆಚ್ಚು ಕಾಲ ಬದುಕುತ್ತಾರೆ. ಮುಸ್ಲಿಮರು ಮಸೀದೆಯನ್ನು ಪ್ರವೇಶಿಸುವ ಮೊದಲು ಚಪ್ಪಲಿಯನ್ನು ಹೊರಗೇ ಕಳಚಿಡುವಂತೆ ನಾನು ಕೆಲಸ ಮಾಡುವಾಗ ನನ್ನ ದೇಹವನ್ನು ಬಾಗಿಲ ಬಳಿಯೇ ಇಟ್ಟಿರುತ್ತೇನೆ. ಮನಸ್ಸು ಮಾತ್ರ ಕೆಲಸದಲ್ಲಿ ತೊಡಗಿರುತ್ತದೆ."

ಸಂಗ್ರಹ: ರೇಣುಕಾ. ವಿ. ಕೆ.

ಆಧುನಿಕ ಭಾರತ ಕಂಡ
ಅಪೂರ್ವ ಜೊತೆಯಿದು

# ದೇಶಮುಖ ದಂಪತಿ

**ಎಂ. ಡಿ. ರಾಣೆ**

ಇತ್ತೀಚೆಗೆ ನಿಧನರಾದ ಚಿಂತಾಮಣಿರಾವ್ ದೇಶಮುಖ ಅವರು ಸಂಸ್ಕೃತ ವಿದ್ವಾಂಸ, ಅರ್ಥಶಾಸ್ತ್ರಜ್ಞ, ಆಡಳಿತಗಾರ. ಮೇಲಾಗಿ ಶಿಕ್ಷಣತಜ್ಞ. ಭಾರತದಲ್ಲಿ ಆಗಿಹೋದ ಅರ್ಥಮಂತ್ರಿಗಳಲ್ಲೇ ಮಹಾ ಮೇಧಾವಿಯಾದ ಇವರ ಸ್ಥಾನ ಹಿರಿಯದು, ಮಹತ್ವದ್ದು.

ಅವರಿನ್ನೂ ಕಾಲೇಜಿನಲ್ಲಿ ಕಲಿಯುತ್ತಿರುವಾಗ ಒಂದು ದಿನ ಟಿಳಕರನ್ನು ಭೆಟ್ಟಿಯಾಗಲು ಹೋದಾಗ ಲೋಕಮಾನ್ಯರು ಮರುದಿನದ ಪತ್ರಿಕೆಗಾಗಿ ಲೇಖನ ಬರೆಯುತ್ತಾ ಕುಳಿತುಕೊಂಡಿದ್ದರು. ಅವರನ್ನು ಭೆಟ್ಟಿಯಾಗಲು ಬೇರೆ ಕೆಲವರು ಬಂದಿದ್ದರಿಂದ ಲೇಖನವನ್ನು ಪೂರ್ಣಗೊಳಿಸುವದು ಸಾಧ್ಯವಿಲ್ಲದ ಮಾತೆಂದು ಲೋಕಮಾನ್ಯರಿಗೆ ಅಸಮಾಧಾನವಾಯಿತು. ದೇಶಮುಖರು ಮೆಲ್ಲನೆ ನುಡಿದರು, "ಸರ್, ನಾನು ಈ ಲೇಖನವನ್ನು ಮುಂದುವರಿಸಿ ಪೂರ್ತಿಗೊಳಿಸಬಹುದೇ ?" ಈ ಸಣ್ಣ ಹುಡುಗ ಅದೆಂತು ತಮ್ಮ ಲೇಖನವನ್ನು ಪೂರ್ತಿಗೊಳಿಸಿಯಾನು ಎಂಬ ದಿಗಿಲು ಅವರಿಗೆ. ಆದರೂ ಪರೀಕ್ಷಿಸೋಣ ಎಂದುಕೊಂಡು ಲೇಖನದಲ್ಲಿರಬೇಕಾದ ಅಂಶಗಳನ್ನು ಹೇಳಿ "ಬರೆ" ಎಂದರು. ಬಂದವರೊಂದಿಗೆ ಮಾತನಾಡಿ ಬರವಷ್ಟರಲ್ಲಿ ತರುಣ ದೇಶಮುಖ ಲೇಖನ ಪೂರ್ತಿಗೊಳಿಸಿದ್ದರು. ಅದನ್ನು ಓದಿ ಲೋಕಮಾನ್ಯರಿಗೆ ತುಂಬಾ ಸಂತೋಷವಾಯಿತು. "ಮಗು, ಭಾರತಕ್ಕೆ ನಿನ್ನಂಥ ಮೇಧಾವಿಯೊಬ್ಬ ಅರ್ಥಮಂತ್ರಿಯಾದರೆ, ನಮ್ಮ ದೇಶದ ಆರ್ಥಿಕ ಸ್ಥಿತಿ ತುಂಬಾ ತೃಪ್ತಿಕರವಾಗಿರಬಲ್ಲುದೆಂಬ ನಂಬಿಕೆ ನನಗಿದೆ," ಎಂದರಂತೆ. ಅವರ ಹಾರೈಕೆ ಹುಸಿ ಹೋಗಲಿಲ್ಲ.

ಸ್ವಾತಂತ್ರ್ಯಪೂರ್ವದಲ್ಲಿ ರಿಜರ್ವ್ ಬ್ಯಾಂಕಿನ ಗವರ್ನರರಾಗಿದ್ದ ದೇಶಮುಖರು ಸ್ವಾತಂತ್ರ್ಯ ನಂತರ ದೇಶದ ಅರ್ಥಮಂತ್ರಿಯಾಗಿ ಇತಿಹಾಸವನ್ನೇ ನಿರ್ಮಿಸಿದರು.

ನಮ್ಮ ದೇಶದ ಅಭಿವೃದ್ಧಿಗೆ ಪಂಚವಾರ್ಷಿಕ ಯೋಜನೆಗಳನ್ನು ರೂಪಿಸಿದವರೇ ದೇಶಮುಖರು. ಪುಣೆಯಲ್ಲಿಯ ತಮ್ಮ ಬಂಗಲೆಗೆ ಅವರಿಟ್ಟ ಹೆಸರು ಕೂಡ 'ಯೋಜನಾ.' ಅವರದು ಯೋಜನಾಬದ್ಧ ಜೀವನ.

ದೇಶಮುಖರು ದಿಟ್ಟ ವ್ಯಕ್ತಿ. ಖಂಡಿತವಾದಿ ಕೂಡ. ಕಂಡದ್ದನ್ನು ಕಂಡ ಹಾಗೆಯೇ ಆಡುವ ಖಂಡಿಸುವ ಜಾಯಮಾನದವರು. ದೇಶ ಭಾರತ ಮತ್ತು ಪಾಕಿಸ್ತಾನ ಎಂದು ಎರಡು ಹೋಳಾಗಿ ಸರಕಾರದ ಸ್ಥಿರಾಸ್ತಿ ಮತ್ತು ಉತ್ಪನ್ನವನ್ನು ಎರಡೂ ದೇಶಗಳಲ್ಲಿ ಹಂಚುವ ಕೆಲಸವನ್ನು ಪಾರ್ಟಿಶನ್ ಕೌನ್ಸಿಲ್ಲಿಗೆ ಬಿಟ್ಟುಕೊಟ್ಟ ಸಂದರ್ಭ. ಈ ಕೌನ್ಸಿಲ್ ಪಾಕಿಸ್ತಾನಕ್ಕೆ ಭಾರತವು ೫೫ ಕೋಟಿ ರೂಪಾಯಿಗಳನ್ನು ಕೊಡಬೇಕೆಂದೂ ಪಾಕಿಸ್ತಾನಿ ಬಂಡುಖೋರರು ಕೂಡಲೇ ಕಾಶ್ಮೀರದಿಂದ ತೊಲಗಬೇಕೆಂದೂ ಸಲಹೆ ನೀಡಿತು. ಗೃಹಮಂತ್ರಿಗಳಾಗಿದ್ದ ಸರದಾರ ಪಟೇಲರು ಒಪ್ಪಂದದ

ಎಲ್ಲ ಕರಾರುಗಳನ್ನೂ ಪಾಕಿಸ್ತಾನ ಪಾಲಿಸಬೇಕೆಂದು ಪಾರ್ಲಿಮೆಂಟಿನಲ್ಲಿ ಕರೆ ನೀಡಿದಾಕ್ಷಣ ಪಾಕಿಸ್ತಾನದ ಆಗಿನ ಪ್ರಧಾನ ಮಂತ್ರಿ ಲಿಯಾಕತ್ ಅಲಿಖಾನರು, ಪಾಕಿಸ್ತಾನದ ಹಿತಕ್ಕೆ ಭಾರತ ಅಡ್ಡಿಯನ್ನು ಉಂಟುಮಾಡುತ್ತಿದೆ. ಭಾರತ ಪಾಕಿಸ್ತಾನಕ್ಕೆ ಕೊಡಬೇಕಾದ ಹಣವನ್ನು ನಗದಾಗಿ ಕೊಡದೇ ಇದ್ದ ಪಕ್ಷದಲ್ಲಿ ಪಾಕಿಸ್ತಾನ ತನ್ನ ಕಾಶ್ಮೀರ ಧೋರಣೆಯನ್ನು ಬದಲಿಸಬೇಕಾಗುವುದು ಎಂದು ಎಚ್ಚರಿಕೆ ನೀಡಿದರು. ಇದರಿಂದ ಕೆರಳಿದ ಪಟೇಲರು ಒಪ್ಪಂದದ ಎಲ್ಲ ಕರಾರುಗಳನ್ನು ಪಾಕಿಸ್ತಾನ ಪಾಲಿಸದೇ ಇದ್ದಲ್ಲಿ ಹಣ ಕೊಡಲಾಗುವದಿಲ್ಲೆಂದು ಸ್ಪಷ್ಟಪಡಿಸಿದರು. ಅರ್ಥ ಮಂತ್ರಿಗಳಾದ ಷಣ್ಮುಗಂ ಚೆಟ್ಟಿ ಸರದಾರರಿಗೆ ಬೆಂಬಲ ನೀಡಿದರು. ಪಂಡಿತ ನೆಹರೂ ಮಾತ್ರ ಭಾರತ ನೈತಿಕ ದೃಷ್ಟಿಯಿಂದ ಪಾಕಿಸ್ತಾನಕ್ಕೆ ಹಣ ಕೊಡಬೇಕೆನ್ನುವವರಾಗಿದ್ದರು. ಇತ್ತ ಗಾಂಧೀಜಿ ಪಾಕಿಸ್ತಾನಕ್ಕೆ ಭಾರತ ಹಣ ಕೊಡಬೇಕೆನ್ನುವ ವಿಷಯದಲ್ಲಿ ಅನಿರ್ದಿಷ್ಟ ಉಪವಾಸವನ್ನು ಪ್ರಾರಂಭಿಸಿದರು. ಈ ಹಂತದಲ್ಲಿ ರಿಜರ್ವ್ ಬ್ಯಾಂಕಿನ ಗವ್ಹರ್ನರರಾಗಿದ್ದ ಸಿ. ಡಿ. ದೇಶಮುಖರವರು ಗಾಂಧೀಜಿಯನ್ನು ಭೆಟ್ಟಿಯಾಗಿ ವಾಸ್ತವಿಕ ಪರಿಸ್ಥಿತಿಯನ್ನು ಅರುಹಿ, ಲಿಯಾಕತ್ ಅಲಿಖಾನರ ಆರೋಪ ಕೇವಲ ರಾಜಕೀಯ ಬೂಟಾಟಿಕೆ ಎನ್ನುವುದನ್ನು ತಿಳಿಯಪಡಿಸಿದರು. ಈ ವೇಳೆಗೆ ಪಟೇಲರು ಪಾಕಿಸ್ತಾನಕ್ಕೆ ಭಾರತ ಹಣ ಕೊಡಬೇಕೆಂಬ ವಾದವನ್ನು ಒಪ್ಪಿದ್ದರಿಂದ ಗಾಂಧೀಜಿ ತಮ್ಮ ಉಪವಾಸವನ್ನು ಮುರಿದರು.

ಕುಶಲ ಆಡಳಿತಗಾರರಾದ ಚಿಂತಾಮಣರಾವ್ ದೇಶಮುಖರು, ಆಡಳಿತದಲ್ಲಿ ಕಂಡು ಬರುತ್ತಿರುವ ಭ್ರಷ್ಟಾಚಾರವನ್ನು ವಿರೋಧಿಸುತ್ತಿದ್ದರು. ರಾಜಕಾರಣಿಗಳು, ಹಿರಿಯ ಅಧಿಕಾರಿಗಳು ಭ್ರಷ್ಟ ಜೀವನ ನಡೆಸುತ್ತಿರುವದನ್ನು ಕಂಡು ಇದನ್ನು ತಡೆಗಟ್ಟಲು ರಾಷ್ಟ್ರಪತಿಗಳ ನೇರವಾದ ನಿಯಂತ್ರಣದ ಅಡಿಯಲ್ಲಿ ಒಂದು ಟ್ರಿಬ್ಯೂನಲ್ ಅಥವಾ ಓಂಬುಡ್ಸ್‌ಮನ್ ಸ್ಥಾಪಿಸಬೇಕೆಂದೂ ಇದು ದೊಡ್ಡ ವ್ಯಕ್ತಿಗಳ ವಿರುದ್ಧ ಮಾಡಲಾದ ಭ್ರಷ್ಟಾಚಾರದ ಆರೋಪಗಳನ್ನು ಸ್ವತಂತ್ರವಾಗಿ ವಿಚಾರಿಸಬೇಕೆಂದೂ ಸಲಹೆ ನೀಡಿದರು. ಆಗ ರಾಷ್ಟ್ರಪತಿಯಾಗಿದ್ದ ಡಾ. ಬಾಬೂ ರಾಜೇಂದ್ರ ಪ್ರಸಾದರೂ ದೇಶಮುಖರಿಗೆ ತಮ್ಮ ಬೆಂಬಲ ನೀಡಿದರು. ಆದರೆ ಈ ಸೂಚನೆ ಗಾಳಿಯಲ್ಲಿ ತೇಲಿಹೋಯಿತು.

ಫಜಲ್ ಅಲಿ ಆಯೋಗದ ವರದಿಯ ಪರಿಣಾಮವಾಗಿ ಭಾಷಾವಾರು ಪ್ರಾಂತಗಳನ್ನು ರಚಿಸಿದಾಗ ಮುಂಬೈ ಪಟ್ಟಣವನ್ನು ಯಾವ ರಾಜ್ಯದಲ್ಲಿಡಬೇಕೆಂಬುದೊಂದು ತಲೆ ತಿನ್ನುವ ವಿಷಯವಾಯಿತು. ಮುಂಬಯಿ ಭಾರತದ ವಾಣಿಜ್ಯ ರಾಜಧಾನಿ. ಬಹುಸಂಖ್ಯಾತರು ಮಹಾರಾಷ್ಟ್ರದವರಿದ್ದರೂ ಉದ್ದಿಮೆದಾರರೆಲ್ಲ ಗುಜರಾಥದವರು. ಆದ್ದರಿಂದ ಕಾಂಗ್ರೆಸ್ ಹೈಕಮಾಂಡ್ ಮಹಾರಾಷ್ಟ್ರ – ಗುಜರಾಥ ಸಂಯುಕ್ತ ರಾಜ್ಯದ ರಾಜಧಾನಿ ಮುಂಬೈ ಆಗಬೇಕೆಂದು ನಿರ್ಧರಿಸಿತು. ಈ ಸಭೆಯಲ್ಲಿ ಪಂ. ನೆಹರೂ, ಗೃಹಮಂತ್ರಿಗಳಾದ ಗೋವಿಂದ ವಲ್ಲಭ ಪಂತ, ಅಜಾದರು ಉಪಸ್ಥಿತರಿದ್ದರು. ಕೇಂದ್ರ ಸರಕಾರವೂ ಇದೇ ರೀತಿಯ ನಿರ್ಣಯ ಮಾಡಿತು. ಪಂ. ನೆಹರೂ ಕೂಡ ಪಾರ್ಲಿಮೆಂಟಿನಲ್ಲಿ ಇದೇ ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ದೇಶಮುಖರಿಗೆ ಮಾತ್ರ ಇದು ಸರಿ ಬರಲಿಲ್ಲ. ಮುಂಬೈ ಪಟ್ಟಣ ಒಳಗೊಂಡ ಮಹಾರಾಷ್ಟ್ರ ಪ್ರಾಂತವನ್ನು ರಚಿಸಬೇಕೆಂದು ವಾದಿಸಿ, ಪಂ. ನೆಹರೂರ ಹೇಳಿಕೆಯನ್ನು ಖಂಡಿಸಿ ರಾಜೀನಾಮೆ ನೀಡಿದರು. ದೇಶಮುಖರು ತಮ್ಮ ಹೇಳಿಕೆಯನ್ನೇ ಪ್ರಕಟಿಸಿದ್ದರಿಂದ ಕೋಪಗೊಂಡ ನೆಹರೂ ಪಾರ್ಲಿಮೆಂಟಿನಲ್ಲಿ "ಪ್ರಧಾನಿ ಯಾವಾಗಲೂ ಪ್ರಧಾನಿಯೇ. ಆತನು ಸರಕಾರದ ಧೋರಣೆಯನ್ನು ನಿರ್ಧರಿಸುವವನು. ಸಂವಿಧಾನದಲ್ಲಿ ಪ್ರಧಾನಿ ಸರಕಾರದ ಕೀಲು ಇದ್ದಂತೆ. ಪ್ರಧಾನಿ ಒಂದು ಹೇಳಿಕೆಯನ್ನು ಕೊಡಲಾರ ಎಂದೆನ್ನುವುದು ಭೀಕರವಾದ ವಾತೇಸ್ಯೆ!" ಎಂದು ಉದ್ಗರಿಸಿದರು.

ದೇಶಮುಖರು ಕೇವಲ ದಕ್ಷ ಆಡಳಿತಗಾರರಾಗಿರಲಿಲ್ಲ, ಕಲೆಯ ಆರಾಧಕರೂ ರಸಿಕರೂ ಆಗಿದ್ದರು. ೧೯೫೨ರಲ್ಲಿ ಪಂ. ನೆಹರೂ ದುರ್ಗಾಬಾಯಿಯವರನ್ನು ಯೋಜನಾ ಆಯೋಗದ ಸಭಾಸದರೆಂದು ನೇಮಿಸಿ ಸಮಾಜ ಸೇವೆ



ಶ್ರೀ ಸಿ. ಡಿ. ದೇಶಮುಖ

ಮತ್ತು ಸಮಾಜ ಕಲ್ಯಾಣ ವಿಭಾಗ ನೀಡಿದಾಗ ಅರ್ಥಮಂತ್ರಿ ಎನ್ನುವ ಆಧಾರದಿಂದ ಯೋಜನಾ ಆಯೋಗದ ಅಧಿಕಾರೇತರ ಸಭಾಸದರಾಗಿದ್ದ ದೇಶಮುಖರಿಗೂ ದುರ್ಗಾಬಾಯಿಯವರಿಗೂ ನಿಕಟ ಸಂಬಂಧ ಉಂಟಾಗಿ ಸ್ನೇಹದಲ್ಲಿ ಪರಿವರ್ತನೆ ಹೊಂದಿ ಮದುವೆಯಲ್ಲಿ ಪರ್ಯವಸಾನ ಹೊಂದಿದ್ದು ಒಂದು ಅವಿಸ್ಮರಣೀಯ ಘಟನೆ. ಇಬ್ಬರೂ ಮನಸ್ವಿನಿಯವರು. ದುರ್ಗಾಬಾಯಿಯವರಂತೂ ಎಳವೆಯಲ್ಲೆ ಮದುವೆಯಾಗಿದ್ದರು. ಇಬ್ಬರೂ ತಮ್ಮದೇ ಆದ ರೀತಿಯಲ್ಲಿ ಮಹಾನ್ ವ್ಯಕ್ತಿಗಳು. ದುರ್ಗಾಬಾಯಿ ಮೇ ೯,೧೯೮೧ ರಂದು ಈ ಜಗತ್ತಿಗೆ ವಿದಾಯ ಹೇಳಿದರು. ದೇಶಮುಖರೂ ಪತ್ನಿಯ ವಿರಹವನ್ನು ತಾಳದೇ ಹೋಗಿಬಿಟ್ಟರೆಂದು ಕಾಣುತ್ತದೆ.

ದುರ್ಗಾಬಾಯಿ, ತಮ್ಮಿಬ್ಬರ ಪ್ರಣಯದ–ಉದಾತ್ತ ಪ್ರೇಮದ ಕಥೆಯನ್ನು ತಮ್ಮ "ಚಿಂತಾಮಣಿ ಮತ್ತು ನಾನು" ಎನ್ನುವ ಗ್ರಂಥದಲ್ಲಿ ನಿರೂಪಿಸಿದ್ದಾರೆ. ದೇಶಮುಖರು ದುರ್ಗಾಬಾಯಿಯವರನ್ನು ತಮ್ಮನ್ನು ಮದುವೆಯಾಗಲು ಕೇಳಿಕೊಂಡಾಗ, "ನಾನು ಹಳ್ಳಿಯ ಹುಡುಗಿ, ನನಗೆ ಫ್ಯಾಶನೇಬಲ್ ಚಪ್ಪಲಿ ಧರಿಸಲು, ಸಂಜೆಯ ಪಾರ್ಟಿಗಳಿಗೆ ಹೋಗಲು ತಿಳಿಯದು. ಆದರೂ ನೀವು ಮದುವೆಯಾಗುತ್ತೀರಾ?" ಎಂದು ಕೇಳಿದಾಗ ಚಿಂತಾಮಣಿಯವರು ಅವರನ್ನು ತಮ್ಮ ಬಂಗಲೆಯ ಪರಿಸರದಲ್ಲಿದ್ದ ನೀಲಗಿರಿ ಗಿಡದತ್ತ ಒಯ್ದು ಗಿಡದ ತೊಗಟೆಯ ಮೇಲೆ ಎರಡು ಸಂಸ್ಕೃತದ ಶ್ಲೋಕಗಳನ್ನು ಬರೆದರಂತೆ. "ಇದೇ ಮದುವೆಯ ಬೇಡಿಕೆಯಾಗಿತ್ತು. ನಾನು ಸೂಚನೆ ಒಪ್ಪಿದೆ. ಅವರು ನನ್ನನ್ನು ಚುಂಬಿಸಿದರು!" ಎಂದು ಹೃದಯಂಗಮವಾಗಿ ವರ್ಣಿಸಿದ್ದಾರೆ. ಅವರ ಮದುವೆಯಾದದ್ದು ಜನೆವರಿ ೧೯೫೩ರಲ್ಲಿ. ಮದುವೆಯ ಸೂತ್ರಧಾರಿ ಯಾರು ಗೊತ್ತೇ? ಪಂಡಿತ ನೆಹರೂ! ಮದುವೆಗೆ ಸಾಕ್ಷಿದಾರರು ಜವಾಹರಲಾಲ ನೆಹರೂ ಮತ್ತು ಆಚಾರ್ಯ ಕೃಪಲಾನಿಯವರು! ಮದುವೆಯ ನಂತರ ಗಂಡ–ಹೆಂಡಿರಿಬ್ಬರೂ ಯೋಜನಾ ಆಯೋಗದ ಸಭಾಸದರಾಗಿರುವುದು ಉಚಿತವಲ್ಲವೆಂದು ಹೆಂಡತಿ ರಾಜೀನಾಮೆ ನೀಡಿದರು. ಆದರೆ ದೇಶಕ್ಕೆ ಅವರ ಸೇವೆ ಬೇಕಾಗಿತ್ತು. ಆದ್ದರಿಂದ ಅವರನ್ನು ಕೇಂದ್ರೀಯ ಸಮಾಜ ಕಲ್ಯಾಣ ಮಂಡಳಿಯ ಪ್ರಥಮ ಚೇರಮನ್ನರೆಂದು ನೇಮಿಸಲಾಯಿತು. ಪತಿ–ಪತ್ನಿ ಇಬ್ಬರೂ ಎಲ್ಲ ದೃಷ್ಟಿಯಿಂದಲೂ ಸರಿಸಮಾನರಿದ್ದುದರಿಂದ ಯಾರು ಯಾರ ಮೇಲೆ ಹೆಚ್ಚು ಪ್ರಭಾವ ಬೀರಿದರು ಎನ್ನುವ ಪ್ರಶ್ನೆ ತಲೆದೋರಬಹುದು. ದುರ್ಗಾಬಾಯಿಯವರಂತೂ ಸ್ವಶ್ರಮದಿಂದಲೇ ಮುಂದೆ ಬಂದವರು. ತಮ್ಮ ೨೫ನೇ ವರ್ಷಕ್ಕೆ ಸ್ವಪ್ರಯತ್ನದಿಂದ ಮ್ಯಾಟ್ರಿಕ್ ಪಾಸಾಗಿ, ಬನಾರಸ ಹಿಂದೂ ವಿಶ್ವ

ವಿದ್ಯಾಲಯದಿಂದ ಇಂಟರಮಿಡಿಯೇಟ್ ಪರೀಕ್ಷೆ ಪಾಸಾದ ಅವರಿಗೆ ರಾಜ್ಯಶಾಸ್ತ್ರ ಪ್ರಧಾನ ವಿಷಯವನ್ನಾಗಿ ತೆಗೆದುಕೊಂಡು ಪದವಿಯನ್ನು ಪಡೆಯುವ ಹಂಬಲವಿತ್ತು. ಸಂಪ್ರದಾಯಸ್ಥರಾದ ಪಂಡಿತ ಮದನಮೋಹನ ಮಾಲವೀಯರು ಆ ವಿಶ್ವವಿದ್ಯಾಲಯದ ಸಂಸ್ಥಾಪಕ ಕುಲಪತಿಗಳು. ಒಬ್ಬ ಮಹಿಳೆ ರಾಜ್ಯಶಾಸ್ತ್ರವನ್ನು ಪ್ರಧಾನ ವಿಷಯವನ್ನಾಗಿ ಆರಿಸಿಕೊಳ್ಳುವುದು ಅವರಿಗೆ ಬೇಕಾಗಿರಲಿಲ್ಲ. ಆದ್ದರಿಂದ ದುರ್ಗಾಬಾಯಿ ಆಂಧ್ರ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಡಾ. ಸಿ. ಆರ್. ರೆಡ್ಡಿಯವರ ಸಹಾಯದಿಂದ ರಾಜ್ಯಶಾಸ್ತ್ರ ವಿಷಯ ತೆಗೆದುಕೊಂಡು ಪದವಿ ಪಡೆದರು. ೧೯೪೧ರಲ್ಲಿ ಕಾನೂನು ಪರೀಕ್ಷೆ ಪಾಸುಮಾಡಿ ಮದ್ರಾಸ್ ಹೈಕೋರ್ಟಿನಲ್ಲೂ ನಂತರ ಸುಪ್ರೀಂ ಕೋರ್ಟಿನಲ್ಲೂ ವಕಾಲತ್ತನ್ನು ಪ್ರಾರಂಭಿಸಿದರು. ದುರ್ಗಾಬಾಯಿಯವರು ೧೯೨೩ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಕಾಕಿನಾಡಾದಲ್ಲಿ ಅಧಿವೇಶನ ಸೇರಿತ್ತು. ಆ ಕೇವಲ ೧೪ ವರ್ಷದ ಈ ಪುಟ್ಟ ಹುಡುಗಿ ೪೦೦ ಸ್ವಯಂಸೇವಕಿಯರ ದಳವನ್ನು ಸಂಘಟಿಸಿದ್ದಳಂತೆ. ಪಾಸು ಇಲ್ಲದೇ ಅಧಿವೇಶನಕ್ಕೆ ಬಂದ ಪಂಡಿತ ನೆಹರೂರನ್ನೇ ತಡೆಗಟ್ಟಿದ್ದಳಂತೆ!

೧೯೩೦ರ ಏಪ್ರಿಲ್–ಮೇ ತಿಂಗಳಲ್ಲಿ ಮದ್ರಾಸಿನಲ್ಲಿ ಉಪ್ಪಿನ ಸತ್ಯಾಗ್ರಹವನ್ನು ಸಂಘಟಿಸಲು ಯಾರೂ ಸಿದ್ಧರಿರಲಿಲ್ಲ. ರಾಜಾಜಿ ಮತ್ತು ಆಂಧ್ರಕೇಸರಿ ಟಿ. ಪ್ರಕಾಶಂ ಬೇರೆ ಕಡೆಗೆ ಸಂಘಟಿಸಲು ಯೋಜಿಸುತ್ತಿದ್ದರು. ದುರ್ಗಾಬಾಯಿ ಆಗ ತನ್ನ ಮೊದಲನೆಯ ಪತಿಗೆ ಅಸ್ವಾಸ್ಥ್ಯವಾದ್ದರಿಂದ ಮದ್ರಾಸಿನ ಆಸ್ಪತ್ರೆಯಲ್ಲಿ ಅವರನ್ನು ಸೇರಿಸಲು ಬಂದಿದ್ದವರು ಮದ್ರಾಸಿನಲ್ಲಿ ಉಪ್ಪಿನ ಸತ್ಯಾಗ್ರಹ ಮಾಡುವವರೇ ಇಲ್ಲ ಎಂದು ಗೊತ್ತಾದ ಕೂಡಲೇ ರಾಜಾಜಿ, ಟಿ. ಪ್ರಕಾಶಂ ಇವರನ್ನು ಭೆಟ್ಟಿಯಾಗಿ ಮದ್ರಾಸ್ ಜಿಲ್ಲೆಯಲ್ಲಿಯೇ ಸತ್ಯಾಗ್ರಹ ಪ್ರಾರಂಭಿಸಲು ಮನವೊಲಿಸಿ ತಾನೂ ಭಾಗವಹಿಸಿ ಪೋಲೀಸರ ಲಾಠೀ ಪೆಟ್ಟು ತಿಂದು ಬಂಧಿಸಲ್ಪಟ್ಟರು.

ಈ ಅಪ್ರತಿಮ ದಂಪತಿಗೆ ಪ್ರಶಸ್ತಿ–ಪುರಸ್ಕಾರಗಳ ಸುರಿಮಳೆಯೇ ಆಯಿತು. ಇಬ್ಬರಿಗೂ 'ಪದ್ಮವಿಭೂಷಣ' ನೀಡಿ ಸರಕಾರ ಗೌರವಿಸಿತು. ಚಿಂತಾಮಣಿರಿಗೆ ಸರಕಾರಿ ಸೇವೆಯನ್ನು ಕುರಿತು ರ್ಯಾಮೊನ್ ಮ್ಯಾಗಸೆಸೆ ಪುರಸ್ಕಾರ. ದುರ್ಗಾಬಾಯಿಯವರಿಗೆ ಯುನೆಸ್ಕೋ ಸಾಕ್ಷರತಾ ಪ್ರಶಸ್ತಿ, ನೆಹರೂ ಲಿಟರಸಿ ಅವಾರ್ಡ್, ಪಾಲ್ ಹಾಫಮನ್ ಅವಾರ್ಡ್ ಮುಂತಾದವುಗಳು ದೊರಕಿದವು.

ತುಂಬು ಜೀವನ ನಡೆಸಿದ ಈ ದಂಪತಿಯ ಯಶಸ್ಸಿನ ಗುಟ್ಟು ಏನಿರಬಹುದು? ಒಮ್ಮೆ ದುರ್ಗಾಬಾಯಿ ತಮ್ಮ ಅನುಯಾಯಿಯೊಬ್ಬರಿಗೆ ತಮ್ಮ ಕೈ ಗಡಿಯಾರ ತುಂಬಾ ಮುಂದೆ ಹೋಗುತ್ತಿದೆ ಅಂದರಂತೆ. ಆಗ ಆ ಅನುಯಾಯಿ ನುಡಿದರಂತೆ, "ಬಹುಶಃ ನಿಮ್ಮ ನಾಡಿಯು ಬಹಳ ತೀವ್ರವಾಗಿರುವುದರಿಂದ ಗಡಿಯಾರ ಮುಂದೆ ಹೋಗುತ್ತಿರಬಹುದು" ಎಂದು.

ಇವರಿಬ್ಬರ ನಾಡಿಗಳು ಅರ್ಥಪೂರ್ಣವಾಗಿ ಮಿಡಿಯುತ್ತಿದ್ದುವು. ಇದೇ ಇವರ ಜೀವನದ ಗುಟ್ಟು. 



ಒಮ್ಮೆ ಶರಚ್ಚಂದ್ರ ಚಟರ್ಜಿಯವರ ಬಳಿ ಬಂದ ಯುವಕ, "ನನಗೆ ಕಥೆ ಬರೆಯುವುದರ ಬಗ್ಗೆ ಹೇಳಿ ಕೊಡಿ," ಎಂದ.

ಶರತ್ ಬಾಬುಗಳು ನಕ್ಕು, "ನಿನಗಿನ್ನೂ ಚಿಕ್ಕ ವಯಸ್ಸು. ಅನುಭವವಿಲ್ಲ. ದೊಡ್ಡ ಲೇಖಕರ ಸಾಹಿತ್ಯ ಓದು," ಎಂದರು.

ಹಟಮಾರಿ ಯುವಕ, "ಮತ್ತೆ ನೀವು ನಿಮ್ಮ ಹದಿನಾಲ್ಕನೆಯ ವಯಸ್ಸಿನಲ್ಲಿಯೆ ಕಾದಂಬರಿ ರಚಿಸಿದಿರಲ್ಲ?" ಎಂದು ಪ್ರಶ್ನಿಸಿದ.

ಶರತ್ ಬಾಬುಗಳು ಮತ್ತೆ, "ಆದರೆ ನಾನಾಗ ಯಾರ ಬಳಿಯೂ ಸಲಹೆ ಪಡೆದಿರಲಿಲ್ಲ," ಎಂದರು.

—ಕೆ. ವಿ. ವಿಶ್ವನಾಥ

# ಇದುವೇ ಜೀವ ಇದು ಜೀವನ

ಈಚೆಗೆ ನಾವು ಕೆಲವು ಗೆಳತಿಯರು ಉತ್ತರ ಭಾರತ ಪ್ರವಾಸ ಹೋಗಿದ್ದೆವು. ಓರಿಗೆಯವರಾದ್ದರಿಂದ ಹಾಸ್ಯ, ಗಲಾಟೆಗೇನೂ ಕೊರತೆ ಇರಲಿಲ್ಲ. ಸಾಮಾನ್ಯವಾಗಿ ಪ್ರತಿ ನಿಲ್ದಾಣದಲ್ಲಿ ರೈಲು ನಿಂತಾಗಲೂ ಕಾಫಿ, ಟೀ, ಕಡ್ಲೆಕಾಯಿ ಮಾರುವ ಹುಡುಗರನ್ನು ನಮ್ಮ ತಪ್ಪು ಹಿಂದಿಯಲ್ಲಿ ಮಾತಾಡಿಸಿ ನಗಿಸುತ್ತಿದ್ದೆವು. ಅಧಿಕಾರಿಯಿಂದ ಹಿಡಿದು ಕೂಲಿಯವರೆಗೂ ಎಲ್ಲರನ್ನೂ "ಭಯ್ಯಾ" ಎಂದೇ ಕರೆಯುತ್ತಿದ್ದೆವು. ನಮ್ಮ ಭಾಷಾ ಅಜ್ಞಾನದಿಂದಾಗಿ ಅವರಿಂದ ಒಮ್ಮೊಮ್ಮೆ ಬೈಸಿಕೊಂಡುದೂ ಉಂಟು.

ಒಮ್ಮೆ ರೈಲಿನೊಳಗೆ ಕಡ್ಲೆಕಾಯಿ ಮಾರುವ ತರುಣನೊಬ್ಬ ಬಂದ. ನಾವು ಯಥಾಪ್ರಕಾರ ವ್ಯಾಪಾರ ಮಾಡಲು ತೊಡಗಿದೆವು. ಅವನು ಹೇಳಿದ ಬೆಲೆ ನಮಗೆ ಹೆಚ್ಚೆಂದು ತೋರಿತು. ಯಾರೂ ಕೊಳ್ಳಲಿಲ್ಲ. ಆಗ ಅವನು, "ಭಯ್ಯಾ ಎಂದು ಕರೆಯುತ್ತೀರಿ, ಆದರೆ ನಿಮ್ಮ ಭಯ್ಯಾನಲ್ಲಿ ವ್ಯಾಪಾರ ಮಾಡಲೇ ಇಲ್ಲವಲ್ಲ," ಎಂದು ನಗುನಗುತ್ತಲೇ ನುಡಿದ. ಆಗ ನನ್ನ ಕಿಡಗೇಡಿ ಗೆಳತಿಯೊಬ್ಬಳು "ಅಣ್ಣ-ತಂಗಿಯರು ವ್ಯಾಪಾರ ಮಾಡುತ್ತಾರೆಯೇ? ಅಣ್ಣ ಕಾಣಿಕೆ ಕೊಡುತ್ತಾನೆ" ಎಂದು ತಮಾಷೆ ಮಾಡಿದಳು. ಆ ಮಾತು ಕೇಳಿದ ಕೂಡಲೇ ಅವನಿಗೇನನ್ನಿಸಿತೋ, ನಮಗೆ ತನ್ನಲ್ಲಿದ್ದ ಅಷ್ಟೂ ಕಡ್ಲೆಕಾಯನ್ನು ಹಂಚಿಬಿಟ್ಟ. ನಾವು ಕಲಿತ ಬುದ್ಧಿಯನ್ನೆಲ್ಲ ಖರ್ಚು ಮಾಡಿದರೂ ಅವನು ನಮ್ಮಿಂದ ಹಣ ಸ್ವೀಕರಿಸಲೇಯಿಲ್ಲ. ಬಡ ಅಣ್ಣನ ಕಾಣಿಕೆಯೆಂದು ಹೇಳಿ ಕೈಯಾಡಿಸಿ, ಮುಗುಳ್ನಗುತ್ತಾ ನಡೆದೇಬಿಟ್ಟ. ರೈಲು ಹೊರಟಾಗ ನಮ್ಮೆಲ್ಲರ ಕಣ್ಣಂಚಿನಲ್ಲಿ ಅಂತಃಕರಣದ ಹನಿ ತುಂಬಿತ್ತು.

—ಎಸ್. ಅನಸೂಯ

ಈ ಮೊದಲು ದೆಹಲಿಯಲ್ಲಿದ್ದಾಗ ಮನೆಯಲ್ಲಿ ಶ್ರೀ ಸತ್ಯನಾರಾಯಣ ಪೂಜೆಯನ್ನು ನೆರವೇರಿಸಬೇಕಾದ ಪ್ರಸಂಗ. ಎಲ್ಲ ಗೆಳೆಯರಿಗೆ ಅನುಕೂಲವಾಗಲೆಂದು ರವಿವಾರದ ದಿನವೇ ಪೂಜೆಯನ್ನು ಇಟ್ಟುಕೊಂಡಿದ್ದೆವು. ಆ ದಿನ ಮುಂಜಾವು. ಸುಮಾರು ಏಳು ಗಂಟೆಯಾಗಿರಬಹುದು. ನಮ್ಮ ಕಾಲೊನಿಯ ಹತ್ತಿರದಲ್ಲಿಯೇ ಇದ್ದ ಮತ್ತೊಂದು ಕಾಲೊನಿಯಲ್ಲಿ ತರತರಹದ ಹೂವುಗಳು ಹಾಗೂ ಪೂಜಾ ಮಂಟಪಕ್ಕಾಗಿ ಬೇಕಾಗುವ ಮಾವಿನ ತೊಳಲು, ಕಾಬಾಳೆಯ ಚಿಕ್ಕ ಗಿಡಗಳು ಹಾಗೂ ಪ್ರಸಾದ ವಿತರಣೆಗಾಗಿ ಬಾಳೆಯ ಎಲೆಗಳು ವಿಪುಲವಾಗಿದ್ದರಿಂದ, ಯಾರ ಮನೆಯಲ್ಲಾದರೂ ಕೇಳಿ ತಂದರಾಯಿತು ಎಂದುಕೊಂಡು ಹೊರಟೆ.

ಕೇಂದ್ರ ಸರಕಾರದಲ್ಲಿ ದೊಡ್ಡ ದೊಡ್ಡ ಅಧಿಕಾರದಲ್ಲಿರುವ ಅಧಿಕಾರಿಗಳ ಮನೆಗಳ ಕಾಲೊನಿ ಅದು. ಸ್ವಲ್ಪ ದೂರ ಹೋಗುತ್ತಿದ್ದಂತೆಯೇ ಒಂದು ಮನೆಯ ಬಾಗಿಲಿಗೆ ಮಾವಿನ ಎಲೆ ಕಟ್ಟಿದ್ದು ಕಾಣಿಸಿತು. ಮುಂದಿದ್ದ ಕೈತೋಟದಲ್ಲಿಯೂ ನನಗೆ ಬೇಕಾಗಿದ್ದ ವಸ್ತುಗಳೂ ಗೋಚರಿಸಿದವು. ಮನೆಯ ಮುಂದೆ ತುಳಸೀ ಗಿಡವೂ ಇತ್ತು. ಸರಿ, ಈ ಮನೆಯಲ್ಲಿ ನನ್ನಂತೆಯೇ ಧಾರ್ಮಿಕ ಪ್ರವೃತ್ತಿಯವರೇ ಇರಬೇಕು; ಇವರನ್ನೇ ಕೇಳಿ ಸ್ವಲ್ಪ ಹೂವು ತುಳಸಿ ಹಾಗೂ ಬಾಳೆಲೆಯನ್ನು ತೆಗೆದುಕೊಂಡರಾಯಿತು ಎಂದು ಕರೆಯುವ ಗಂಟೆಯನ್ನು ಬಾರಿಸಿದೆ. ಬಾಗಿಲು ತೆರೆದ ವ್ಯಕ್ತಿಯನ್ನು ನೋಡುತ್ತಲೇ ಎರಡೂ ಕೈ ಮುಗಿದು, "ನಮಸ್ಕಾರ ಸರ್" ಎಂದೆ. ಹಣೆಯಲ್ಲಿ ವಿಭೂತಿ-ಹಚ್ಚಿಕೊಂಡು, ಶುಭ್ರವಾದ ಲುಂಗಿ ಹಾಗೂ ಅಂಗಿಯನ್ನು ಧರಿಸಿದ್ದ ಆ ಮಹಾನುಭಾವರು

ನನ್ನ ನಮಸ್ಕಾರಕ್ಕೆ ಪ್ರತಿ ನಮಸ್ಕಾರವನ್ನು ಹೇಳದೆ, "ಏನು ಬೇಕಾಗಿದೆ?" ಎಂದು, ಇಂಗ್ಲಿಷಿನಲ್ಲಿ ಕೇಳಿದರು. ನಾನು ಬಂದ ಉದ್ದೇಶವನ್ನು ಹೇಳುತ್ತ ನನ್ನ ಪರಿಚಯವನ್ನು ಸ್ವಲ್ಪ ಹೇಳಿದೆ. ಆ ವ್ಯಕ್ತಿ ನನ್ನ ಮಾತಿಗೆ ಸರಿಯಾಗಿ ಲಕ್ಷ್ಯವನ್ನು ಕೊಡದೇ, "ನೋಡಿ, ಈ ತೋಟದಲ್ಲಿರುವದನ್ನು ನಾನು ಯಾರಿಗೂ ಕೊಡುವದಿಲ್ಲ. ಇದನ್ನು ನಾವು ಬೆವರು ಸುರಿಸಿ ಬೆಳೆಸಿದ್ದೇವೆ," ಎಂದು ಹೇಳಿ ಮರುಮಾತಿಗೂ ಅವಕಾಶ ಕೊಡದಂತೆ ಬಾಗಿಲು ಮುಚ್ಚಿದರು. "ನಾರಾಯಣನ ಇಚ್ಛೆ" ಎಂದು ಆ ಮನೆಯನ್ನು ಬಿಟ್ಟು ಮತ್ತೆ ಸ್ವಲ್ಪ ದೂರ ಹೋದೆ.

ಮತ್ತೊಂದು ಮನೆ. ದೃಷ್ಟಿ ಹಾಯಿಸಿದಾಗ ಸುಮಾರು ಹತ್ತು ವರುಷದ ಹುಡುಗನೊಬ್ಬ ಹಸಿರು ಹುಲ್ಲಿನ ಮೇಲೆ ಸಾಕಿದ ನಾಯಿಯನ್ನು ಆಡಿಸುತ್ತ ಕುಳಿತಿದ್ದ. ಈ ಮನೆಯಲ್ಲಿಯೂ ಸಾಕಷ್ಟು ಹೂವು ಹಾಗೂ ಬಾಳೆಯ ಗಿಡಗಳು ಕಂಡುಬಂದಿದ್ದರಿಂದ ಇಲ್ಲಿ ಕೇಳಿದರೆ ಹೇಗೆ? ಎಂದು ಸ್ವಲ್ಪ ಹೊತ್ತು ಮನಸ್ಸಿನಲ್ಲಿಯೇ ವಿಚಾರಿಸಿದೆ. ಏನೇ ಆಗಲಿ, ಇದೊಂದು ಮನೆಯಲ್ಲಿ ಕೇಳೋಣ, ಸಿಕ್ಕರೆ ಸಂತೋಷ, ಇಲ್ಲವಾದರೆ ಇನ್ನಾರನ್ನೂ ಕೇಳಬಾರದು ಎಂದುಕೊಂಡು ಕಾಂಪೌಂಡ್ ಬಾಗಿಲನ್ನು ತೆರೆಯಲು ಪ್ರಯತ್ನಿಸಿದೆ. ಅಪರಿಚಿತ ಮುಖವನ್ನು ನೋಡಿ ನಾಯಿ ಸ್ವಲ್ಪ ಬೊಗಳಿತಾದರೂ ಆ ಹುಡುಗನ ಆದೇಶದಂತೆ ಸುಮ್ಮನೆ ಮಲಗಿಕೊಂಡಿತು. ನನ್ನನ್ನು ನೋಡುತ್ತಲೇ ಆ ಹುಡುಗ ಎದ್ದು ಬಂದು, "ನಮಸ್ತೆ ಅಂಕಲ್, ಆಯಿಯೇ?" ಎಂದು ವಂದಿಸಿ, ಕೂಡಲೇ ಡ್ರಾಯಿಂಗ್ ರೂಂ ಬಾಗಿಲು ತೆರೆದು ನನ್ನನ್ನು ಕೂಡ್ರಿಸಿದ. ನಾನು ಬಂದ ವಿಷಯಕ್ಕೆ ದೊಡ್ಡವರೊಂದಿಗೆ ಮಾತಾಡಬೇಕು ಎಂದು, "ನಿನ್ನ ತಂದೆ ಮನೆಯಲ್ಲಿ ಇದ್ದಾರೆಯೋ?" ಎಂದೆ. "ಹಾಂ.. ಇದ್ದಾರೆ ಸ್ನಾನ ಮಾಡುತ್ತಿದ್ದಾರೆ," ಎಂದ. "ಸರಿ, ನಿನ್ನ ಮಮ್ಮಿ ಇದ್ದರೆ ಕರೆಯಪ್ಪಾ," ಎಂದೆ. ಮುಖ ಸಪ್ಪಗಾಯಿತು. ಕಣ್ಣಲ್ಲಿ ನೀರು ತಂದು, "ನನ್ನ ತಾಯಿ ಈ ಲೋಕದಲ್ಲಿ ಇಲ್ಲ," ಎಂದಾಗ ನನಗೂ ಕೆಡುಕೆನಿಸಿತು. ಆತ ಪುನಃ ಕಣ್ಣೊರೆಸಿಕೊಂಡು, "ನಿಮಗೆ ಏನು ಬೇಕಾಗಿತ್ತು ಅಂಕಲ್?" ಎಂದು ಕೇಳಿದ.

ನನಗೆ ಬಾಳೆಯ ಎಲೆ ಹಾಗೂ ಹೂವುಗಳು ಬೇಕಾಗಿವೆಯೆಂದು ಹೇಳಿದ್ದಕೂಡಲೇ, "ಅಂಕಲ್, ನಿಮಗೆ ಎಷ್ಟು ಬೇಕೋ ಅಷ್ಟು ಕೊಯ್ದು ಒಯ್ಯಬಹುದು," ಎಂದು ಹೇಳುತ್ತಾ ಒಳಗೆ ಹೋಗಿ ಚಾಕುವನ್ನು ತಂದು ಕೈಗಿತ್ತ.

ಹುಡುಗುತನದಲ್ಲಿ ಹೇಳಿದನೋ ಹೇಗೆ ಎಂದು ಅನುಮಾನ ಬಂದು ಪುನಃ ಆತನನ್ನು, "ನಿನ್ನ ತಂದೆಯನ್ನು ಕರೆಯಪ್ಪಾ ಅವರನ್ನೊಂದು ಮಾತನ್ನು ಕೇಳಿ ಕೊಯ್ಯೋಣ," ಎಂದೆ.

"ಅಂಕಲ್, ನೀವು ನನ್ನ ತಂದೆಯ ಬಗ್ಗೆ ವಿಶ್ವಾಸವಿಡಿ. ನಾನು ಅವರ ಮಗ. ಒಳ್ಳೆಯ ಕಾರ್ಯಕ್ಕಾಗಿ ಬಾಳೆಯ ಎಲೆ-ಹೂಗಳೇಕೆ, ಪ್ರಸಂಗ ಬಂದರೆ ಪ್ರಾಣವನ್ನೂ ಅರ್ಪಿಸು ಎಂದು ಹೇಳುವ ಅವರು ನನ್ನ ಮಾತನ್ನು ಎಂದೂ ತಿರಸ್ಕರಿಸುವದಿಲ್ಲ. ಮೇಲಾಗಿ ಈ ಗಿಡಗಳನ್ನು ನಾವು ಹುಟ್ಟಿಸಿಲ್ಲ. ಈ ಮನೆಯಲ್ಲಿ ಮೊದಲಿದ್ದವರು ಬೆಳೆಸಿ ಹೋಗಿದ್ದಾರೆ. ಇದರಲ್ಲಿ ನನ್ನ ತಂದೆಯ ಅಭ್ಯಂತರವೇನೂ ಇಲ್ಲ," ಎಂದು ನುಡಿದು, ತಾನೆ ಅವುಗಳನ್ನೆಲ್ಲ ಕೊಯ್ದು, ನನಗಿತ್ತು ಪುನಃ ನಮಸ್ಕರಿಸಿ ಬೀಳ್ಕೊಟ್ಟ.

—ಮುರಲೀಧರ ಮುಧೋಳ



# ಪ್ರಾಥಮಿಕ ಕಣ ವಿಜ್ಞಾನದ ಸುವರ್ಣ ವರ್ಷ

ಶುದ್ಧ ವಿಜ್ಞಾನದ ದೃಷ್ಟಿಯಿಂದ ೧೯೩೨ ಬಹು ಮಹತ್ವದ ವರ್ಷ. ವಿಶ್ವದ ಬಹುತರ ಎಲ್ಲ ಆಗು ಹೋಗುಗಳನ್ನು ನಿಯಂತ್ರಿಸುವುದು ಪರಮಾಣುವಿಗಿಂತ ಕೋಟಿ ಪಾಲು ಚಿಕ್ಕವಾದ ಪ್ರಾಥಮಿಕ ಕಣಗಳು ಎಂಬುದು ಗೋಚರಿಸಿದ ವರ್ಷ ಅದು. ಭೌತ ವಿಜ್ಞಾನದಲ್ಲಿಯ ಈ ಬೃಹತ್ ಮುನ್ನಡೆಗೆ ಇಂದು ಐವತ್ತು ತುಂಬಿತು.

ಡಾ. ವಿಜಯ್ ಶ್ರೀಧರ್

ಇನ್ನೇನು ೧೯೮೨ ಮುಗಿದೇ ಹೋಗುತ್ತಿದೆ. ಆದರೂ ಇದು ಭೌತವಿಜ್ಞಾನದಲ್ಲಿ ಮಹತ್ವದ ವರ್ಷ ಎನ್ನುವುದು ಪಾಶ್ಚಾತ್ಯ ವೈಜ್ಞಾನಿಕ ವೃತ್ತಗಳಲ್ಲೂ ಹೆಚ್ಚು ಪ್ರಚಾರವಾಗಿಲ್ಲ! ಪರಮಾಣು ವಿಜ್ಞಾನವನ್ನು ಮೀರಿ ಪ್ರಕೃತಿಯ ಮೂಲವನ್ನೇ ಅರಿಯುವಲ್ಲಿ ಬಹಳ ಉತ್ಸುಕವಾಗಿರುವ ಪ್ರಾಥಮಿಕ ಕಣ ವಿಜ್ಞಾನ (Elementary Particle Physics) ಹುಟ್ಟಿದ್ದು ಸರಿಯಾಗಿ ೫೦ ವರ್ಷಗಳ ಹಿಂದೆ.

೧೯೩೨ ರ ಮೊದಲು ಪರಮಾಣುವನ್ನೇ ಪ್ರಕೃತಿಯ ಮೂಲ ಘಟಕ ಎಂದು ಭಾವಿಸಲಾಗಿತ್ತು. ಪರಮಾಣು ಅವಿಭಾಜ್ಯ ಎನ್ನುವುದು ಹಿಂದಿನಿಂದಲೂ ಬಂದಿದ್ದ ಭಾವನೆಯಾದರೂ, ಈ ಶತಮಾನದ ಮೊದಲಲ್ಲಿ ನಡೆದ ಸಂಶೋಧನೆಗಳಿಂದ ಪರಮಾಣುವನ್ನು ಒಡೆಯಬಹುದು ಎಂದು ಸ್ಪಷ್ಟವಾಗಿತ್ತು. ಪರಮಾಣು ರಚನೆ ಹೆಚ್ಚು ಕಡಿಮೆ ಸೌರವ್ಯೂಹದಂತಿದ್ದು, ಭಾರವಾದ ಕೇಂದ್ರವೊಂದರ ಸುತ್ತ ಎಲೆಕ್ಟ್ರಾನ್ ಎನ್ನುವ ಲಘುವಾದ ಕಣಗಳು ಸುತ್ತುತ್ತಿವೆ ಎನ್ನುವುದೂ ತಿಳಿದುಬಂದಿದ್ದು ೧೯೧೧ ರಲ್ಲಿ. ಈ ಚಿತ್ರವೇ ಅನೇಕ ಹೊಸ ಸಮಸ್ಯೆಗಳನ್ನು ಎಬ್ಬಿಸಿ, ಅವುಗಳ ಪರಿಹಾರಕ್ಕೆ ಅನೇಕ ವರ್ಷಗಳ ಪರದಾಟಗಳಾಗಿ ಕೊನೆಗೆ ೧೯೨೬ ರ ಹೊತ್ತಿಗೆ ಉತ್ಕೃಷ್ಟವಾದ ಸಿದ್ಧಾಂತಗಳ ಮಂಡನೆಯಾಯಿತು. ಅದುವರೆಗೆ ತಿಳಿದಿದ್ದ ವೈಜ್ಞಾನಿಕ ನಿಯಮಗಳಿಗೆ ಹೋಲಿಸಿದರೆ ಈ ಪರಮಾಣು ನಿಯಮಗಳು

ವಿಚಿತ್ರವಾಗಿದ್ದುವು. ಆದರೂ ಪರಮಾಣುವಿನ ರಚನೆ, ವರ್ತನೆಗಳನ್ನು ವಿವರಿಸುವುದರಲ್ಲಿ ಇವೇ ನಿಖರವಾದ ನಿಯಮಗಳಾಗಿದ್ದರಿಂದ ಎಲ್ಲರೂ ಸ್ವೀಕರಿಸಿ ಅಳವಡಿಸಿಕೊಂಡರು.

ಅಷ್ಟಾದರೂ ಪ್ರಕೃತಿಯಲ್ಲಿ ಪರಮಾಣುವಿನದೇ ಪ್ರಮುಖ ಪಾತ್ರ ಎನ್ನುವಲ್ಲಿ ಯಾರಿಗೂ ಸಂದೇಹವಿರಲಿಲ್ಲ. ಆದ್ದರಿಂದಲೇ ೧೯೩೨ ಭೌತ ವಿಜ್ಞಾನದಲ್ಲಿ ಮಹತ್ವದ ವರ್ಷ. ವಿಶ್ವದ ಬಹುತೇಕ ಆಗುಹೋಗುಗಳನ್ನು ಆಳುತ್ತಿರುವುದು ಪರಮಾಣು ಲೋಕಕ್ಕಿಂತಲೂ ಕೋಟಿ ಪಾಲು ಚಿಕ್ಕದಾದ ಪ್ರಾಥಮಿಕ ಕಣಗಳು ಮತ್ತು ಅವುಗಳ ನಿಯಮಗಳು ಎನ್ನುವುದು ಗೋಚರಿಸಿದ ವರ್ಷ ಅದು. ಆ ವರ್ಷ ಹೊಸದಾಗಿ ಕಂಡುಬಂದ ಎರಡು ಕಣಗಳು ಇಂದು ನಮ್ಮ ಜೀವನಗಳಲ್ಲೂ ಪ್ರಭಾವ ಬೀರುತ್ತಿವೆ ಎನ್ನುವುದು ಬಹುಮಂದಿಗೆ ತಿಳಿಯದೇ ಇದ್ದರೂ ಸತ್ಯವಾದ ಸಂಗತಿ!

## ಪರಮಾಣು ರಚನೆ

೧೯೩೨ರ ಮೊದಲು ತಿಳಿದಿದ್ದ ವಿಷಯಗಳಿವು: ಎಲ್ಲಾ ಪದಾರ್ಥಗಳೂ ಸುಮಾರು ನೂರು ಬಗೆಯ ಧಾತುಗಳ ಅಥವಾ ಅವುಗಳ ಮಿಶ್ರಣದಿಂದ ಆಗಿವೆ. ಧಾತುಗಳು ವಿಶಿಷ್ಟವಾದ ಪರಮಾಣುಗಳಿಂದ ಆಗಿವೆ. ಪರಮಾಣುಗಳು ಅವಿಭಾಜ್ಯವೆಂದು ಪುರಾತನ ಕಾಲದಿಂದಲೂ ಭಾವಿಸಿದ್ದರೂ ಅವುಗಳಿಂದ ಎಲೆಕ್ಟ್ರಾನ್ ಎನ್ನುವ ಋಣ ವಿದ್ಯುದಂಶದ ಕಣಗಳನ್ನು ಕೀಳಿ ತೆಗೆಯಬಹುದು. ಈ ಎಲೆಕ್ಟ್ರಾನುಗಳು ಭಾರವಾದ ಕೇಂದ್ರವೊಂದರ ಸುತ್ತ ವಿವಿಧ ಪಥಗಳಲ್ಲಿ ಸುತ್ತುತ್ತಿರುತ್ತವೆ. ಪರಮಾಣು ಕೇಂದ್ರ ಧನ ವಿದ್ಯುದಂಶದಿಂದ ಕೂಡಿದ ಒಂದು ಚಿಕ್ಕ ಉಂಡೆ. ಆದರೂ ಪರಮಾಣುವಿನ ತೂಕವೆಲ್ಲಾ ಹೆಚ್ಚು ಕಡಿಮೆ ಇದರಲ್ಲೇ ಅಡಕ. ಸುತ್ತುತ್ತಿರುವ ಎಲೆಕ್ಟ್ರಾನುಗಳ ಒಟ್ಟು ವಿದ್ಯುದಂಶವೆಷ್ಟೋ ಈ ಕೇಂದ್ರದ್ದೂ ಅಷ್ಟೇ. ಆದರೆ ಎಲೆಕ್ಟ್ರಾನುಗಳದ್ದು ಋಣ ವಿದ್ಯುತ್ತು, ಕೇಂದ್ರದ್ದು ಧನ. ಕೇಂದ್ರವನ್ನು ಒಡೆಯಹೋದಾಗ ಕೆಲವೊಮ್ಮೆ ಪ್ರೋಟಾನ್ ಎಂಬ ಕಣಗಳು ಹಾರಿಬರುವುವು. ಒಂದು ಪ್ರೋಟಾನ್ ಒಂದು ಎಲೆಕ್ಟ್ರಾನಿಗಿಂತಲೂ ಸುಮಾರು ಎರಡು ಸಾವಿರದಷ್ಟು ತೂಕವಿದ್ದರೂ ಅದರ ಧನ ವಿದ್ಯುದಂಶ ಪ್ರಮಾಣದಲ್ಲಿ ಎಲೆಕ್ಟ್ರಾನಿನ ಋಣ ವಿದ್ಯುದಂಶದಷ್ಟೇ, ಹೆಚ್ಚಿಲ್ಲ. ಪರಮಾಣು ಕೇಂದ್ರ ಎಂದರೆ ಬಹುಶಃ ಪ್ರೋಟಾನುಗಳ ಸಮೂಹ. ಒಂದು ಧಾತುವಿನ ಪರಮಾಣುವಿಗೂ ಇನ್ನೊಂದು ಧಾತುವಿನ ಪರಮಾಣುವಿಗೂ ಇರುವ ವ್ಯತ್ಯಾಸ ಕೇವಲ ಎಲೆಕ್ಟ್ರಾನ್ ಮತ್ತು ಪ್ರೋಟಾನುಗಳ ಸಂಖ್ಯೆ ಮಾತ್ರ ಎನ್ನಿಸಿತ್ತು.

ಆದರೂ ಎಲ್ಲವೂ ತೃಪ್ತಿಕರವಾಗಿರಲಿಲ್ಲ. ಪರಮಾಣು ಕೇಂದ್ರ ಕೇವಲ ಪ್ರೋಟಾನುಗಳಿಂದ ಆಗಿರಲೂ ಸಾಧ್ಯವಿಲ್ಲವೆಂದು ತಿಳಿದಿತ್ತು. ಏಕೆಂದರೆ ಅನೇಕ ಧಾತುಗಳ ಪರಮಾಣುಗಳು ಎಣಿಸಿದುದಕ್ಕಿಂತಲೂ ಭಾರವಾಗಿದ್ದುವು. ಉದಾಹರಣೆಗೆ ಹೀಲಿಯಂ. ಅತ್ಯಂತ ಸರಳವಾದ ಜಲಜನಕದ ಪರಮಾಣುವನ್ನು ಬಿಟ್ಟರೆ ಇದೇ ಲಘುವಾದ ಪರಮಾಣು. ಸಾಮಾನ್ಯ ಜಲಜನಕ ಪರಮಾಣುವಿನಲ್ಲಿ ಒಂದೇ ಒಂದು ಪ್ರೋಟಾನ್ ಮತ್ತು ಅದರ ಸುತ್ತಲೂ ಸುತ್ತುತ್ತಿರುವ ಒಂದೇ ಒಂದು ಎಲೆಕ್ಟ್ರಾನ್. ಹೀಲಿಯಂನಲ್ಲಿ ಒಂದಕ್ಕೆ ಬದಲಾಗಿ ಎರಡು ಎಲೆಕ್ಟ್ರಾನುಗಳು ಸುತ್ತುತ್ತಿವೆ. ಅಂದ ಮೇಲೆ ಅದರ ಕೇಂದ್ರದಲ್ಲಿ ಎರಡು ಪ್ರೋಟಾನುಗಳಿರಬೇಕೆಂದು ತರ್ಕಿಸುವುದು ಸಹಜ. ಆಗ ಹೀಲಿಯಂ ಪರಮಾಣು ಜಲಜನಕದ ಪರಮಾಣುವಿಗಿಂತಲೂ ಎರಡರಷ್ಟು ಭಾರವಿರಬೇಕು. ಆದರೆ ವಾಸ್ತವವಾಗಿ ಅದು ನಾಲ್ಕರಷ್ಟು ಭಾರ! ಹಾಗಾದರೆ ಹೆಚ್ಚಿನ ಭಾರ ಹೇಗೆ ಬಂತು? ನಾಲ್ಕು ಪ್ರೋಟಾನುಗಳಿದ್ದರೆ ಅದರ ಸುತ್ತ ನಾಲ್ಕು ಎಲೆಕ್ಟ್ರಾನುಗಳು ಇರಲೇಬೇಕಿದ್ದುವು, ವಿದ್ಯುದಂಶವನ್ನು ನಿವಾರಿಸಲು.

ಬಹುಶಃ ಪರಮಾಣು ಕೇಂದ್ರದಲ್ಲೂ ಕೆಲವು ಎಲೆಕ್ಟ್ರಾನುಗಳು ಇರಬಹುದು ಎಂದರು ಕೆಲವರು. ಹೀಲಿಯಂ ಕೇಂದ್ರದಲ್ಲೇ ನಾಲ್ಕು ಪ್ರೋಟಾನುಗಳು ಮತ್ತು ಎರಡು ಎಲೆಕ್ಟ್ರಾನುಗಳು ಇವೆ ಎಂದುಕೊಳ್ಳಿ. ಆಗ ಎರಡು ಎಲೆಕ್ಟ್ರಾನುಗಳ ಋಣ ವಿದ್ಯುತ್ ಎರಡು ಪ್ರೋಟಾನುಗಳ ಧನ ವಿದ್ಯುತ್ತನ್ನು ನಿವಾರಿಸಿಬಿಡುವುದರಿಂದ ಕೇಂದ್ರಕ್ಕೆ

ಒಟ್ಟಿನಲ್ಲಿ ಸರಿಯಾದ ವಿದ್ಯುದಂಶ ಉಳಿಯು ತ್ತವೆ. ಪ್ರೋಟಾನುಗಳಿಗೆ ಹೋಲಿಸಿದರೆ ಎಲೆಕ್ಟ್ರಾನುಗಳು ಭಾರದಲ್ಲಿ ಗೌಣವಾಗಿದ್ದರಿಂದ ಕೇಂದ್ರದ ಭಾರವೂ ಸರಿಯಾಗಿರುತ್ತದೆ.

## ಹೈಸನ್‌ಬರ್ಗ್ ನಿಯಮ

ಈ ಮೇಲಿನದು ಜಾಣತನದ ಪರಿಹಾರದಂತೆ ಕಂಡುಬರಬಹುದು. ಆದರೆ ಪರಮಾಣು ಪ್ರಪಂಚದಲ್ಲಿ ಎಷ್ಟು ಜಾಣತನವಿದ್ದರೂ ಸಾಲದು! ಪರಮಾಣು ನಿಯಮಗಳು ಎಷ್ಟು ವಿಚಿತ್ರವೋ ಅಷ್ಟೇ ನಿಷ್ಠುರವಾದವುಗಳು! ಇಂತಹ ಒಂದು ನಿಯಮ ಜರ್ಮನ್ ವಿಜ್ಞಾನಿ ಹೈಸನ್‌ಬರ್ಗ್ ಕಂಡು ಹಿಡಿದಿದ್ದ ನಿಯಮ.

ಯಾವ ಕಣವಾದರೂ ಅದರ ಸ್ಥಳ ಮತ್ತು ಶಕ್ತಿಯನ್ನು ಏಕಕಾಲದಲ್ಲಿ ನಿಖರವಾಗಿ ತಿಳಿದುಕೊಳ್ಳುವುದು ಅಸಾಧ್ಯ ಎಂದು ಹೇಳುತ್ತದೆ ಈ ನಿಯಮ. ಎಷ್ಟೇ ಜಾಣತನ ಉಪಯೋಗಿಸಿದರೂ ಎಷ್ಟೇ ಪ್ರಭಾವಯುತ ಸಲಕರಣೆಗಳನ್ನು ಉಪಯೋಗಿಸುವ ಹಾಗೆ ಇದ್ದರೂ ಸ್ಥಳ ಮತ್ತು ಶಕ್ತಿ ಎರಡೂ ಏಕಕಾಲದಲ್ಲಿ ಅರಿಯುವುದು ಮೂಲತಃ ಸಾಧ್ಯವಿಲ್ಲದ ಪ್ರಕೃತಿ ಲಕ್ಷಣ. ಕಣ ಎಲ್ಲಿದೆ ಎನ್ನುವುದನ್ನು ನಿಖರವಾಗಿ ತಿಳಿಯಹೋದಾಗ ಆ ಕಣ ಆ ಸ್ಥಳದಲ್ಲಿದ್ದಾಗ ಯಾವ ವೇಗದಲ್ಲಿ ಚಲಿಸುತ್ತಿತ್ತು [ಎಷ್ಟು ಶಕ್ತಿಯುಳ್ಳದ್ದಾಗಿತ್ತು] ಎನ್ನುವುದನ್ನು ಸರಿಯಾಗಿ ತಿಳಿಯಲಾಗದು.

'ಪರಮಾಣು ಕೇಂದ್ರದಲ್ಲಿ ಎಲೆಕ್ಟ್ರಾನುಗಳೂ ಇವೆ' ಎನ್ನುವುದು ಈ ನಿಯಮವನ್ನು ಉಲ್ಲಂಘಿಸುವ ಘೋಷಣೆ. ಆದ್ದರಿಂದ ಆ ಘೋಷಣೆ ಸತ್ಯವಿರಲು ಸಾಧ್ಯವಿಲ್ಲ. ಪರಮಾಣು ಕೇಂದ್ರ ಚಿಕ್ಕದಾದ್ದರಿಂದ ಅದರಲ್ಲಿ ಎಲೆಕ್ಟ್ರಾನ್ ಇದೆ ಎಂದ ಮಾತ್ರದಿಂದಲೇ ಅದರ ಸ್ಥಳವನ್ನು ನಿಖರವಾಗಿ ತಿಳಿದಂತಾಯಿತು. ಎಲೆಕ್ಟ್ರಾನ್ ಪರಮಾಣು ಕೇಂದ್ರದಲೇ ಸೆರೆಯಾಗಿದೆ ಎಂದರೆ ಎಲೆಕ್ಟ್ರಾನಿನ ವೇಗವೂ ಹೆಚ್ಚು ಕಡಿಮೆ ಸೊನ್ನೆ ಎಂದಾಗುತ್ತದೆ. ಎಲೆಕ್ಟ್ರಾನ್ ಲಘುವಾದ್ದರಿಂದ ಅದರ ಶಕ್ತಿಯೆಲ್ಲಾ ಬಹುಭಾಗ ಅದರ ವೇಗದಿಂದ. ಅಂದರೆ ಈಗ ಶಕ್ತಿಯೂ ಹೆಚ್ಚು ಕಡಿಮೆ ಸೊನ್ನೆ. ಸ್ಥಳ ಮತ್ತು ಶಕ್ತಿ ಎರಡೂ ಹೆಚ್ಚು ಕಡಿಮೆ ಸೊನ್ನೆ ಎಂದರೆ ಈ ಎಲೆಕ್ಟ್ರಾನಿನ ಬಗ್ಗೆ ನಮಗೆ ಅತ್ಯಂತ ನಿಖರವಾದ ಜ್ಞಾನ ಬಂತು ಎಂದಾಯಿತು! ಆದರೆ ಯಾವ ಕಣದ ಬಗ್ಗೆಯೇ ಆದರೂ ಇದು ಅಸಾಧ್ಯವೆಂದು ಹೈಸನ್‌ಬರ್ಗ್ ಸ್ಪಷ್ಟವಾಗಿ ತೋರಿಸಿದ್ದುದರಿಂದ ಎಲೆಕ್ಟ್ರಾನ್ ಪರಮಾಣು ಕೇಂದ್ರದಲ್ಲಿ ಶಾಶ್ವತವಾಗಿ ಇರಲು ಸಾಧ್ಯವಿಲ್ಲ ಎಂದೇ ಒಪ್ಪಿಕೊಳ್ಳಬೇಕು! (ಆದರೆ ಪ್ರೋಟಾನುಗಳು ಇರಬಹುದು. ಏಕೆಂದರೆ ಅವು ಬಹುಭಾರವಾದ್ದರಿಂದ ಅವುಗಳ ಶಕ್ತಿಗೆ ಅವುಗಳ ವೇಗದ ಕೊಡುಗೆ ಗಣನೀಯವಲ್ಲ.)

## ನ್ಯೂಟ್ರಾನ್

ಜಾಣತನವೆಂದುಕೊಂಡಿದ್ದ ಪರಿಹಾರವೂ ಹೀಗೆ ಅಸಾಧ್ಯವೆಂದು ತೋರಿಬಂದಾಗ ಮತ್ತೆ ಗೊಂದಲ ತಲೆದೋರಿತು. ಹಾಗಿದ್ದರೆ ಹೀಲಿಯಂ ಕೇಂದ್ರ ಹೇಗೆ ಹೆಚ್ಚು ಭಾರವಿದೆ?

೧೯೩೨ ರಲ್ಲಿ ಜೇಮ್ಸ್ ಚಾಡ್‌ವಿಕ್ ಒಂದು ಹೊಸ ಕಣವನ್ನು ಕಂಡುಹಿಡಿದ ಮೇಲೆಯೆ ಸಮಸ್ಯೆ ತೃಪ್ತಿಕರವಾಗಿ ಬಗೆಹರಿದಿದ್ದು.

ಪರಮಾಣು ವಿಕಿರಣಗಳು ಪದಾರ್ಥಗಳ ಮೇಲೆ ಯಾವ ಪರಿಣಾಮ ಮಾಡುತ್ತವೆ ಎಂದು ಅರಿಯುವ ಸಂಶೋಧನೆಗಳಲ್ಲಿ ನಿರತರಾಗಿದ್ದ ಅವರಿಗೆ ನ್ಯೂಟ್ರಾನಿನ ಇರುವು ಕಂಡಿದ್ದು ಆಕಸ್ಮಿಕವಾಗಿ. ವಿಕಿರಣಗಳಿಂದ ಉತ್ತೇಜನಗೊಂಡ ಪದಾರ್ಥಗಳು ಮತ್ತೆ ತಾವೂ ವಿಕಿರಣಗಳನ್ನು ಬೀರುತ್ತಿದ್ದುವು. ಇವುಗಳಲ್ಲಿ ಕೆಲವು ಅದುವರೆಗೂ ಗೊತ್ತಿದ್ದವಂತೆ ವರ್ತಿಸದೇ ತೀವ್ರ ಕ್ರಿಯಾಶೀಲವಾಗಿದ್ದುದು ಚಾಡ್‌ವಿಕರ ಗಮನ ಸೆಳೆಯಿತು. ಕುತೂಹಲ ತಾಳಿ ವಿವರವಾಗಿ ಪ್ರಯೋಗಗಳನ್ನು ನಡೆಸಿದಾಗ ತಿಳಿದದ್ದು ಈ ವಿಕಿರಣ ವಿದ್ಯುದಂಶವೇ ಇಲ್ಲದ ಅನೇಕ ತಟಸ್ಥ ಕಣಗಳ ಸಮೂಹ ಎಂದು! ಭಾರದಲ್ಲಿ ಪ್ರೋಟಾನಿನಷ್ಟೇ, ಆದರೆ ವಿದ್ಯುದಂಶ ಇರುವ ಪ್ರೋಟಾನ್ ಮತ್ತು ಎಲೆಕ್ಟ್ರಾನುಗಳಿಗಿಂತಲೂ ಭಿನ್ನ. ಚಾಡ್‌ವಿಕ್ ಇದನ್ನು "ನ್ಯೂಟ್ರಾನ್" ಎಂದು ಹೆಸರಿಸಿದರು.

ಅನಂತರ ಎಲ್ಲವೂ ಸ್ಪಷ್ಟವಾಯಿತು. ಹೀಲಿಯಂ ಏಕೆ ಭಾರ ಎಂದರೆ ಅದರ ಕೇಂದ್ರದಲ್ಲಿ ಎರಡು ಪ್ರೋಟಾನ್‌ಗಳು ಮತ್ತು ಎರಡು ನ್ಯೂಟ್ರಾನುಗಳು ಇರುವುದರಿಂದ.

ಕೇವಲ ಹೀಲಿಯಂನಲ್ಲಷ್ಟೇ ಅಲ್ಲದೆ ಮಿಕ್ಕ ಧಾತುಗಳ ಪರಮಾಣುಗಳಲ್ಲೂ ನ್ಯೂಟ್ರಾನುಗಳು ವಿಪುಲವಾಗಿವೆ ಎಂದೂ ತಿಳಿದುಬಂತು. ತಾಟಸ್ಥ್ಯ ಎನ್ನುವುದು ರಾಜಕೀಯದಲ್ಲಿ ಬರುವ ಎಷ್ಟೋ ಮೊದಲೇ ಪರಮಾಣುವಿನಲ್ಲಿ ಬೇರೂರಿತ್ತು!

## ಪಾಸಿಟ್ರಾನ್

ವಿಚಿತ್ರವಾದರೂ ಪರಮಾಣು ನಿಯಮಗಳು ಪ್ರಭಾವಯುತವಾದುವು ಎನ್ನುವುದರ ಮತ್ತೊಂದು ಉದಾಹರಣೆ ಪಾಸಿಟ್ರಾನ್ ಕಂಡುಹಿಡಿಯುವಿಕೆ.

ಪರಮಾಣು ಕೇಂದ್ರದ ಸುತ್ತಲೂ ಎಲ್ಲಿ ಯಾವ ರೀತಿಯಲ್ಲಿ ಎಲೆಕ್ಟ್ರಾನುಗಳು ವಿತರಿಸಲ್ಪಡಬೇಕು ಎನ್ನುವ ಸ್ಥೂಲ ನಿಯಮಾವಳಿಗಳು ಸ್ವಲ್ಪ ಬೇರೂರುತ್ತಿದ್ದ ಹಾಗೇ ಇದನ್ನೆಲ್ಲಾ ನಿಖರವಾದ ಗಣಿತ ಸಮೀಕರಣಗಳಲ್ಲಿ ವ್ಯಕ್ತಪಡಿಸುವ ಕಡೆ ಪ್ರಯತ್ನಗಳಾಗತೊಡಗಿದುವು. ಹೆಚ್ಚು ವೇಗ ಹೊಂದಿಲ್ಲದ ಎಲೆಕ್ಟ್ರಾನುಗಳ ಬಗ್ಗೆ ವಿವರಿಸುವ ಸಮೀಕರಣಗಳು ಪರಮಾಣುವನ್ನು ಅರ್ಥ ಮಾಡಿಕೊಳ್ಳುವಲ್ಲಿ ಬಹಳ ಸಹಾಯಕವಾದರೂ, ಅತ್ಯಂತ ವೇಗದಿಂದ ಚಲಿಸುವ ಎಲೆಕ್ಟ್ರಾನುಗಳ ಬಗ್ಗೆ ಇವು ಸರಿಯಾಗಿರಲಿಲ್ಲ. ಹೆಚ್ಚು ವೇಗದ ಪದಾರ್ಥಗಳು ಐನ್‌ಸ್ಟೈನರ "ವಿಶೇಷ ಸಾಪೇಕ್ಷತಾ ಸಿದ್ಧಾಂತಕ್ಕೆ" ಅನುಗುಣವಾಗಿರಬೇಕು ಎನ್ನುವುದು ಅನೇಕ ವರ್ಷಗಳಿಂದಲೂ ಗೊತ್ತಿತ್ತು. ಎಲೆಕ್ಟ್ರಾನಿನ ನಿಯಮಗಳನ್ನೂ ಇದಕ್ಕೆ ತಕ್ಕಂತೆ ರೂಪಿಸಲು ಹೋದ ಬ್ರಿಟಿಶ್ ವಿಜ್ಞಾನಿ ಪಾಲ್ ಡಿರಾಕ್ ಅವರಿಗೆ ಒಂದು ಕುತೂಹಲಕಾರಿ ಪರಿಣಾಮ ಗೋಚರಿಸಿತು. ಅವರು ರೂಪಿಸಿದ್ದ ಸಮೀಕರಣ ಇಬ್ಬಗೆಯ ಫಲಿತಾಂಶ ಕೊಡುತ್ತಿತ್ತು! ಒಂದು ರೀತಿ ಅದೇನೋ ಎಲೆಕ್ಟ್ರಾನಿನ ನಡುವಳಿಕೆಯನ್ನು ಸರಿಯಾಗಿ ವಿವರಿಸುತ್ತಿತ್ತು. ಆದರೆ ಇನ್ನೊಂದು ಫಲಿತಾಂಶ ಒಂಟಿ, ಸ್ವತಂತ್ರ ಎಲೆಕ್ಟ್ರಾನಿಗೆ ಋಣಶಕ್ತಿ ಇರಲು ಸಾಧ್ಯ ಎಂದು ಹೇಳುತ್ತಿತ್ತು! ಚಲಿಸದೇ ಸುಮ್ಮನೆ ಇರುವ ಎಲೆಕ್ಟ್ರಾನಿಗೂ ಧನಶಕ್ತಿ ಇರುತ್ತದೆ. ಸಾಪೇಕ್ಷತಾ ಸಿದ್ಧಾಂತದ ಪ್ರಕಾರ ಆ ಶಕ್ತಿ ಎಲೆಕ್ಟ್ರಾನಿನ ದ್ರವ್ಯ ಪ್ರಮಾಣಕ್ಕೆ [mass] ಸಮ. ಆದ್ದರಿಂದ ಅತ್ಯಂತ ಕಡಿಮೆ ಶಕ್ತಿಯ ಎಲೆಕ್ಟ್ರಾನ್ ಎಂದರೂ ಅದಕ್ಕೆ ಅದರ ತೂಕದಷ್ಟು ಶಕ್ತಿ ಇರಬೇಕು. ಯಾವ ಪದಾರ್ಥಕ್ಕಾದರೂ ಹೀಗೇ. (ಆದ್ದರಿಂದಲೇ ಪರಮಾಣು ರಿಯಾಕ್ಟರ್‌ಗಳಲ್ಲಿ ತೆಪ್ಪಗೆ ಕೂತಿರುವ ಯುರೇನಿಯಂನಿಂದಲೇ ಅಪಾರ ಶಕ್ತಿ ಪಡೆಯಲು ಸಾಧ್ಯವಾಗಿರುವುದು.) ಹಾಗಿರುವಾಗ ಸೊನ್ನೆಗಿಂತಲೂ ಕಡಿಮೆಯಾದ "ಋಣ ಶಕ್ತಿ" ಎಂದರೇನು?

ತಲೆ ಕೆರೆದುಕೊಂಡ ವಿಜ್ಞಾನಿಗಳಿಗೆ ಇನ್ನೊಂದು ಅಂಶ ಹೊಳೆಯಿತು. ಡಿರಾಕ್ ಸಮೀಕರಣದ ಆ ಫಲಿತಾಂಶ ಹೇಳುತ್ತಿದ್ದ ಮತ್ತೊಂದು ವಿಷಯವೆಂದರೆ ಋಣಶಕ್ತಿ ಇರುವ ಎಲೆಕ್ಟ್ರಾನುಗಳಿಗೆ ಧನ ವಿದ್ಯುದಂಶ ಇರಬೇಕು. ಸಾಮಾನ್ಯ ಎಲೆಕ್ಟ್ರಾನಿನ ವಿದ್ಯುದಂಶಕ್ಕೆ ವಿರುದ್ಧವಾದ ಈ ಸಂಗತಿಯನ್ನು ಯೋಚಿಸಿದ ಅನೇಕರು ಬಹುಶಃ ಋಣ ಶಕ್ತಿಯ ಎಲೆಕ್ಟ್ರಾನ್ ಎಂದರೆ ತಮಗೆ ಆಗಾಗಲೇ ಗೊತ್ತಿರುವ ಧನ ವಿದ್ಯುದಂಶದ ಪ್ರೋಟಾನುಗಳೇ ಇರಬೇಕು ಎಂದರು. ಒಂದೇ ಸಮೀಕರಣದಿಂದ ಎರಡು ಪರಮಾಣು ಕಣಗಳನ್ನು ವಿವರಿಸಲು ಸಾಧ್ಯವಾದದ್ದು ಸಂತೋಷ ಎಂದುಕೊಂಡರು.

ಆದರೆ ಪ್ರಕೃತಿ ವಿಜ್ಞಾನಿಗಳಿಗೂ ಕೈ ಕೊಟ್ಟಿತು! ಗಣಿತ ಸಮೀಕರಣಗಳಲ್ಲಿ ತೃಪ್ತಿಕರವಾಗಿ ಕಂಡುಬಂದ ಮಾತ್ರದಿಂದಲೇ ಮೋಸ ಹೋಗಬಾರದು ಎಂದು ಪಾಠ ಹೇಳಿಕೊಡುವಂತೆಯೋ ಏನೋ ಹೊಸ ಕಣವೊಂದನ್ನು ತೋರಿಸಿಕೊಟ್ಟಿತು.

ಅಮೇರಿಕನ್ ವಿಜ್ಞಾನಿ ಕಾರ್ಲ್ ಆಂಡರ್ಸನ್‌ರವರು ವಿಶ್ವ ಕಿರಣಗಳನ್ನು ಅಭ್ಯಸಿಸುತ್ತಿದ್ದರು. ವಿಶ್ವ ಕಿರಣಗಳೆಂದರೆ ಪ್ರಮುಖವಾಗಿ ವೇಗವಾಗಿ ಚಲಿಸುವ ಪ್ರೋಟಾನುಗಳಿಂದ ಕೂಡಿದ್ದೇ ಎಂದು

ತಿಳಿದಿತ್ತು. ಹೊಸದಾಗಿ ಬಳಸಲ್ಪಡುತ್ತಿದ್ದ ಮೋಘ ಮಂದಿರದಲ್ಲಿ [cloud chamber] ವಿಶ್ವಕಿರಣಗಳು ಹೇಗೆ ವ್ಯವಹರಿಸುತ್ತವೆ ಎಂದು ಪ್ರಯೋಗಶಾಲೆಯಲ್ಲಿ ವೀಕ್ಷಿಸುತ್ತಿದ್ದ ಅವರಿಗೆ ೧೯೩೨ರಲ್ಲಿ ಒಂದು ವಿಚಿತ್ರ ಗಮನ ಸೆಳೆಯಿತು. ಮೋಘ ಮಂದಿರದ ಮಧ್ಯದಲ್ಲಿ ಅವರು ಒಂದು ಸಣ್ಣ ತಟ್ಟೆಯಿಟ್ಟಿದ್ದರು. ವಿಶ್ವಕಿರಣಗಳು ಮೋಘ ಮಂದಿರದೊಳಗೆ ಕೆಳಗೆ, ಮೇಲೆ ಎಲ್ಲಾ ಕಡೆಗಳಿಂದಲೂ ಪ್ರವೇಶಿಸಿ ತೂರಿ ಹೋಗುತ್ತಿದ್ದುವು. ಅವುಗಳು ಹೋದ ದಾರಿಯಲ್ಲಿ ಕ್ಷಣಕಾಲ ನೀರಿನ ಹನಿಗಳು ಉಂಟಾಗುತ್ತಿದ್ದುದರಿಂದ ಕಿರಣ ಹಾದುಹೋದ ದಾರಿ ಬೆಳಕಿನಲ್ಲಿ ಹೊಳೆದು ತಕ್ಷಣ ಕರಗಿಹೋಗುತ್ತಿತ್ತು. ಆದರೆ ಚುರುಕಾಗಿ ನೋಡುತ್ತಿದ್ದು ಗುಂಡಿಯೊತ್ತಿದ್ದರೆ ಕರಗುವ ಮೊದಲೇ ಫೋಟೋ ತೆಗೆದುಕೊಳ್ಳಬಹುದಿತ್ತು. ಈ ರೀತಿ ತೆಗೆದುಕೊಂಡ ಫೋಟೊ ಒಂದರಲ್ಲಿ ಒಂದು ಕಣ ಮಧ್ಯದ ತಟ್ಟೆಯೊಳಗೆ ತೂರಿ, ಕೊಂಚ ಶಕ್ತಿ ಕಳೆದುಕೊಂಡು ಹೊರಬಿದ್ದು ಹಾರಿಹೋಗಿತ್ತು.

ಮೋಘ ಮಂದಿರದಲ್ಲಿ ಅಯಸ್ಕಾಂತ ಕ್ಷೇತ್ರ ಇದ್ದುದರಿಂದ ವಿದ್ಯುದಂಶವಿರುವ ಕಣಗಳು ತಮ್ಮ ವಿದ್ಯುತ್ತು ಮತ್ತು ಶಕ್ತಿಗೆ ತಕ್ಕಂತೆ ಬಾಗಿ ಚಲಿಸುತ್ತಿದ್ದುವು. ಸಾಮಾನ್ಯವಾಗಿ ಕಣಗಳು ಮೇಲಿನಿಂದ ಬಂದು ಕೆಳಗಿನಿಂದ ಹೋದವೋ ಕೆಳಗಿನಿಂದ ಬಂದು ಮೇಲೆ ಹೋದವೋ ಹೇಳಲಾಗುತ್ತಿರಲಿಲ್ಲ. ಆದರೆ ಮೇಲೆ ಹೇಳಿದ ಫೋಟೋದಲ್ಲಿ ಕಣ ತಟ್ಟೆಯೊಳಗೆ ಕೊಂಚ ಶಕ್ತಿ ಕಳೆದುಕೊಂಡಿದ್ದರಿಂದ ಹೊರಬಂದಾಗ ಇನ್ನೂ ಕೊಂಚ ಹೆಚ್ಚಾಗಿ ಬಾಗಿತ್ತು. ಆದ್ದರಿಂದ ಕಣ ಮೋಘಮಂದಿರ ಪ್ರವೇಶಿಸಿದ್ದ ದಿಕ್ಕು ತಿಳಿದುಬಂತು. ದಿಕ್ಕು ತಿಳಿದ ಮೇಲೆ ಕಣ ಬಾಗಿದ್ದ ರೀತಿಯನ್ನು ನೋಡಿ ಆ ಕಣ ಯಾವ ವಿದ್ಯುದಂಶದಿಂದ ಕೂಡಿದೆ ಎಂದು ಹೇಳಬಹುದು. ಹಾಗೂ ಸುಮಾರಾಗಿ ಯಾವ ತೂಕದ್ದು ಎಂದೂ ಅಂದಾಜು ಮಾಡಬಹುದು. ಈ ರೀತಿ ಮಾಡಿದ ಆಂಡರ್‌ಸನ್‌ರಿಗೆ ಕಂಡುಬಂದದ್ದು ಆ ಕಣ ಪ್ರೊಟಾನು ಅಲ್ಲ, ಎಲೆಕ್ಟ್ರಾನೂ ಅಲ್ಲ ಎನ್ನುವುದು ವಿದ್ಯುದಂಶವಿದ್ದ ಕಣಗಳು ಅದುವರೆಗೆ ತಿಳಿದದ್ದು







ಇವೆರಡೇ. ಆದರೆ ಫೋಟೋದ ಕಣ ಮಾತ್ರ ಎಲೆಕ್ಟ್ರಾನಿನಷ್ಟು ತೂಕವಿರುವ ಆದರೆ ಪ್ರೋಟಾನಿನ ಧನ ವಿದ್ಯುದಂಶ ಇರುವ ಕಣ! ಹೊಸ ಕಣ.

ಇನ್ನೂ ಅನೇಕ ಫೋಟೋಗಳನ್ನು ತೆಗೆದುಕೊಂಡ ನಂತರ ಸಂದೇಹವೇ ಉಳಿಯದಿದ್ದಾಗ ವಿಷಯ ಪ್ರಚಾರ ಪಡಿಸಿದರು ಆಂಡರ್‌ಸನ್. ತಕ್ಷಣವೇ ವಿಜ್ಞಾನಿಗಳು ಇದು ಏನೆಂದು ಗುರುತಿಸಿದರು. ಇದೇ ಡಿರಾಕ್ ಸಮೀಕರಣದ ಎರಡನೇ ಫಲಿತಾಂಶ ಹೇಳುತ್ತಿದ್ದ ಕಣ! ಪ್ರೊಟಾನ್ ಅಲ್ಲ, ಹೊಸ ರೀತಿಯ ಎಲೆಕ್ಟ್ರಾನ್ ಕಣ! ತೂಕದಲ್ಲಿ ಎಲೆಕ್ಟ್ರಾನಿನಷ್ಟೆ ಇದ್ದು ಮಿಕ್ಕೆಲ್ಲ ಗುಣಗಳಲ್ಲಿ ಎಲೆಕ್ಟ್ರಾನಿನ ತದ್ವಿರುದ್ಧವಾಗಿದ್ದ ಈ ಕಣವನ್ನು ಪಾಸಿಟ್ರಾನ [Positron] ಎಂದು ಹೆಸರಿಸಿದರು.

ಪಾಸಿಟ್ರಾನ್ ಕಂಡುಹಿಡಿದಾಗಿನಿಂದ ವಿಜ್ಞಾನದ ರೂಪವೇ ಬದಲಾಯಿಸಿತು. ಪರಮಾಣುವಿನಲ್ಲಿ ಇಲ್ಲದಿದ್ದರೂ ಪ್ರಕೃತಿಯಲ್ಲಿ ತೋರಿ ಬಂದ ಮೊದಲ ಕಣ ಪಾಸಿಟ್ರಾನ್! ಒಂದಕ್ಕೊಂದು ಸಹಕರಿಸಿ ಪರಮಾಣುವನ್ನು ಸೃಜಿಸಿದ್ದ ಎಲೆಕ್ಟ್ರಾನ್ ಪ್ರೋಟಾನ್ ನ್ಯೂಟ್ರಾನ್‌ಗಳು ಪಾಸಿಟ್ರಾನ್ ಎಲೆಕ್ಟ್ರಾನಿನ ಹತ್ತಿರ ಬಂದ ತಕ್ಷಣ ಅದರ ಜೊತೆ ಹೋರಾಡಿ ಸಮಾನ ಶಕ್ತಿಯ ತಾವೆರಡೂ ಸಂಪೂರ್ಣವಾಗಿ ಹತವಾಗಿ, ಬೆಳಕಾಗಿ ಹಾರಿ ಹೋಗುವಂತೆ ಮಾಡುವ ಪಾಸಿಟ್ರಾನ್ ಪ್ರಕೃತಿಯಲ್ಲೂ ವಿರುದ್ಧ ವಸ್ತುಗಳಿವೆ ಎಂದು ತೋರಿಸಿ ಕೊಟ್ಟಿತು.

## ಪ್ರಾಥಮಿಕ ಕಣ ವಿಜ್ಞಾನ

ನಮ್ಮ ಸುತ್ತ ಮುತ್ತಲೂ ಕಾಣಿಸುವ ಪದಾರ್ಥಗಳೇ ಪ್ರಕೃತಿಯ ಇಟ್ಟಿಗೆಗಳು ಎನ್ನುವ ಭಾವನೆಯನ್ನು ಬಿಟ್ಟು ಬೇರೆ ಊಹಿಸಲೂ ಆಗಿರಲಿಲ್ಲ ವಿಜ್ಞಾನಿಗಳಿಗೆ ೧೯೩೨ರ ವರೆಗೂ. ವಿಶ್ವದ ಎಷ್ಟೋ ಪ್ರಪಂಚ ಪರಿಣಾಮಗಳಾದರೂ ಅವುಗಳ ಮೂಲ ಪರಮಾಣು, ಪರಮಾಣುಗಳ ಪ್ರತಿಕ್ರಿಯೆಗಳಲ್ಲಿ ಎಂದಿದ್ದ ಬಲವಾದ ನಂಬಿಕೆಗೆ ಕೊಡಲಿಯೇಟು ಬಿತ್ತು. ಪಾಸಿಟ್ರಾನ್ ತೋರಿಬಂದಾಗಿನಿಂದ ಪರಮಾಣುವಿನಲ್ಲೂ ಕಣಗಳಿವೆ ಎನ್ನುವುದೇ ಸಾಲದೆನ್ನುವಂತೆ, ಆ ಕಣಗಳಿಗಿಂತಲೂ ಭಿನ್ನವಾದ ಸ್ವತಂತ್ರ ಕಣಗಳಿವೆ ಎಂದಾಯಿತು. ೧೯೩೭ ರಲ್ಲಿ ಕಂಡುಬಂದ ಮ್ಯೂ ಕಣ [Muon], ೧೯೪೭ ರಲ್ಲಿ ಕಂಡು ಹಿಡಿದ ಪೈ ಕಣ Pion] ಇತ್ಯಾದಿಗಳಿಂದ ಒಂದು ಹೊಸ ವಿಜ್ಞಾನವೇ ಬೆಳೆಯಿತು. ಪ್ರಕೃತಿಯ ಇಟ್ಟಿಗೆಗಳು ಪರಮಾಣುಗಳಲ್ಲ, ಈ ಕಣಗಳೇ ಎನ್ನುವ ತತ್ವವನ್ನು ಎಲ್ಲರೂ ಸ್ವೀಕರಿಸತೊಡಗಿದರು. ಇಂದಂತೂ ನೂರಕ್ಕೂ ಮಿಗಿಲಾದ ಪ್ರಾಥಮಿಕ ಕಣಗಳು ತಿಳಿದು ಬಂದಿವೆ. ಎಲೆಕ್ಟ್ರಾನಿನ ಎದುರಾಳಿಯಾಗಿ ಪಾಸಿಟ್ರಾನ್ ಇರುವಂತೆ ಪ್ರೋಟಾನ್ ಮತ್ತು ನ್ಯೂಟ್ರಾನುಗಳಿಗೂ ಎದುರಾಳಿ ಕಣಗಳಿರುವುದು ತಿಳಿದಿದೆ. ವಿಶ್ವದ ಅಂತಿಮ ನಿಯಮಗಳು ಪರಮಾಣುವಿನಲ್ಲಿ ಅಲ್ಲ, ಅದಕ್ಕಿಂತಲೂ ಎಷ್ಟೋ ಕೋಟಿ ಪಾಲು ಚಿಕ್ಕದಾದ ಪ್ರಾಥಮಿಕ ಕಣಗಳಲ್ಲಿ ಆಳುತ್ತಿವೆ ಎನ್ನುವುದು ಈಗ ಬೇರ್ತೂರಿದೆ. ಈ ಮಹತ್ವದ ವಿಜ್ಞಾನಕ್ಕೆ ಈ ವರ್ಷ ಐವತ್ತು ತುಂಬಿದೆ.

## ಜನಜೀವನದಲ್ಲಿ

ವಿಶ್ವದ ಅಂತಿಮ ನಿಯಮಗಳನ್ನು ಅರಿಯುವ ವಿಭಾಗವಾದ ಪ್ರಾಥಮಿಕ ಕಣ ವಿಜ್ಞಾನವನ್ನು (ಜ್ಞಾನತೃಷೆಯನ್ನೇ ಸ್ವಾಭಾವಿಕವಾಗಿರಿಸಿಕೊಂಡಿರುವ) ಮನುಷ್ಯರು ಗೌರವಿಸಿ ಅದರ ಮಹತ್ವದ ಹುಟ್ಟು ಹಬ್ಬದಲ್ಲಿ ಭಾಗವಹಿಸುವುದು ಉಚಿತ. ಆದರೆ ನ್ಯೂಟ್ರಾನ್ ಮತ್ತು ಪಾಸಿಟ್ರಾನ್‌ಗಳು ಕೇವಲ ಅಲಂಕಾರ ಮಾಡಿಸಿಕೊಂಡು ಮಾತ್ರವೇ ಮೆರೆದಾಡುತ್ತಿಲ್ಲ, ಸಮಾಜದಲ್ಲಿ ಈಗಾಗಲೇ ಪ್ರಭಾವ ಬೀರಿವೆ, ಇನ್ನೂ ಬೀರುತ್ತಿವೆ.

ಇಂದು ಮುಂಬೈಯ ರಸ್ತೆ ಬದಿಗಳಲ್ಲಿ ವಾಸ ಮಾಡುವ ಕಡು ಬಡವರ ಜೀವನಗಳನ್ನು ನೇರವಾಗಿ ಮುಟ್ಟಿರುವ ಕಣ ನ್ಯೂಟ್ರಾನ್ ಆ ಬೀದಿಗಳು ಸುರಕ್ಷಿತವಾಗಿರುವಂತೆ ಉರಿಯುತ್ತಿರುವ

ದೀಪಗಳಿಗೆ ವಿದ್ಯುಚ್ಛಕ್ತಿ ಒದಗಿಸುತ್ತಿರುವ ಪರಮಾಣು ರಿಯಾಕ್ಟರ್ ಶಕ್ತಿ ನೀಡುವಂತೆ ಮಾಡುವುದೇ ನ್ಯೂಟ್ರಾನ್‌ಗಳ ಪ್ರವಾಹ! ರಿಯಾಕ್ಟರಿನ ಯುರೇನಿಯಮ್ಮನ್ನು ವಿಭಜಿಸಿ ಬಂದ ಶಕ್ತಿಯನ್ನು ನಿಯಂತ್ರಿಸಲು ಬೇರೆ ಕಣಗಳಿಂದ ಸಾಧ್ಯವಿಲ್ಲ. ಮಾರಕಾಸ್ತ್ರಗಳಾದ ಪರಮಾಣು ಬಾಂಬುಗಳೂ ಸ್ಫೋಟವಾಗುವುದು ನ್ಯೂಟ್ರಾನಗಳು ಚಲನೆಯಿಂದಲೇ. ಇವಕ್ಕಿಂತಲೂ ಭಯಂಕರವಾದ ಅಸ್ತ್ರವೆಂದರೆ ಇತ್ತೀಚೆಗೆ ಕೇಳಿ ಬರುತ್ತಿರುವ "ನ್ಯೂಟ್ರಾನ್ ಬಾಂಬ್" ಇಂದು ಇಡೀ ಮಾನವ ಸಮಾಜವೇ ಈ ಬಾಂಬುಗಳ ಹೆದರಿಕೆಯಲ್ಲಿ ನಡುಗುತ್ತಿದೆ ಎನ್ನುವುದೇ ಸಾಕು ನ್ಯೂಟ್ರಾನ್ ನಮ್ಮೆಲ್ಲರ ಜೀವನವನ್ನು ಹೇಗೆ ತಟ್ಟಿದೆ ಎಂದು ಅರಿವಾಗಲು! ಆದರೂ ನ್ಯೂಟ್ರಾನ್ ತಾನೇ ಭೀಕರವಲ್ಲ. ಬುದ್ಧಿವಂತಿಕೆಯಿಂದ ಉಪಯೋಗಿಸಿಕೊಂಡಾಗ ಸಮಾಜ ಕಲ್ಯಾಣಕ್ಕೆ ಸೊಂಟ ಕಟ್ಟಬಲ್ಲದು. ನ್ಯೂಟ್ರಾನುಗಳನ್ನು ಉಪಯೋಗಿಸಿ ವಿವಿಧ ಐಸೊಟೋಪುಗಳನ್ನು ತಯಾರಿಸಲಾಗುತ್ತಿದೆ. ಇವುಗಳು ವೈದ್ಯಕೀಯದಲ್ಲಿ ಬಹಳ ಉಪಯೋಗಿಗಳು. ಹಾಗೆಯೇ ಉತ್ತಮ ತಳಿಯ ಬೆಳೆಗಳನ್ನು ಬೆಳೆಯುವ ಸಂಶೋಧನೆಗಳಲ್ಲೂ ಉಪಯೋಗಿಸಲ್ಪಡುತ್ತದೆ ನ್ಯೂಟ್ರಾನ್.

ನ್ಯೂಟ್ರಾನಿನಂತೆ ಪರಮಾಣುವಿನಲ್ಲಿ ಶಾಶ್ವತವಾಗಿ ಕಾಣಬರದ, ಪದಾರ್ಥಗಳೊಂದಿಗೆ ತೀವ್ರವಾಗಿ ಹೊಡೆದಾಡಿ ಅಲ್ಪ ಕಾಲದಲ್ಲೇ ಮಾಯವಾಗುವ ಸಂಭವವೇ ಹೆಚ್ಚಾಗಿರುವ ಪಾಸಿಟ್ರಾನ್ ಏನೂ ಉಪಯೋಗವಾಗದು ಎನ್ನಿಸಬಹುದು ಮೊದಲ ನೋಟಕ್ಕೆ – ಪ್ರಾಥಮಿಕ ಕಣ ವಿಜ್ಞಾನವೇ ಇನ್ನೂ ಜ್ಞಾನಾರ್ಜನೆಯ ಹಂತದಲ್ಲಿದೆಯಾದ್ದರಿಂದ ಇಂತಹ ಕಣಗಳನ್ನು ಪಳಗಿಸಿ ಉಪಯೋಗಿಸುವ ಪ್ರಯತ್ನಗಳೂ ಆರಂಭವಾಗಿಲ್ಲ ಎನ್ನುವುದೂ ನಿಜ. ಆದರೆ ಅಷ್ಟರಲ್ಲೇ ತನ್ನ ಉಪಯೋಗವನ್ನು ತೋರಿಸಿಕೊಟ್ಟಿದೆ ಪಾಸಿಟ್ರಾನ್ ಎಲೆಕ್ಟ್ರಾನ್ ಅಥವಾ ಪ್ರೋಟಾನುಗಳನ್ನು ಪದಾರ್ಥಗಳೊಂದಿಗೆ ಘರ್ಷಿಸಿದಾಗ ಅವುಗಳ ಶಕ್ತಿಯಲ್ಲಿ ಕೊಂಚ ಭಾಗ ಪಾಸಿಟ್ರಾನ್‌ಗಳ ಉತ್ಪಾದನೆಗೆ ದಾರಿ ಮಾಡಿಕೊಡುತ್ತದೆ. ಇಂತಹವನ್ನು ಶೇಖರಿಸಿ ಬಹುಶಕ್ತಿ ವಿಜ್ಞಾನದಲ್ಲಿ ಇತ್ತೀಚೆಗೆ ಬಹಳ ಉಪಯೋಗಿಸುತ್ತಿದ್ದಾರೆ. ಘರ್ಷಣೆಯಲ್ಲಿ ಇನ್ನೂ ಕೆಲವು ಸಲ ಸಾಮಾನ್ಯವಾಗಿ ಕಾಣಬರದ ಪರಮಾಣುಗಳು ಉತ್ಪಾದನೆಯಾಗಿ ಅವುಗಳಿಂದಲೂ ಪಾಸಿಟ್ರಾನುಗಳು ಚಿಮ್ಮಿಸಲ್ಪಡುತ್ತವೆ. ಇಂತಹ ವಿಶೇಷ ಐಸೋಟೋಪುಗಳನ್ನು ದ್ರವ್ಯ ರೂಪದಲ್ಲಿ ದೇಹಕ್ಕೆ ಕೊಟ್ಟು ದೇಹದ ವಿವಿಧ ಅಂಗಗಳಲ್ಲಿ ಕೂಡಿಕೊಳ್ಳುವಂತೆ ಮಾಡಬಹುದು. ಆ ಜಾಗದಿಂದ ಚಿಮ್ಮುವ ಪಾಸಿಟ್ರಾನಗಳು ಸುತ್ತಲಿನ ಪರಮಾಣುಗಳಲ್ಲಿರುವ ಎಲೆಕ್ಟ್ರಾನುಗಳ ಜೊತೆ ಘರ್ಷಿಸಿ ಎರಡೂ ಮಾಯವಾಗಿ ಕ್ಷ– ಕಿರಣಗಳಾಗಿ ದೇಹದಿಂದ ಹೊರಬರುತ್ತವೆ. ಇವುಗಳನ್ನು ಫೋಟೋ ಹಿಡಿದು ಅಭ್ಯಾಸಬಹುದು. ಹೀಗೆ ಶಸ್ತ್ರಚಿಕಿತ್ಸೆ ಇಲ್ಲದೆಯೇ ರೋಗದ ಇರುವಿಕೆ, ಇಲ್ಲದಿರುವಿಕೆ ತಿಳಿಯುವುದು ಅನುಕೂಲ. ಅಲ್ಲದೆ ಶಸ್ತ್ರಚಿಕಿತ್ಸೆ ಅಪಾಯಕಾರಿಯಾಗಬಹುದಾದ ಸಂದರ್ಭಗಳಲ್ಲಂತೂ ಪಾಸಿಟ್ರಾನ್ ವಿಧಾನ ಬಹು ಉಪಯೋಗಿ. ಆದ್ದರಿಂದಲೇ ಈಗ ಪಾಶ್ಚಾತ್ಯ ದೇಶಗಳ ಪ್ರಮುಖ ಆಸ್ಪತ್ರೆಗಳು ಬಹಳ ಬಯಸುವ ಪ್ರತಿಷ್ಠೆಯ ಉಪಕರಣವೆಂದರೆ ಪಾಸಿಟ್ರಾನ್ ಎಲೆಕ್ಟ್ರಾನ್ ಟೊಮಾಗ್ರಫಿ ಉಪಕರಣ.

ಆದ್ದರಿಂದಲೇ ಇದನ್ನು ಚುಟುಕಾಗಿ PET ಎನ್ನುತ್ತಾರೆ. ಆದರೆ ಸೂಕ್ಷ್ಮಾತಿಸೂಕ್ಷ್ಮವಾದ ಪ್ರಾಥಮಿಕ ಕಣಗಳನ್ನು ಸಮಾಜ ಕಲ್ಯಾಣಕ್ಕೆ ಬಳಸುವ ಭವಿಷ್ಯಕ್ಕೆ ಇದು ಅನುಕೂಲವಾದ ಅರ್ಥಗರ್ಭಿತ ಹೆಸರು!

✡

---

ಎಷ್ಟೋ ಸಲ ಸೂಜಿಯ ಕಣ್ಣಲ್ಲಿ ದಾರವನ್ನು ಪೋಣಿಸುವುದು ಕಷ್ಟವಾಗುತ್ತದೆ. ಆದರೆ ದಬ್ಬಣದಲ್ಲಿ ಹುರಿಯನ್ನು ಹಾಯಿಸುವುದು ಸುಲಭವಾಗುತ್ತದೆ.

ಇದು ಹೀಗೆಯೆ. ಸೂಜಿಯು ಅವಶ್ಯಕತೆಯಿದ್ದಲ್ಲಿ ಖಡ್ಗದ ಕೆಲಸವೇನು? ಅಕ್ಯುಪಂಕ್ಚರ್! ಸಣ್ಣ ಸೂಜಿಯಿಂದ ಎಂಥ ಮಹತ್ಕಾರ್ಯ!

## ೪೭

ಕನ್ನಡ ಭಾಷೆಗೆ ಉಡುಪಿಯ ಹೋಟೆಲ್ ಉದ್ಯಮ ಒಂದು ವಿಶಿಷ್ಟ ಕೊಡುಗೆ ಇತ್ತಿದೆ— ಅದೆಂದರೆ **ಮಾಣಿ**. ಈ ಶಬ್ದವನ್ನು ಕನ್ನಡದ ಆಧುನಿಕ ಕಥಾ ಸಾಹಿತ್ಯದಲ್ಲಿ, ಬಹುಶಃ ಅನಕೃ ಅವರು ಮೊದಲು ಹೋಟೆಲ್ಲಿನ ಪರಿಚಾರಕ, ವಿಶೇಷತಃ **ಸಪ್ಲೈಯರ್** ಅಥವಾ **ಸರ್ವರ್** ಎಂಬರ್ಥದಲ್ಲಿ ಬಳಸಿದರೆಂದು ನನ್ನೆಣಿಕೆ. ಈ ಕೊಡುಗೆ ಉಡುಪಿ ಹೋಟೆಲ್ಲುಗಳ ಆಕಸ್ಮಿಕ ದಾಯ. ಈ ಶತಮಾನದ ಇಪ್ಪತ್ತು ಮೂವತ್ತುಗಳಲ್ಲಿ ತೀವ್ರ ದಾರಿದ್ರ್ಯದಿಂದ ದಕ್ಷಿಣ ಕನ್ನಡದ ಬ್ರಾಹ್ಮಣ ಹುಡುಗರು ದಕ್ಷಿಣ ಭಾರತದಲ್ಲೆಲ್ಲ ವಿಸ್ತರಿಸತೊಡಗಿದ್ದ ಹೋಟೆಲ್ಲುಗಳ ಮಾಲಿಕರೊಡನೆ ಹತ್ತೋ ಹನ್ನೆರಡೋ ವಯಸ್ಸಿನಲ್ಲಿ ಹೊರಟು ಬಂದು ಹೋಟೆಲ್ಲುಗಳಲ್ಲಿ ಸಪ್ಲೈಯರುಗಳಾಗಿ ತಮ್ಮ ಉಮೇದ್ವಾರಿಕೆಯನ್ನು ಪ್ರಾರಂಭಿಸಿದರು. ದಕ್ಷಿಣ ಕನ್ನಡದ ತುಳು, ಕನ್ನಡ ಭಾಷಿಗಳಿಬ್ಬರೂ ಬ್ರಾಹ್ಮಣ ಗಂಡುಮಕ್ಕಳನ್ನು ಮಾಣಿಗಳೆಂದು ಕರೆಯುತ್ತಾರೆ. ಮಾಲಿಕರು ಸಪ್ಲೈಯರುಗಳನ್ನು ಕೂಗುವಾಗ ತಮ್ಮೂರ ಸಂಪ್ರದಾಯದಂತೆ ಮಾಣಿಗಳೆಂದೇ ಸಂಬೋಧಿಸುತ್ತಿದ್ದುದರಿಂದ ಗಿರಾಕಿಗಳು **ಮಾಣಿ**ಯನ್ನು **ಸಪ್ಲೈಯರ್**ಗೆ ಸಮೀಕರಿಸಿದರು.

ನಿಜಕ್ಕೂ ಇದು ಸಂಸ್ಕೃತದ **ಮಾಣವ** ಅಥವಾ **ಮಾಣವಕ** ಪದದ ಒಂದು ರೂಪ. ಅದರರ್ಥ ಹುಡುಗ– ವಿಶೇಷತಃ ಬ್ರಾಹ್ಮಣ **ವಟು**. ಸಂಸ್ಕೃತ ನಿರುಕ್ತಕಾರರು ಅದು **ಮಾನವ**ದ್ದೇ ಒಂದು ರೂಪವೆಂದೂ ಚಿಕ್ಕತನವನ್ನು ಸೂಚಿಸಲು **ನ** ವನ್ನು **ಣ** ಮಾಡಿದರೆಂದೂ ಹೇಳುತ್ತಾರೆ. ಗಿಡ್ಡ ಎಂದ ಹಾಗೆ. ಸ್ವಲ್ಪ ತಿರಸ್ಕಾರದಿಂದಲೂ ಅದನ್ನು ಪ್ರಯೋಗಿಸುತ್ತಾರೆ. ಒಂದು ಕಾಲದಲ್ಲಿ **ಮಾಣಿ** ಕರ್ನಾಟಕದಲ್ಲೆಲ್ಲ ಬ್ರಾಹ್ಮಣ ಹುಡುಗ ಎಂಬರ್ಥದಲ್ಲಿ ಪ್ರಯೋಗದಲ್ಲಿದ್ದಿರಬೇಕು. ನೇಮಿಚಂದ್ರ ಅರ್ಧನೇಮಿ ಪುರಾಣದಲ್ಲಿ ಬಲಿಯನ್ನು ಮೆಚ್ಚಿದ ವಾಮನನನ್ನು "**ಅತಿವರ್ತಿ ಮಾಣಿ**" (ಕಿಡಿಗೇಡಿ ಬ್ರಾಹ್ಮಣ ಹುಡುಗ) ಎಂದಿದ್ದಾನೆ. ಈ ಅರ್ಥದಿಂದ **ಮಾಣಿ** ಹೋಟೆಲ್ ಉದ್ಯಮದ ಮೂಲಕ "ನ ಚ ಲಿಂಗಂ ನ ಚ ವಯಃ" ಆಗಿದ್ದಾನೆ— ಮೊನ್ನೆ ಒಂದು ವಿದೇಶ ಪ್ರವಾಸ ಪುಸ್ತಕದಲ್ಲಿ ನಾನು **ಮುದುಕಿಮಾಣಿ** ಎಂಬ ಪ್ರಯೋಗ ನೋಡಿದೆ!

ಮಾಣವಕನ ಕಥೆ ಹೀಗಾದರೆ ಬ್ರಾಹ್ಮಣ ಹಳೆಗಾಲದಲ್ಲಿಯೇ ನಾನಾ ಅವತಾರಗಳನ್ನು ತಾಳಿದೆ. ದ್ರಾವಿಡ **ಪಾರ್ಪನ್** – **ಪಾರ್ವ** – **ಹಾರುವ** ಬ್ರಾಹ್ಮಣದ್ದೇ ಅಪಭ್ರಂಶವೆಂದು ಒಂದು ಅಭಿಪ್ರಾಯವಿದೆ. **ಹಾರುವ** ಈಗ ಹೇಗೆ ತಿರಸ್ಕಾರಾರ್ಥಕವಾಗಿದೆಯೆಂದು ಹೇಳಬೇಕಾಗಿಲ್ಲ. ದ್ರಾವಿಡದ **ಪಾರ್** (ಕಾಣು) ಎಂಬರ್ಥಕ್ಕೆ ಪ್ರತಿಯಾಗಿ ಇನ್ನೊಂದು ಅರ್ಥವಾದ **ಹಾರೈಸು** (ಅಪ್ಪರಿಂದ) ಬೇಡು ಎಂಬರ್ಥವನ್ನು ಹೊರಿಸಿ ಈ ನೀಚಾರ್ಥ ಬಂದಿರಬಹುದು. ಉತ್ತರ ಕರ್ನಾಟಕದಲ್ಲಿ **ಬಬಣಾಚಾರ** ಎಂಬೊಂದು ಪದ ಇದೆ. ಇದರ ಅರ್ಥ ಕಣ್ಣು ಕಟ್ಟಿನ ಸದಾಚಾರ, ಠಕ್ಕು ಆಚಾರ ಎಂದು. ಇದು **ಬ್ರಾಹ್ಮಣಾಚಾರ**ದ್ದೇ ನೀಚಾರ್ಥ ಇರಬೇಕು. **ಬ್ರಾಹ್ಮಣ** ಶಬ್ದ ಅಶೋಕನ ಪ್ರಾಕೃತದಲ್ಲಿ **ಬಬ್ಬಣ** ಆಗಿರುವುದು ಗಮನಾರ್ಹ. ಹಿಂದುಸ್ತಾನಿಯಲ್ಲಿ **ಬೊಮ್ಮನ** ಶಬ್ದ ಬ್ರಾಹ್ಮಣನಿಗೆ **ಹಾರುವ**ದ ಸಮಾನಾರ್ಥಕವಾಗಿದೆ. ತುಳು ಬ್ರಾಹ್ಮಣರಲ್ಲಿ ಹೆಂಡತಿಯನ್ನು **ರಾಮಣಿ** ಎನ್ನುತ್ತಾರೆ. ಇದು **ರಮಣಿ**ಯ ಒಂದು ರೂಪವೆಂದು ವಾದಿಸಲು ಸಾಧ್ಯವಿದ್ದರೂ ಬಹುಶಃ ಅದು **ಬ್ರಾಹ್ಮಣಿ**ಯ ಒಂದು ಅವತಾರವಾಗಿದೆ. ಸಾರಸ್ವತ ಬ್ರಾಹ್ಮಣರು ಕೊಂಕಣಿಯಲ್ಲಿ **ಬೊಮ್ಮಣು** ಎಂದು ಗಂಡನನ್ನು ಸಂಬೋಧಿಸುವ ಪರಿಪಾಠ ಉಂಟೆಂದು ಕೇಳುತ್ತೇನೆ.

ರಾಜನ್ ಎನ್ನುವುದು ಅರಸನಿಗೆ ಸಂಸ್ಕೃತ ಪದ. ಅದರ ಜ್ಞಾತಿ ಪದಗಳು ಭಾರೋಪ್ಯ ಭಾಷೆಗಳಲ್ಲಿ ಇವೆ. (ಉದಾಹರಣೆಗೆ ಲ್ಯಾಟಿನ್ ರೆಕ್ಸ್, ಪರ್ಶಿಯನ್ ಶಾಹ). ಅದರದೇ ಅವತಾರಗಳಾದ ರಾಯ, ರೈ, ರೇಯ, ರಾವ್ ಮೊದಲಾದವು ನಮ್ಮ ಸಾಮಾನ್ಯ ಉಪನಾಮವಾಗಿ ಚಾಲ್ತಿಯಲ್ಲಿವೆ. ಅದನ್ನು ಸಕಲ ಜಾತಿಯವರೂ ಈಗ ಬಳಸುತ್ತಾರೆ. ರಾಜರುಗಳು ಈ ಬರಡು ರಾಜತ್ವದಿಂದ ತೃಪ್ತರಾಗದೆ ರಾಜಾಧಿರಾಜ (ಪರ್ಶಿಯನ್ ಭಾಷೆಯಲ್ಲಿ ಶಹಾನ್‌ಶಾಹ), ಮಹಾರಾಜ, ಮಹಾರಾಜಾಧಿರಾಜ ಇತ್ಯಾದಿ ಬಿರುದುಗಳನ್ನು ಇಟ್ಟುಕೊಂಡರು. ನೇಪಾಳದಲ್ಲಿ ಇಂಥ ಬಿರುದುಗಳು ತಮಾಷೆಯ ಪರಿಸ್ಥಿತಿಯನ್ನು ಉಂಟುಮಾಡಿದವು. ಅಲ್ಲಿಯ ಶಾಹ ಕುಲದ ರಾಜರನ್ನು ಹೆಚ್ಚು ಕಡಿಮೆ ನಿರ್ಬಂಧದಲ್ಲೇ ಇರಿಸಿ ವಂಶಪಾರಂಪರ್ಯವಾಗಿ ರಾಣಾ (ಇದೂ ರಾಜನ್ ಪದದ್ದೇ ಒಂದು ಅಪಭ್ರಂಶ) ಕುಲದವರು ಪ್ರಧಾನ ಮಂತ್ರಿತ್ವವನ್ನು ಅನುಭವಿಸತೊಡಗಿ ತಾವು ಮಹಾರಾಜ ಬಿರುದನ್ನು ಇಟ್ಟುಕೊಂಡು ಮೇಲೆ ಕೈಗೊಂಬೆ ಶಾಹರಿಗೆ ರಿಯಾಯತಿಯಾಗಿ ಮಹಾರಾಜಾಧಿರಾಜ ಬಿರುದನ್ನು ಬಳಸಲು ಅನುಮತಿ ಇತ್ತರು! ಆದರೆ ರಾಜನ್ ಬಿರುದಿಗೆ ಎಷ್ಟು ಪೂರ್ವೋಪಾಧಿಗಳನ್ನು ಸೇರಿಸಿದರೂ ಮಹಾರಾಜರು ಬಹಳ ಕಾಲ ತಮ್ಮ ಏಕಸತ್ತೆಯನ್ನುಳಿಸಿಕೊಳ್ಳಲಿಲ್ಲ. ಬ್ರಾಹ್ಮಣರೂ ಸಂನ್ಯಾಸಿಗಳೂ ಮಠಾಧೀಶರೂ ಮಹಾರಾಜರೆಂದು ಕರೆಸಿಕೊಳ್ಳತೊಡಗಿದರು. ಧಾರ್ಮಿಕ ಮುಂದಾಳುಗಳು ಈ ಪ್ರಕಾರ ಲೌಕಿಕ ಆಧಿಪತ್ಯದ ಬಿರುದುಗಳನ್ನೂ ವಹಿಸಿಕೊಂಡದ್ದು ಸಮಾಜ ಶಾಸ್ತ್ರೀಯವಾಗಿ ಅರ್ಥಪೂರ್ಣವಾಗಿದೆ. (ಮುಸಲ್ಮಾನ ಫಕೀರರು ಶಹಾನ್‌ಶಾಹ ಅಲ್ಲದಿದ್ದರೂ ಶಾಹ ಬಿರುದು ಹೊರುತ್ತಾರೆ). ಮಹಾರಾಜರ ಅಧಃಪಾತ ಇಷ್ಟಿಗೆ ನಿಲ್ಲಲಿಲ್ಲ. ದಕ್ಷಿಣೆಗೆ ಕೈಯೊಡ್ಡುವ ದೀನ ಬ್ರಾಹ್ಮಣರೂ ಮಹಾರಾಜರಾದರು (ಉತ್ತರ ಭಾರತದಲ್ಲಿ). ಕಟ್ಟಕಡೆಗೆ ಅಡುಗೇಭಟ್ಟರು ರಸೋಯಿ (ಅಡಿಗೆಯ) ಮಹಾರಾಜರಾದರು.

ಪವಿತ್ರ ಸ್ಥಾನಗಳು ಹಾಸ್ಯದ ಆಯುಧಗಳಾಗುವುದು ಭಾರತೀಯರ ಅಂತಃಸ್ಥ ಹಾಸ್ಯ ಪ್ರಕೃತಿಯ ಚಿಹ್ನವೇನೋ. ತಿರುಪತಿ, ಗೋಕರ್ಣ ಎರಡೂ ನಮಗೆ ಅತಿ ಮಹತ್ವದ ಯಾತ್ರಾಸ್ಥಳಗಳು. ತಿರುಪತಿ, ಗೋಕರ್ಣ ಕ್ಷೌರ ಅಥವಾ ಹಜಾಮತಿ ಎಂಬ ಪದಗಳು ಬಂದದ್ದು ನೋಡಿ. ಅರ್ಧಮರ್ಧ ಕೆಲಸ ಮಾಡುವುದಕ್ಕೆ ಇವು ವ್ಯಂಗ್ಯೋಕ್ತಿಗಳು. ಅವುಗಳ ಹಿಂದಿರುವುದು ಒಂದು ಧಾರ್ಮಿಕ-ಸಾಂಸ್ಕೃತಿಕ ಪರಂಪರೆ. ಈ ಎರಡೂ ಕ್ಷೇತ್ರಗಳಲ್ಲಿ ಯಾತ್ರಿಕರು ವೇಣೀದಾನ (ಕೂದಲು ಬೋಳಿಸಿಕೊಳ್ಳುವುದು) ವಿಧಿ. ಅದನ್ನು ಜೀವನೋಪಾಯ ಮಾಡಿಕೊಂಡ ಕ್ಷೌರಿಕರು ಅಲ್ಲಿ ಕ್ಷೇತ್ರವಾಸಿಗಳಾಗಿದ್ದಾರೆ. ಯಾತ್ರಿಕರ ಗದ್ದಲ ಇರುವಾಗ ಈ ಕ್ಷೌರಿಕರು ಗಿರಾಕಿಗಳಿಗೆ ಅವಸರದಲ್ಲಿ ಅರ್ಧಮರ್ಧ ತಲೆಬೋಳಿಸಿಡುತ್ತಿದ್ದರಂತೆ. ಒಬ್ಬ ಕ್ಷೌರಿಕ ನೀವು ತಲೆಯನ್ನು ಅರ್ಧ ಬೋಳಿಸಿಟ್ಟರೆ ಬೇರೆ ಕ್ಷೌರಿಕ ಆ ಕೆಲಸ ಪೂರೈಸುವುದಿಲ್ಲ. ಅದು ವೃತ್ತಿ ಧರ್ಮ! ಅನೇಕರಿಗೆ ಅರ್ಧರ್ಧ ಕ್ಷೌರ ಮಾಡಿಟ್ಟು ಬೇರೆಯವರ ಕಡೆ ಹೋಗದಂತೆ ಮಾಡಿ ಆ ಮೇಲೆ ಪುರಸೊತ್ತಿನಲ್ಲಿ ಒಬ್ಬೊಬ್ಬರದೇ ಕೆಲಸ ಮುಗಿಯಿಸುವ ಉಪಾಯ ಅವರು ಮಾಡುವುದರಿಂದ ಅರ್ಧ ಕೆಲಸ ಮಾಡಿ ಸಿಕ್ಕಿಸಿ ಹಾಕುವುದಕ್ಕೆ ಈ ನುಡಿಗಟ್ಟುಗಳು ಬಂದವು. ಕಾಲಾಂತರದಲ್ಲಿ ಕ್ಷೌರ ಶಬ್ದ ಬಿಟ್ಟು ನನಗೆ ಗೋಕರ್ಣ ಮಾಡಿಟ್ಟ ಅಂದರೂ ಸಾಕು ಎಂದಾಯಿತು. ತಿರುಪತಿಗೆ ಇನ್ನೊಂದು ಬಿರುದೂ ಇದೆ. ತಿರುಪತಿನಾಮ ಅಂದರೆ ದಗಾ! ತಿರುಪತಿಯಲ್ಲಿ ಅವರ ಪಾಲಿಗಿಂತ ಜಾಸ್ತಿಯೇ ತ್ರಿನಾಮಧಾರಿ ಆಷಾಢಭೂತಿ ವಂಚಕರು ಯಾತ್ರಿಕರನ್ನು ಸುಲಿಗೆ ಮಾಡಲು ಹೊಂಚುಹಾಕುತ್ತಿರುವುದರಿಂದ ಈ ನುಡಿಕಟ್ಟು ಹುಟ್ಟಿರಬೇಕು. ತಿರುಪತಿ ದೇವರ ನಾಮ ರೋಮನ್ ಅಂಕೆ III ರಂತಿರುವುದರಿಂದ ನೂರಾ ಹನ್ನೊಂದು ಆಯಿತು ಅಂದರೂ ದಗಾ ಆಯಿತು ಎಂದು ಅರ್ಥ ಬರುವಂತಾಗಿದೆ.

—ಪಾವೆಂ.

## ಗಾಂಧೀಜಿಯ ಪ್ರಿಯ ಶಿಷ್ಯೆ

# ಮೀರಾಬೇನ್

ಪಿ. ಎಸ್. ಶ್ರೀಧರಮೂರ್ತಿ

ಜುಲೈ ೨೦ ರಂದು ಗಾಂಧೀಜಿಯ ಬ್ರಿಟಿಶ್ ಶಿಷ್ಯೆ ಮೀರಾಬೇನ್ ತಮ್ಮ ತೊಂಭತ್ತನೆ ವಯಸ್ಸಿನಲ್ಲಿ ಆಸ್ಟ್ರಿಯದ ವಿಯೆನ್ನಾ ನಗರದ ಬಳಿಯ ಹಳ್ಳಿ ವಿಲ್ಲೆನ್ಯೂವ್ ಎಂಬಲ್ಲಿ ನಿಧನರಾದ ಸುದ್ದಿ ಬಂದಾಗ ಈಕೆ ತನ್ನ ಜೀವನದ ಸಂಜೆಯನ್ನು ಕಳೆಯಲು ಆ ಸ್ಥಳವನ್ನೇಕೆ ಆರಿಸಿಕೊಂಡರೆಂದು ಅನೇಕರ ಪ್ರಶ್ನೆ.

ಯಾವ ಋಷಿಸದೃಶ ಫ್ರೆಂಚ್ ಚಿಂತಕ ರೋಮೇನ್ ರೋಲಾಂರ ಸಂಪರ್ಕದಿಂದ ಮೀರಾಗೆ ಗಾಂಧೀಜಿ ಬಗ್ಗೆ ಸ್ಫೂರ್ತಿ ಬಂದಿತ್ತೋ, ಆ ರೋಲಾಂ ವಾಸಿಸುತ್ತಿದ್ದುದು ಈ ಸ್ಥಳದಲ್ಲಿ.

ಗಾಂಧೀಜಿ ಮತ್ತು ಅವರ ತತ್ವ ಆದರ್ಶಗಳಿಗೆ ತನ್ನನ್ನು ಅರ್ಪಿಸಿಕೊಳ್ಳಬೇಕೆಂಬ ಅಂತಿಮ ತೀರ್ಮಾನಕೈಗೊಂಡು ತಂದೆ ತಾಯಿ ಅಕ್ಕಂದಿರಿಗೆ ವಿದಾಯ ಹೇಳಿದ ನಂತರ ಭಾರತಕ್ಕೆ ಬರುವ ಮಾರ್ಗದಲ್ಲಿ ರೋಲಾಂರಿಗೆ ಕಡೆಯ ಬಾರಿ ವಿದಾಯ ಹೇಳಿದ್ದು ಈ ಸ್ಥಳದಲ್ಲಿ. ರೋಲಾಂ ತಮ್ಮ ತಂಗಿಯ ಜತೆ ತಮ್ಮ ಮನೆಯ ಮೆಟ್ಟಿಲ ಬಳಿ ನಿಂತು ಆಕೆಯನ್ನು ಬೀಳ್ಕೊಡುತ್ತ ಹೇಳಿದ್ದ ಕೊನೆಯ ಮಾತುಗಳೆಂದರೆ, "ನೀನು ಬಹಳ ಅದೃಷ್ಟವಂತೆ!" ಈ ಮಾತು ಮತ್ತು ದೃಶ್ಯ ಮೀರಾ ಸ್ಮೃತಿಪಟಲದಲ್ಲಿ ಸ್ಥಿರವಾಗಿ ನಿಂತಿತು.

ಚಿಕ್ಕಂದಿನಲ್ಲಿ ಮೀರಾ ಜರ್ಮನ್ ಸಂಗೀತದ ಬಗ್ಗೆ ಬೆಳೆಸಿಕೊಂಡುಬಂದ ಅಗಾಧ ಪ್ರೇಮ ಈಕೆಯನ್ನು ವಿವಿಧ ರಾಗಗಳ ಸೃಷ್ಟಿಕರ್ತನಾದ ಬೀಥೋವೆನ್‌ನ ಆರಾಧಕಳನ್ನಾಗಿಸಿತ್ತು. ಅವನ ಸಮಾಧಿ ಇರುವುದೂ ಈ ಸ್ಥಳದಲ್ಲೇ. ಗಾಂಧೀಜಿಯ ಪ್ರಭಾವಕ್ಕೊಳಗಾಗುವ ಮುನ್ನ ರೋಲಾಂ ಅವರನ್ನು ಕಾಣಲೆಂದು ಮೀರಾ ಪ್ಯಾರಿಸ್ಸಿಗೆ ಬಂದಿದ್ದುದು ಬೀಥೋವೆನ್ನನ ಬಗ್ಗೆ ಹೆಚ್ಚಾಗಿ ತಿಳಿದುಕೊಳ್ಳಲೆಂದೇ. ಮುಂದೆ ಈಕೆಯ ಜೀವನವನ್ನು ಬದಲಿಸಿದ ಗಾಂಧೀ ಕುರಿತ ಪುಸ್ತಕವನ್ನು ರೋಲಾಂ ಆಗಿನ್ನೂ ಬರೆಯುತ್ತಿದ್ದರು. ಆಗಲೇ ರೋಲಾಂ ಗಾಂಧೀಜಿಯ ಪ್ರಸ್ತಾಪವೆತ್ತಿದರಾದರೂ ಈಕೆಯ ಮೇಲೆ ಆಗ ಏನೇನೂ ಪರಿಣಾಮವಾಗಲಿಲ್ಲ. ಅಲ್ಲಿಂದ ಮುಂದೆ ಆಕೆ ವಿಲ್ಲೆನ್ಯೂವಾಕ್ಕೆ ಹೊರಟದ್ದಾದರೂ ಬೀಥೋವೆನ್ನನ ಸಮಾಧಿಯ ಮುಂದೆ ನಿಂತು ಗೌರವ ಸಲ್ಲಿಸಲೆಂದೇ. ಆ ಸಂದರ್ಭದ ನೆನಪಿಗಾಗಿ ಅಲ್ಲಿನ ಬಳ್ಳಿಯೊಂದರಿಂದ ಬಿಡಿಸಿಕೊಂಡು ತಂದ ಕೆಲವು ಎಲೆಗಳು ಆಕೆಯ ಬಳಿ ದೀರ್ಘಕಾಲ ಇದ್ದವು.

ತಮ್ಮ ಆರೋಗ್ಯ ಸುಧಾರಿಸಿಕೊಳ್ಳಲು ೧೯೨೭ರ ಬೇಸಗೆಯಲ್ಲಿ ಗಾಂಧೀಜಿ ನಂದೀ ಬೆಟ್ಟಕ್ಕೆ ಬಂದಿದ್ದಾಗ ಆಶ್ರಮದ ನಿರ್ವಹಣೆಯನ್ನು ಮೀರಾಗೆ ವಹಿಸಿದ್ದರು. ಆ ದಿನಗಳಲ್ಲಿ ರಕ್ತದ ಒತ್ತಡದಿಂದ ಗಾಂಧೀಜಿ ಬಳಲುತ್ತಿದ್ದರು. ರೋಲಾಂ ಬರೆದಿದ್ದ ಬೀಥೋವೆನ್ನನ ಜೀವನ ಚರಿತ್ರೆಯನ್ನು ಮೀರಾ ಆಗ ಗಾಂಧೀಜಿಗೆ ಕಳುಹಿಸಿದ್ದರು. ಅದಕ್ಕುತ್ತರವಾಗಿ ೧೯೨೭ರ ಏಪ್ರಿಲ್ ೧೩ನೇ ದಿನಾಂಕ ಗಾಂಧೀಜಿ ಬರೆದ ಪತ್ರ ಸ್ವಾರಸ್ಯಕರವಾಗಿದೆ: "ಬೀಥೋವೆನ್ನನ ಉಲ್ಲೇಖಗಳು ...ಅದೊಂದು ಅತ್ಯುತ್ತಮ ಆಧ್ಯಾತ್ಮಿಕ ಸಾಹಿತ್ಯ. ನೀನು ಸಂಗೀತವನ್ನು ಮರೆಯುವುದಾಗಲಿ ಅದರಲ್ಲಿ ನಿನಗಿರುವ ಅಭಿರುಚಿಯನ್ನು ಕಳೆದುಕೊಳ್ಳುವುದಾಗಲಿ ನನಗೆ ಸಹಿಸದು. ನಿನ್ನ ಯಾವ ಅಭಿರುಚಿಯ ಜೊತೆಗೆ ನಿನ್ನನ್ನು ನನ್ನ ಬಳಿ ಬರುವಂತೆ ಮಾಡಿತೋ ಅದನ್ನು ಮರೆಯುವುದು ಕ್ರೂರವಾದೀತು."

೧೯೪೨ರ ಕ್ವಿಟ್ ಇಂಡಿಯಾ ಚಳುವಳಿ ಕಾಲದಲ್ಲಿ ಮೀರಾ ಗಾಂಧೀಜಿಯೊಡನೆ ಆಗಾಖಾನ್ ಅರಮನೆಯಲ್ಲಿ ಬಂದಿಯಾಗಿದ್ದರು. ಗಾಂಧೀಜಿಯ ಕಾರ್ಯದರ್ಶಿ ಮಹದೇವ ದೇಸಾಯಿ ಮತ್ತು ಕಸ್ತೂರಬಾ ನಿಧನರಾದುದು ಅಲ್ಲೇ. ಕೆಲದಿನ ಗಾಂಧೀಜಿಗೆ ವೃತ್ತಪತ್ರಿಕೆಗಳೂ ಬರುತ್ತಿರಲಿಲ್ಲ. ಆ ದಿನಗಳಲ್ಲಿ ಗಾಂಧೀಜಿಗೆ ಪ್ರಿಯವಾದ 'ಲೀಡ್ ಕೈಂಡ್ಲಿ ಲೈಟ್' ಎಂಬ ಕ್ರಿಶ್ಚಿಯನ್ ಗೀತೆಯನ್ನು ಮೀರಾ ಮತ್ತಿತರರು ಹಾಡುತ್ತಿದ್ದರು. ಕೆಲ ದಿನಗಳ ನಂತರ ಗಾಂಧೀಜಿಯೇ ಆ ಗೀತೆಯ ಬದಲು, "ವ್ಹೆನ್ ಐ ಸರ್ವೇ ದಿ ವಂಡರಸ್ ಕ್ರಾಸ್" ಹಾಡಿರೆಂದಾಗ ಮೀರಾ ಅದನ್ನು ಹಾಡಿದರು. ಕ್ರಮೇಣ ಎಲ್ಲ ವಿಶೇಷ ಸಂದರ್ಭಗಳಿಗೂ ಈ ಗೀತೆ ಹಾಡಬೇಕಾಗುತ್ತಿತ್ತು. ಯಾವ ಕೃಷ್ಣಭಕ್ತೆ ಮೀರಾದೇವಿಯ ಹೆಸರನ್ನು ಈ ಬ್ರಿಟಿಷ್ ಶಿಷ್ಯೆಗೆ ಗಾಂಧೀಜಿ ಇಟ್ಟರೊ ಆ ಮೀರಾದೇವಿಗೂ ಈ ಮೀರಾಬೇನ್‌ರಿಗೂ ಹೋಲಿಕೆ ಸರಿಯಾದುದೇ ಆಗಿತ್ತು. ಅಂಕಿತ ನಾಮವೆಂದಿಟ್ಟ ಮೀರಾಬೇನ್ ಎಂಬ ಹೆಸರು ಅನ್ವರ್ಥವೂ ಆಯಿತು.

ತಂದೆ ತಾಯಿಯರು ಈಕೆಗೆ ಇಟ್ಟ ಹೆಸರು ಮಿಸ್ ಮೆಡಲೀನ್ ಸ್ಲೇಡ್. ಗಾಂಧೀಜಿಯ ರೀತಿ ನೀತಿ ಭಾವನೆ ವಿಚಾರಗಳಿಗೂ ಸ್ಲೇಡ್ ತಾರುಣ್ಯದಲ್ಲಿ ಬೆಳೆದ ಪರಿಸರಕ್ಕೂ ಅಜ-ಗಜಾಂತರ. ಸ್ಲೇಡಳ ತಂದೆ ಬ್ರಿಟಿಶ್ ನೌಕಾಪಡೆಯ ಅಡ್ಮಿರಲ್. ತಾತ ಸೇನೆಯ ಜನರಲ್. ೧೨ನೆಯ ವಯಸ್ಸಿನಲ್ಲೇ ಈಕೆಗೆ ತಾತನಿಂದ ಕುದುರೆ ಸವಾರಿಯಲ್ಲಿ ತರಬೇತಿ. ಮನೆಯಲ್ಲಿ ಎಲ್ಲ ಕೆಲಸಕ್ಕೂ ಗೌರ್ನೆಸ್ (ಪರಿಚಾರಿಕೆ)ಗಳು. ಶ್ರೀಮಂತಿಕೆ ಹಾಗೂ ಪ್ರತಿಷ್ಠಿತ ತಂದೆ ತಾಯಿಗಳಿಗೆ ಇದ್ದ ಎರಡೇ ಹೆಣ್ಣುಮಕ್ಕಳಲ್ಲಿ ಈಕೆ ಕಿರಿಯಳು ಈಕೆ. ಎಡ್ವರ್ಡ್ ಚಕ್ರವರ್ತಿಯ ಗೌರ-ವಾರ್ಥ ದೆಹಲಿಯಲ್ಲಿ ಏರ್ಪಡಿಸಿದ್ದ ದರ್ಬಾರಿನ ಸಂದರ್ಭದಲ್ಲಿ ಅಕ್ಕ ರ್ರೋಣಾಳಿಗೆ ಆಗಿನ ಇಂಡಿಯನ್ ಸಿವಿಲ್ ಸರ್ವಿಸ್ಸಿನ ಉಚ್ಚ ಅಧಿಕಾರಿಯೊಂದಿಗೆ ವಿವಾಹ ನಿಶ್ಚಯವಾಯಿತು. ತಂದೆಯ ಮಧ್ಯಸ್ಥಿಕೆಯಿಂದ ಆಗಿನ ಬೊಂಬಾಯಿ ಗೌರ್ನರ್‌ನ ಮದುವೆ ಏರ್ಪಾಟಾಗಿತ್ತು. ಆ ಸಮಾರಂಭದಲ್ಲಿ ಸ್ಲೇಡ್ ಓಡಾಡಿದ್ದಳು. ಲಂಡನ್ ಅರಮನೆಯ ಔತಣ ಕೂಟಗಳು, ಸಂಗೀತ ನೃತ್ಯ ಕೂಟಗಳು ಚಿಕ್ಕಂದಿನಲ್ಲಿ ಈಕೆಗೆ ಸರ್ವೇಸಾಮಾನ್ಯ. ಪಾಠ ಪ್ರವಚನ ಹೇಳಿ ಕೊಡಲು ಮನೆಯಲ್ಲೇ ಶಿಕ್ಷಕರ ವ್ಯವಸ್ಥೆ. ಸಂಗೀತದಲ್ಲಿ ವಿಶೇಷ ಅಭಿರುಚಿಯಿದ್ದ ಈಕೆಗಾಗಿಯೇ ಮನೆಯಲ್ಲೊಂದು ಪಿಯಾನೋ. ಜೊತೆಗೆ ಸುಲಭವಾಗಿ ಇಂಗದ ಜ್ಞಾನದಾಹ. ಚಿತ್ರಕಲೆಯಲ್ಲಿ ಪರಿಣತಿ ಪಡೆವ ಆತುರ: ಈ ಮನಃಸ್ಥಿತಿಯಲ್ಲಿದ್ದ ಸ್ಲೇಡಳಿಗೆ ಮದುವೆಯ ಯೋಜನೆ ಎಲ್ಲಿ? ಎಂಥ ಇಚ್ಛೆ ವ್ಯಕ್ತಪಡಿಸಿದರೂ ನಡೆಸಿಕೊಡುವ ಶಕ್ತಿಯುಳ್ಳ ತಂದೆ. ಮೇಲಾಗಿ ಸ್ವಾತಂತ್ರ್ಯಪ್ರಿಯತೆ. ಈಕೆಯೊಡನೆ ಪಿಯಾನೋ ನುಡಿಸಲೆಂದೇ ಒಮ್ಮೆ ಜರ್ಮನಿಯ ಖ್ಯಾತ ಪಿಯಾನೋ ವಾದ್ಯಗಾರ ಲ್ಯಾಮೊಂಡನ್ನು ಕರೆಸಲಾಗಿತ್ತು. ಬ್ರಿಟಿಶ್ ಮ್ಯೂಸಿಯಂನಲ್ಲಿ ಸಿಕ್ಕಿದ ಎಲ್ಲ ಮಹತ್ವದ ಗ್ರಂಥಗಳನ್ನು ಸ್ಲೇಡ್ ಓದಿದ್ದಳು. ಭಗವದ್ಗೀತೆ ಮತ್ತು ಋಗ್ವೇದದ ಬಹು ಭಾಗವನ್ನು ಈಕೆ ಓದಿದ್ದು ಫ್ರೆಂಚ್ ಭಾಷೆಯಲ್ಲಿ.

ಈಕೆಯಂತೆಯೇ ರೋಮೇನ್ ರೋಲಾಂ ಕೂಡ ಬೀಥೋವೆನ್ನನ ಅಭಿಮಾನಿ. ರೋಲಾಂ ಬರೆದುದನ್ನೆಲ್ಲ ಓದುವ ಹವ್ಯಾಸ ಸ್ಲೇಡಳದು. ಪ್ಯಾರಿಸ್ಸಿನ ಪುಸ್ತಕದಂಗಡಿಯೊಂದರ ಷೋಕೇ-ಸಿನ ಪೂರ್ತ ಕಿತ್ತಲೆ ಬಣ್ಣದದ ಪುಸ್ತಕ ಜೋಡಿಸಿದ್ದುದು ಈಕೆಯ ಕಣ್ಣಿಗೆ ಅದು ಬಿತ್ತು. ಗಾಂಧೀಜಿ ಬಗ್ಗೆ ರೋಲಾಂ ಅವರು ಫ್ರೆಂಚ್ ಭಾಷೆಯಲ್ಲಿ ಬರೆದಿದ್ದ ಪುಸ್ತಕ. ಅದನ್ನು ಕೊಂಡು ಒಂದೇ ದಿನದಲ್ಲಿ ಓದಿ ಮುಗಿಸಿದ್ದಾಯಿತು. ನುಡಿದಂತೆ ನಡೆಯುತ್ತಿದ್ದ ಬೋಧಿಸಿದ್ದನ್ನೇ ಆಚರಿಸುತ್ತಿದ್ದ, ಆಚರಿಸಲಾಗದ್ದನ್ನು ಬೋಧಿಸಲಾರೆ ಎಂದಿದ್ದ, ಸತ್ಯ ಅಹಿಂಸೆ ನಿರ್ಭಯ, ಈ ಮೂರೇ ಮಾತಿನಲ್ಲಿ ತನ್ನ ಎಲ್ಲ ವಿಚಾರಧಾರೆಯನ್ನು ತುಂಬಿದ್ದ ಗಾಂಧೀಜಿಯ ವ್ಯಕ್ತಿ-ತ್ವಕ್ಕೆ ಸ್ಲೇಡಳ ಸುಸಂಸ್ಕೃತ ಚೇತನ ಮಾರುಹೋದುದು ಆಶ್ಚರ್ಯವಲ್ಲ. ಕೂಡಲೆ ಭಾರತದ ಅಂದಿನ ಸ್ಥಿತಿಗತಿಗಳನ್ನೂ ಗಾಂಧೀಜಿಯ

"ಸ್ಪಿರಿಟ್ಸ್ ಪಿಲ್‌ಗ್ರಿಮೇಜ್" – ಚೇತನದ ತೀರ್ಥಯಾತ್ರೆ – ಇದು ೧೯೫೮ರಲ್ಲಿ ವಿಲ್ಲೆನ್ಯೂವಾಕ್ಕೆ ಹಿಂತಿರುಗಿದ ನಂತರ ಮೀರಾ ಬರೆದ ಆತ್ಮಕಥೆಯ ಹೆಸರು. ೨೨ ವರ್ಷ ಗಾಂಧೀಜಿಯ ಒಡನಾಡಿಯಾಗಿ ಬಾಳಿದ ಅಪೂರ್ವ ದಿನಗಳು ಸ್ವಾರಸ್ಯವಾಗಿ ಚಿತ್ರಿತವಾಗಿವೆ. ಸೀರೆ ಕೊಳ್ಳುವ ಬಗ್ಗೆ ಈಕೆ ತೋರಿದ ಆತುರ ಗಾಂಧೀಜಿಗೆ ಸರಿದೋರಲಿಲ್ಲ. ಆದರೆ ಸೀರೆ ಆಕೆಗೆ ಒಗ್ಗಲಿಲ್ಲ. ನಂತರ ಮಧ್ಯ ಪ್ರದೇಶದ ಸ್ತ್ರೀಯರು ತೊಡುವ ಘಾಗ್ರಾ ಎಂಬ ನಿಲುವಂಗಿ ಈಕೆಯ ಉಡುಪಾಯಿತು. ಬ್ರಹ್ಮಚರ್ಯೆ ಮತ್ತು ತಲೆಗೂದಲು ಕತ್ತರಿಸುವ ಬಗ್ಗೆ ಮೀರಾ ತೆಗೆದುಕೊಂಡ ನಿರ್ಧಾರದ ಕುರಿತು ಗಾಂಧೀಜಿ ಸಿಧಾನಿಸಿ ಆಶ್ರಮದ ಇತರ ಸ್ತ್ರೀಯರೊಂದಿಗೆ ಸಮಾಲೋಚಿಸಬೇಕೆಂದರು. ಬ್ರಹ್ಮಚರ್ಯದ ಬಗ್ಗೆ ತನ್ನ ವಿಚಾರಗಳೇನೆಂದು ಯೋಚಿಸಿ ಲಿಖಿತ ಹೇಳಿಕೆ ಪಡೆದುಕೊಂಡರು. ಅದನ್ನೋದಿ ಮೆಚ್ಚಿಕೊಂಡು ಯಾವ ಪ್ರತಿಜ್ಞೆಯ ಅಗತ್ಯವೂ ಇಲ್ಲವೆಂದು ತಿಳಿದು ಮೀರಾರನ್ನು ಕರೆದು ಕುಳ್ಳಿರಿಸಿಕೊಂಡು ಸ್ವಹಸ್ತದಿಂದಲೇ ತಲೆಗೂದಲು ಕತ್ತರಿಸಿದರು. ಕೂಡಲೇ ಮೀರಾ ಗಾಂಧೀಜಿಯ ಪಾದಗಳನ್ನು ಮುಟ್ಟಿದಾಗ ಪ್ರೀತಿಯಿಂದ ಬೆನ್ನಿನ ಮೇಲೆ ಒಂದು ಸಣ್ಣ ಏಟು ಕೊಟ್ಟು ಮುಂದಿದ್ದ ಕೆಲಸಗಳಲ್ಲಿ ನಿರತರಾದರು.

ರೋಲಾಂ ಹೇಳಿದಂತೆ ಗಾಂಧೀಜಿಯ ವಿಶ್ವಾಸ – ಸಾಮೀಪ್ಯಗಳನ್ನು ಸಿದ್ಧಪಡಿಸಿಕೊಂಡ ಮೀರಾ ಹೇಗೆ ಅದೃಷ್ಟವಂತರೋ. ಮೀರಾರಂಥ ಮೇಧಾವಿ, ಸುಶಿಕ್ಷಿತ, ಹಾಗೂ ನಿಷ್ಠಾವಂತ ಶಿಷ್ಯೆಯನ್ನು ಪಡೆದ ಗಾಂಧೀಜಿಯೂ ಅದೃಷ್ಟವಂತರೇ, ಗಾಂಧೀಜಿಯ ಪತ್ರವ್ಯವಹಾರ, ಅತಿಥಿಗಳ ನಿರ್ವಹಣೆ, ಪ್ರವಾಸಗಳು, ಜನಸಂದಣಿ ನಿಭಾಯಿಸುವುದು, ಹೀಗೆ ಮೀರಾ ಪಾಲಿಗೆ ಹಲ ಹತ್ತು ಜವಾಬ್ದಾರಿಗಳು ಬಂದವು. ಮೀರಾ ಬೇನರ ಕಾರ್ಯ ವಿಚಕ್ಷಣತೆ ಮತ್ತು ತತ್ವನಿಷ್ಠೆ ಎಲ್ಲಿಂದಲೂ ಅವರಿಗೆ ಗೌರವ ತಂದಿತು. ಈ ಎಲ್ಲ ಕೆಲಸ ಕಾರ್ಯಗಳ ಮಧ್ಯೆ ಗಾಂಧೀ

ಆದರ್ಶಗಳನ್ನಾಧರಿಸಿದ ಪಶುಸಂಗೋಪನ ಕೇಂದ್ರವೊಂದನ್ನು ಹಿಮಾಲಯದ ತಪ್ಪಲಿನ ಸುಂದರ ತಾಣದಲ್ಲಿ ಮೀರಾ ಸಂಘಟಿಸಿದ್ದರು. ೧೯೪೫ರಲ್ಲಿ ಮೀರಾ ಅಲ್ಲಿಗೆ ಹೋಗಿದ್ದಾಗ ಒಮ್ಮೆ ಗಾಂಧೀಜಿ ಪತ್ರದಲ್ಲಿ, "ನಾನು ಕಟ್ಟ ಕಡೆಗೆ ನಿನ್ನ ಬಳಿ ಬಂದು ವಾಸ ಮಾಡಬೇಕೆಂಬುದೇ ದೈವೇಚ್ಛೆ ಇದೆಯೇನೋ!" ಎಂದು ಬರೆದಿದ್ದರೆಂದರೆ ಅವರಿಬ್ಬರಲ್ಲಿ ಎಷ್ಟು ತಾದಾತ್ಮ್ಯ ಇತ್ತೆಂಬುದು ತಿಳಿಯುತ್ತದೆ.

೧೯೪೭ರಲ್ಲಿ ಒಂದು ದಿನ ಇದ್ದಕ್ಕಿದ್ದಂತೆಯೇ ಮೀರಾಳನ್ನು ಕರೆದು ಟೈಪು ಮಾಡಿದ್ದ ಎರಡು ಹಾಳೆಗಳನ್ನು ಕೈಗಿತ್ತು, ಮುಂದಿನ ರೈಲಿನಲ್ಲಿ ಅಲಹಾಬಾದಿಗೆ ಹೊರಡಬೇಕೆಂದರು. ಗಾಂಧೀಜಿ ಯಾರಾದರೂ ಅನುಮಾನ ವ್ಯಕ್ತ ಪಡಿಸಿದರೆ ಅವರಿಗೆ ವಿವರಿಸಿ ಹೇಳುವ ಜವಾಬ್ದಾರಿಯನ್ನೂ



"ಈಗ ನಮ್ಮಿಬ್ಬರ ಪ್ರೇಮ ಬಹಳ ಸುಧಾರಿಸಿದೆ ಮೊದಲು ಚಪ್ಪಲಿಯಿಂದ ಹೊಡೀತಿದ್ಲು, ಈಗ ಬರಿಗೈಯಿಂದ..."

ಮೀರಾಳ ಮೇಲೆಯೇ ಹೊರಿಸಿದರು. ಸೇವಾ ಗ್ರಾಮದಿಂದ ಒಂಟಿಯಾಗಿ ಹೊರಟು ಹಾಳೆಗಳನ್ನು ಓದಿಕೊಂಡರು ಮೀರಾ. ಮರುದಿನ ಎಲ್ಲ ನಾಯಕರೂ ಸೇರಲಿದ್ದ ಸಭೆಯಲ್ಲಿ ಆ ಹಾಳೆಗಳನ್ನು ಓದಿ ಹೇಳಿದರು. ಅದೇ ಮುಂದೆ ಕ್ವಿಟ್ ಇಂಡಿಯಾ ನಿರ್ಣಯ ಎಂದು ಪ್ರಸಿದ್ಧವಾಯಿತು. ಸಂದೇಹಗಳನ್ನು ವ್ಯಕ್ತಪಡಿಸಿದವರಿಗೆ ಮೀರಾ ಸಮಂಜಸವಾಗಿ ಹೇಳಲು ಸಮರ್ಥರಾಗಿದ್ದರು.

ಭಿನ್ನಾಭಿಪ್ರಾಯ ಹೊಂದಿದ್ದ ರಾಜಾಜಿಯೊಡನೆ ಮದರಾಸಿಗೆ ಹೋಗಿ ತಮ್ಮ ಪರ ವಾದಿಸಬೇಕೆಂದು ಮೀರಾರನ್ನು ಗಾಂಧೀಜಿ ಕೇಳಿದ್ದರು. ಕೆಲಸ ಕಾರ್ಯಗಳ ಒತ್ತಡದಿಂದ ಮೀರಾ ಬಿಹಾರಕ್ಕೆ ಹೋಗಬೇಕಾಯಿತು. ಅನಂತರ ಸರ್ಕಾರದ ಮುಖ್ಯ ಕಾರ್ಯದರ್ಶಿ ವುಡ್ ಮತ್ತು ವೈಸ್‌ರಾಯ್ ಕೌನ್ಸಿಲ್ಲಿನ ಸದಸ್ಯ ಮ್ಯಾನ್ಸ್‌ಫೀಲ್ಡ್‌ರೊಡನೆ ಗಾಂಧೀಜಿ ಪರ ಮೀರಾ ಚರ್ಚಿಸಿದರು. ಚರ್ಚೆಯನ್ನು ಈಕೆ ನಡೆಸಿದ ರೀತಿಯ ಬಗ್ಗೆ ಗಾಂಧೀಜಿ ಬಹು ಸಂತೋಷಪಟ್ಟರು. ಬಹು ಹಿಂದೆಯೇ ಮೀರಾರ ಸಾಮರ್ಥ್ಯದ ಬಗ್ಗೆ ವಿಶ್ವಾಸ ಹುಟ್ಟಿತ್ತು. ೧೯೩೧ರ ದುಂಡು ಮೇಜಿನ ಪರಿಷತ್ತು ಮುಗಿದ ನಂತರ ಮೀರಾರನ್ನು ಅಮೇರಿಕದಲ್ಲಿ ಭಾರತದ ಚಳುವಳಿ ಬಗ್ಗೆ ಸದ್ಭಾವನೆ ಮೂಡಿಸುವ ದೃಷ್ಟಿಯಿಂದ ಅಲ್ಲಿಗೆ ಕಳುಹಿಸಿದ್ದರು. ಅಲ್ಲಿಯ ಹಲವಾರು ಸಭೆಗಳಲ್ಲಿ ಮೀರಾ ಭಾರತದ ಬಗ್ಗೆ ಭಾಷಣ ಮಾಡಿದ್ದರು.

"ನಿನ್ನ ಎಲ್ಲಾ ಪ್ರೀತಿ ವಾತ್ಸಲ್ಯವನ್ನೂ ನಾನೊಬ್ಬನೇ ಕಬಳಿಸಿಬಿಟ್ಟಿರುವೆನೋ ಎಂಬ ಶಂಕೆ ನನ್ನನ್ನು ಬಾಧಿಸುತ್ತಿದೆ," ಎಂದು ಗಾಂಧೀಜಿ ಪತ್ರ ಬರೆದಿದ್ದರು. ೧೯೩೯ರಲ್ಲಿ ಸೇವಾಗ್ರಾಮದಲ್ಲಿದ್ದಾಗ ಮೀರಾ ಟೈಫಾಯಿಡ್ ಜ್ವರದಿಂದ ಬಳಲಿದ್ದರು. ಆಗ ಗಾಂಧೀಜಿ ಸ್ವತಃ ಶುಶ್ರೂಷೆ ಮಾಡಿದರು. ಮೀರಾ ಆತಂಕ ವ್ಯಕ್ತಪಡಿಸಿದಾಗ ರೋಗಿಗಳ ಶುಶ್ರೂಷೆಯಲ್ಲೇ ತಮಗೆ ವಿಶೇಷ ತೃಪ್ತಿ ಎಂದುಬಿಟ್ಟರು ಗಾಂಧೀಜಿ.

ತಂದೆ, ತಾಯಿ, ನಂತರ ರೋಲಾ ತೀರಿಕೊಂಡಾಗ ಹೋಗಿ ಬರಲು ಗಾಂಧೀಜಿಯೇ ಹೇಳಿದರೂ ಮೀರಾ ಹೋಗಲಿಲ್ಲ. ಗಾಂಧೀಜಿ ನಿಧನರಾದಾಗ ಮೀರಾ ಹೃಷಿಕೇಶದ ಬಳಿ ತಮ್ಮ ಪಶುಸಂಗೋಪನ ಕೇಂದ್ರದಲ್ಲಿದ್ದರು. ಆಗಲೂ ತಮ್ಮನ್ನು ದೆಹಲಿಗೆ ಕರೆ ತರುವ ಆತುರದ ಪ್ರಯತ್ನಗಳಿಗೆ ಮೀರಾ ಸಮ್ಮತಿಸಲಿಲ್ಲ. ನೋವನ್ನು ನುಂಗಿಕೊಂಡು, ಅಂತಿಮ ದರ್ಶನ ಮುಂತಾದ ವಿಧಿಗಳಲ್ಲಿ ನಂಬಿಕೆ ಇಲ್ಲವೆಂದುಬಿಟ್ಟರು.

ಆದರೆ, ನಾಲ್ಕಾರು ದಿನ ಅಧಿಕಾರ ಚಲಾಯಿಸಿ ಮನೆಗೆ ಹೋಗುವವರಿಗೆ ನಿತ್ಯವೂ ಸನ್ಮಾನ ಜರುಗುವ ಈ ದೇಶವಲ್ಲಿ ಎಲ್ಲಾ, ಗಾಂಧೀಯುಗದ ಇಂಥ ಚಿರಸ್ಮರಣೀಯ ಚೇತನ ನಂದಿದ ಸಂದರ್ಭದಲ್ಲಿ ಸಂತಾಪ ಸೂಚಕ ಸಭೆ ನಡೆಯಲೇ ಇಲ್ಲ. ★



## ಆಭಾಸ

ಪ್ರಾಗ್ ಪಟ್ಟಣದಲ್ಲಿ ಒಬ್ಬ ಆದರ್ಶ ಗೃಹಿಣಿ ತನ್ನ ಗಂಡ ತನ್ನೊಡನೆ ಸರಿಯಾಗಿ ನಡೆದುಕೊಳ್ಳುತ್ತಿಲ್ಲವೆಂದು ಬಹಳ ದುಃಖಿತಳಾಗಿದ್ದಳು. ಕೊನೆಗೊಂದು ದಿನ ಬೇಸರಗೊಂಡು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿ ಮೂರನೆಯ ಅಂತಸ್ತಿನ ಮಹಡಿಯಿಂದ ಕೆಳಕ್ಕೆ ಹಾರಿದಳು.

ಆದರೆ ಪಾಪ! ಅದೆ ಸಮಯಕ್ಕೆ ಸರಿಯಾಗಿ ಮನೆಗೆ ಬರುತ್ತಿದ್ದ ಅವಳ ಗಂಡನ ಮೇಲೆಯೆ ಆ ಹೆಣ್ಣು ಜೋರಾಗಿ ಬಿದ್ದುಬಿಟ್ಟಳು. ಇಬ್ಬರಿಗೂ ಗಾಯಗಳಾಗಿ ಆಸ್ಪತ್ರೆ ಸೇರಿದರು. ಕೊನೆಗೆ ಆ ಆದರ್ಶ ಸತಿ ಗಾಯಗಳಿಂದ ವಾಸಿಯಾದಳು, ಅವಳ ಗಂಡ ಮಾತ್ರ ಈ ಲೋಕವನ್ನು ತ್ಯಜಿಸಿದ.

-ಸಂಗ್ರಹ: ಕೆ. ಎಲ್. ರಂಗನಾಥರಾವ್

ಫೆರೆಂಕ್ ಮೊಲ್ನಾರರ
ಹಂಗೇರಿಯನ್ ಕಥೆ




ರೂಪಾಂತರ: **ಕುಂ. ವೀರಭದ್ರಪ್ಪ**

ಹೆಂಗಸರನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಕೆಲವರು ದೇವತೆಗಳಂತೆ ಪ್ರೇಮಿಸುವವರಾದರೆ, ಇನ್ನೂ ಕೆಲವರು ಕೇವಲ ಕಾಮಪಿಶಾಚಿಗಳೇ ಸರಿ. ನೀಚಾತಿನೀಚರಾದ ಅವರು ಲೈಂಗಿಕ ಬದುಕೇ ಸರ್ವ ಶ್ರೇಷ್ಠವೆಂದು ಭಾವಿಸಿ ಬದುಕುತ್ತಾರೆ."

"ಎರಡು ನಮೂನೆಯವರೆಂದರೆ ಬೇರೆ ಬೇರೆಯಾಗಿ ಆ ರೀತಿ ಇರದೇ ಇರಬಹುದು."

"ಇದ್ದೇ ಇರುತ್ತಾರೆ, ನನಗೆ ಸ್ಪಷ್ಟವಾಗಿ ಗೊತ್ತಿದೆ."

"ಸಾಕುಬಿಡೋ. ಮಹಾಜ್ಞಾನಿಯಂತೆ ನನ್ನೆದುರು ಬಡಾಯಿಕೊಚ್ಚಬೇಡ. ನನ್ನ ಗರ್ಲ್‌ಫ್ರೆಂಡ್ ನನ್ನನ್ನು ಪ್ರೇಮಿಸುತ್ತಿಲ್ಲ ಅಂದುಕೊಂಡೆಯೋ ಹೇಗೆ! ಸ್ವರ್ಗದ ಬಾಗಿಲುಗಳೇ ಸರಿ ಅವಳ ಕಣ್ಣುಗಳು. ಅವಳ ಸಾಧಾರಣ ಮಾತುಗಳಲ್ಲೂ ಸಂಗೀತದ ಮಾಧುರ್ಯವಿದೆ. ಪ್ರೇಮದ ಉತ್ಕಟಾವಸ್ಥೆಯಲ್ಲಿ ನಾವಿಬ್ಬರು ಒಂದಾಗಿ ನಮ್ಮಿಬ್ಬರ ಶರೀರಗಳು ಆಳದಿಂದೆದ್ದ ಶಲಾಕಾಗ್ರದ ರೋಮಾಂಚನದೊಡನೆ ಆನಂದದ ತುರೀಯಾವಸ್ಥೆಯನ್ನೇ ತಲುಪುತ್ತವೆ."

"ನಿನ್ನ ಕರ್ಮ, ನಿನ್ನಂಥ ಒಬ್ಬ ಮನುಷ್ಯ ಹೀಗೆ ಮಾತಾಡುವದು ಸರಿಯಲ್ಲ."

"ಏಕೆ?"

"ಹೌದು ಮತ್ತೆ, ನನ್ನ ಗೆಳತಿಯ ಬಗ್ಗೆ ನಾನೇನಾದರೂ ನಿನಗೆ ಹೇಳಿದರೆ ನೀನು ನಂಬು ವುದಿಲ್ಲ. ನೀನು ನಿನ್ನ ಗೆಳತಿ ಇಬ್ಬರೂ ಕೂಡಿ ಮಾಡಿರುವಂಥ ಕ್ಷುದ್ರ ಕೆಲಸಗಳೊಂದನ್ನೂ ನಾವು ಮಾಡಿಲ್ಲ. ನಮ್ಮಿಬ್ಬರ ಮಧ್ಯೆ ಒಂದು ಪವಿತ್ರ ವಾದ ಅಧ್ಯಾತ್ಮಿಕ ಸಂಬಂಧವೇರ್ಪಟ್ಟಿದೆ. ಈ ಸಂಬಂಧ ಬೆಳೆಯುತ್ತಲೇ ಇದೆ. ನನ್ನ ಗೆಳತಿ ಗುಲಾಬಿ ದಳದಂತೆ ಕೋಮಲ ದೇಹದ ಹುಡುಗಿ. ಆಕೆಯ ಮಡಿಲಿನಲ್ಲಿ ತಲೆ ಇಟ್ಟು ಮಲಗಿದರೆ ಅದ್ಭುತವಾದ ಕಿನ್ನರ ಲೋಕಕ್ಕೆ ಹೋದ ಅನು ಭವವಾಗುತ್ತದೆ. ಆ ಅನುಭವವನ್ನು ಕೇವಲ ಮಾತುಗಳಿಂದ ವರ್ಣಿಸಲು ಸಾಧ್ಯವಿಲ್ಲ ಬಿಡು. ನಾವು ಕೂಡ ನಿಮ್ಮಂತೆಯೇ ಅದು ಇದೂ ಸುದ್ದಿ ಮಾತಾಡುತ್ತ ಕಾಮ ಪ್ರಚೋದಕ ಕೆಲಸ ಗಳನ್ನು ಮಾಡುತ್ತ ಸಮಯವನ್ನು ವೃಥಾ ಹಾಳು ಮಾಡುವುದಿಲ್ಲ. ಉನ್ನತವಾದ ವಿಷಯ ಗಳ ಬಗ್ಗೆ ಪರಸ್ಪರ ಚರ್ಚಿಸುವೆವು. ಅಭಿ ಪ್ರಾಯಗಳ ವಿನಿಮಯ ಮಾಡಿಕೊಳ್ಳುತ್ತ ನಾವಿ ಬ್ಬರೂ ಮಾನಸಿಕವಾಗಿ ಬೆಳೆಯುತ್ತೇವೆ."

"ಆ ಕೋಮಲವಾದ ದೇಹ ಕೇವಲ ಅಸ್ಥಿ ಪಂಜರವಲ್ಲದೆ ಮತ್ತೇನೂ ಅಲ್ಲ. ಅಂಥ ಅಸ್ಥಿ ಪಂಜರದ ಜೊತೆಗೆ ಮಾತಾಡದೆ ಮತ್ತೇನು ಮಾಡಲು ಸಾಧ್ಯ ಬಿಡು!"

"ಹೌದು, ಗಟ್ಟಿ ಸ್ನಾಯುಗಳ ತೊಡೆಗಳಿರದ ಹೆಂಗಸರೆಲ್ಲ ನಿನ್ನ ಕಣ್ಣಿಗೆ ಕೇವಲ ಅಸ್ಥಿಪಂಜರ ದಂತೆ ಕಂಡರೆ ಆಶ್ಚರ್ಯವಿಲ್ಲ. ನಿನ್ನವು ಮೊದಲೇ ಕಾಮಾಲೆ ಕಣ್ಣುಗಳು. ಇಂಥ ಒಂದು ಉದಾತ್ತ ಊಹೆ ನಿನಗಷ್ಟೇ ಬರಲು ಸಾಧ್ಯ ನೋಡು! ನನ್ನ ಗೆಳತಿಯ ಜೊತೆಗೆ ಮಾತಾ ಡುವಾಗ ಆಗುವ ಆನಂದ ಅಷ್ಟಿಷ್ಟಲ್ಲ. ಗಂಡ ಸಿನ ಸ್ಪರ್ಶಕ್ಕೆಲ್ಲಿ ತನ್ನ ಸುಕೋಮಲವಾದ ದೇಹ ಬಾಡಿಹೋಗುವುದೋ ಎಂಬ ರೀತಿಯಲ್ಲಿ ನನ್ನ ಗೆಳತಿ ವರ್ತಿಸುತ್ತಿರುತ್ತಾಳೆ, ಇಷ್ಟು ಹತ್ತಿರ ದಲ್ಲಿದ್ದೂ ನಾವಿಬ್ಬರೂ ಒಂಟಿಯಾಗಿ ಕಾಲ ಕ್ಷೇಪ ಮಾಡುತ್ತಿದ್ದೇವೆ ಎಂದಲ್ಲವೆ ನಿನ್ನ ಅನುಮಾನ? ಎರಡು ಹೃದಯಗಳು ಮೊದಲು ಪರಸ್ಪರ ಒಂದಾಗಬೇಕೋ ಮೂರ್ಖ, ದೇಹ ಗಳೆರಡೂ ಒಂದಾಗಿದ್ದು ಹೃದಯಗಳು ಬೇರೆ ಬೇರೆಯಾಗಿದ್ದರೆ ಏನು ಲಾಭ? ಶಾರೀರಕ ಸಂಬಂಧಕ್ಕಿಂತ ಆತ್ಮ ಸಂಬಂಧ ಮುಖ್ಯವಾದುದು, ಪವಿತ್ರವಾದುದು. ಸ್ಪರ್ಶಾನುಭವ ಇಲ್ಲದೇ ಹೋದರೂ ಮಧುರಾತಿಮಧುರವಾದ ಲಕ್ಷ ನೆನಪುಗಳ ಪರಿಮಳವೇ ಸಾಕು ಬದುಕು ಸಫಲಗೊಳ್ಳುವುದಕ್ಕೆ."

"ನಿನ್ನ ಅರ್ಥದಲ್ಲಿ ನೀನು ಹೇಳುವ ಮಾತು ನಿಜವಿರಬಹುದು. ನಾವಿಬ್ಬರೂ ದೈಹಿಕವಾಗಿ ಒಂದಾಗಿದ್ದಾಗ ಮಲಿಗಳೇ ಒಂದು ವರ್ಣದ್ದರೂ ಬಿಗಿಯಾಗಿ ಮತ್ತೂ ಬೆಸೆಯುತ್ತೇವೆ. ಗಾಯ ವಾಗದ ರೀತಿಯಲ್ಲಿ ಪರಚಿಕೊಳ್ಳುತ್ತೇವೆ— ತೋಳುಗಳ ಮೇಲೆ ಭುಜಗಳ ಮೇಲೆ, ತೊಡೆಗಳ ಮೇಲೆ, ಎಲ್ಲೆಂದರಲ್ಲಿ ಕೆರಳಿಸಿ ಕೆರಳುತ್ತೇವೆ. ಎಷ್ಟು ಮಾಡಿದರೂ ತೀರದ ಕೋರಿಕೆ ನೂರು ಮುಖಗಳೊಡನೆ ನಮ್ಮಿಬ್ಬರ ದೇಹಗಳಲ್ಲಿ ಬಿಚ್ಚಿ ಕೊಳ್ಳುತ್ತದೆ. ಎಂಥ ಕಂಪನೆಯ ಸ್ಪಂದನದ ದೇಹ ಅವಳದು, ಪ್ರೇಯಸಿ ಅಂದರೆ ಹಾಗಿರ ಬೇಕು ಬಿಡು."

"ಸಾಕು. ಬಾಯಿಮುಚ್ಚೋ, ನೀನು ಹೇಳು ವುದನ್ನು ಕೇಳಲಿಕ್ಕಾಗ್ತಾ ಇಲ್ಲ. ನೀನು ಮನು ಷ್ಯನಲ್ಲ, ರಾಕ್ಷಸ. ಇಂಥ ಮಾತು ಕೇಳಿದರೆ ನಿನ್ನಂಥವನನ್ನು ಸ್ನೇಹದ ಚೌಕಟ್ಟಿನಿಂದ ದೂರ ವಿಡುವುದೇ ಒಳ್ಳೆಯದು ಅನ್ನಿಸುತ್ತದೆ."

"ಹೌದು ಬಿಡೋ! ನೀನು ಹೇಳಿದ ಮಾತು ಗಳನ್ನು ನನ್ನಾಕೆಯ ಬಳಿ ಹೇಳಿದೆನೆಂದರೆ ಆಕೆ ಬಿದ್ದು ಬಿದ್ದು ನಗುತ್ತಾಳೆ ನೋಡು. ಒಂದು ಕಾಲಿಗೆ ಬರಬೇಕೆಂದಾಗ ನಾನೂ ಈ ರೀತಿ ತತ್ವಜ್ಞಾನಿ ಯಂತೆಯೇ ಮಾತಾಡುತ್ತಿದ್ದೆ. ಆ ರೀತಿ [illegible] ದಿನಗಳಷ್ಟೆ; ನನ್ನಾಕೆ ತುಂಬ [illegible] ಹೆಂಗಸು. ವೃಥಾ ಕಾಲಹರಣ ಮಾಡುವುದನ್ನು ಆಕೆ ಎಳ್ಳಷ್ಟು ಸೇರುವುದಿಲ್ಲ. [illegible] ಒಂದಾದೆವೆಂದರೆ ಒಂದೇ ಒಂದು ಮಾತು ಇರುವುದಿಲ್ಲ. ನಮ್ಮಿಬ್ಬರ ಮೈ ಕಾವಿನ [illegible]

ಕೂಡ ಕರಗಿ ಬಿಡುತ್ತದೆ ನೋಡು. ಅಷ್ಟು ಕಾದಿರುತ್ತದೆ ನಮ್ಮ ಮೈ. ...ಎಷ್ಟು ಸುಖಿಸಿದರೂ ಮತ್ತೆ ಮತ್ತೆ ಸ್ಖಲಿಸಬೇಕೆಂಬ ಆಸೆ, ಆಕಾಂಕ್ಷೆ."

"ತುಂಬ ತಮಾಷೆಯಾಗಿಯೇ ಇದೆ ನೀನು ಹೇಳ್ತಿರೋದು."

"ಯಾಕೆ ತಮಾಷೆಯಾಗಿದೆ ?"

"ಇಷ್ಟು ವಿಭಿನ್ನ ರುಚಿಗಳ ನಾವಿಬ್ಬರೂ ಪರಸ್ಪರ ಸ್ನೇಹಿತರಾಗಿರುವುದು ಎಷ್ಟು ವಿಚಿತ್ರ ಅಲ್ಲವೆ? ಕಾಮಕ್ಕೆ ಹೊರತಾಗಿ ಮಾತಾಡದ ನೀನು ಉನ್ನತವಾದ ಪ್ರೇಮವೇ ಒಂದು ಜೀವನ ಮೌಲ್ಯವಾಗಿಟ್ಟುಕೊಂಡು ಬದುಕುತ್ತಿರುವ ನಾನು... ನನ್ನ ಪ್ರೇಯಸಿ ಕುಸುಮ ಕೋಮಲಿ; ನಿನ್ನ ಪ್ರೇಯಸಿ ಕೇವಲ ಕಾಮ ಪಿಶಾಚಿ."

"ನೀನು ಊಹಿಸಿರುವಂತೆ ನನ್ನ ಪ್ರೇಯಸಿ ಪ್ರವರ್ತಿಸುತ್ತಿಲ್ಲ ಕಣೋ."

"ನನ್ನ ಗೆಳತಿ ಕೂಡ ನನ್ನ ಪ್ರೇಯಸಿಯಷ್ಟು ಮೃದು ಅಲ್ಲ ಎಂದು ಭಾವಿಸಿಕೋ."

"ನನ್ನ ಪ್ರೇಯಸಿ ಅಷ್ಟೇನೂ ದಪ್ಪವಲ್ಲದ, ಅಷ್ಟೇನೂ ಎತ್ತರವಲ್ಲದ ದೇಹದವಳು. ಮಧ್ಯ ತರಗತಿಯವಳೆಂದುಕೋ...ಆದರೆ ಆಕೆ ಅದೆಷ್ಟು ಸೆಕ್ಸಿಯಾಗಿ ಕಾಣಿಸುತ್ತಾಳೆ ಗೊತ್ತಾ!"

"ನನ್ನ ಪ್ರೆಯಸಿ ಕೇವಲ ಅಸ್ಥಿಪಂಜರದಂತೆ ಇರಬಹುದು. ಅವಳ ಗಲ್ಲಗಳು ಬಾಡಿರುವಂತೆ ಕಂಡುಬರುವುದಿಲ್ಲ. ಅವು ಆರೋಗ್ಯಕರವಾಗಿ, ಗುಲಾಬಿ ಹೂವಿನಂತೆ ಕಂಡುಬರುತ್ತವೆ.

"ನನ್ನ ಫ್ರೆಂಡಿನ ಗಲ್ಲಗಳು ಕೂಡ ಅಷ್ಟು ಕೋಮಲವಾಗಿಲ್ಲ ಬಿಡು, ಆದರೆ ಅವು ದುಂಡಗೆ ಉಬ್ಬಿರುವಂತೆ ಕಾಣಿಸುವವು."

"ನಾವಿಬ್ಬರು ನಮ್ಮಿಬ್ಬರ ಪ್ರೇಯಸಿಯರನ್ನು ಪರಸ್ಪರ ಪರಿಚಯ ಮಾಡಿಸಿದರೆ ಹೇಗಿರುತ್ತದೆ? ಇಂಥ ವಿಭಿನ್ನ ಮನೋಭಾವದ ಹೆಂಗಸರಿಬ್ಬರು ಪರಸ್ಪರ ಎದುರಾಗಿ ಹೇಗೆ ಮಾತಾಡಬಹುದು.

"ಐಡಿಯಾ ಏನೋ ಚೆನ್ನಾಗಿದೆ. ಆದರೆ ಈಗ ಅವರಿಬ್ಬರಿಗೆ ಪರಸ್ಪರ ಪರಿಚಯವಿಲ್ಲವೆಂದು ಏನು ಗ್ಯಾರಂಟಿ?"

"ನಿಜವೇ, ಏನು ಗ್ಯಾರಂಟಿ? ಪರಿಚಯವಿದ್ದರೂ ಇರಬಹುದು."

"ಅವರಿಬ್ಬರ ನಡುವೆ ಬಹಳ ಸ್ನೇಹ ಕೂಡ ಇರಬಹುದು."

"ಆಶ್ಚರ್ಯವೆಂಬಂತೆ, ನಮ್ಮಿಬ್ಬರ ಪ್ರೇಯಸಿಯರು ಸ್ನೇಹಿತೆಯರೇ ಆಗಿದ್ದರೆ ?"

"ಅದೊಂದು ಅದ್ಭುತ ಅನುಭವ."

"ನೀನು ನಿನ್ನ ಗೆಳತಿಯ ಹೆಸರನ್ನು ಹೇಳು; ನಾನು ನನ್ನ ಗೆಳತಿಯ ಹೆಸರನ್ನು ಹೇಳುವೆನು."

"ನಿನ್ನ ಕೈಯನ್ನು ಈ ಕಡೆ ಕೊಡು, ಈ ಹೆಸರನ್ನು ಎಂದೂ, ಯಾವತ್ತೂ ಯಾರೊಬ್ಬರ ಬಳಿಯೂ ಬಹಿರಂಗಪಡಿಸುವುದಿಲ್ಲವೆಂದು ವಚನ ಕೊಡು."

"ದೇವರಾಣೆಯಾಗಿ."

"ನನ್ನ ಗೆಳತಿಯ ಹೆಸರು ಲಾವಣ್ಯ ಕುಮಾರಿ"

"ನಿಜವಾಗಿಯೂ !"

"ಹೌದು. ಹಾಗೆ ಯಾಕೆ ನೋಡುವಿ ನೀನು? ನಿನ್ನ ಗೆಳತಿಯ ಹೆಸರು ಹೇಳು ಮತ್ತೆ."

"ನಿನ್ನ ಗೆಳತಿಯ ಹೆಸರು ಏನೋ ಹೇಳಿದೆಯಲ್ಲ, ಸರಿಯಾಗಿ ಕೇಳಿಸಿಕೊಳ್ಳಲಿಲ್ಲ. ಮತ್ತೊಮ್ಮೆ ಹೇಳು."

"ಲಾವಣ್ಯ ಕುಮಾರಿ. ಮನೆ ಹೆಸರು 'ಜ'"

"ಇಲ್ಲ."

"ಏನು? ನೀನು ನಿನ್ನ ಪ್ರೇಯಸಿಯ ಹೆಸರು ಹೇಳುವುದಿಲ್ಲವೇನು?"

"ನನ್ನ ಗೆಳತಿಯ ಹೆಸರು ಕೂಡ ಅದೇ."

"ಮನೆ ಹೆಸರು!"

"ನೀನು ಹೇಳಿದ್ದೆ."

"ಅಡ್ರೆಸ್ ಅಶೋಕ ನಗರ.

"ಅದೇ ಅದೇ ಸರಿ. ನಾನು ಆಕೆಯನ್ನು ಪ್ರತಿ ಸೋಮವಾರ ಬುಧವಾರ ಶುಕ್ರವಾರಗಳಂದು ಭೇಟಿ ಮಾಡುತ್ತಿರುವೆ.'"

"ನಾನು ಮಂಗಳ, ಗುರು ಶನಿವಾರಗಳಂದು."

"ಆದಿತ್ಯವಾರದ ಸಂಗತಿ ಏನು?"

"ಏನೋ ನನಗೆ ಗೊತ್ತಿಲ್ಲ."

"ನೀನು ಆಧ್ಯಾತ್ಮಿಕ ಚರ್ಚೆ ಮಾಡುವುದು ಲಾವಣ್ಯ ಹೆಸರಿನ ಹೆಂಗುಸಿನೊಂದಿಗೆ ಅಲ್ಲವೆ ?"

"ಹೌದು. ಚಿಗುರುಗಂಗಳಿಂದ, ತನ್ನ ಕುಸುಮ ಕೋಮಲ ದೇಹದಿಂದ ನನ್ನನ್ನು ರೋಮಾಂಚನ ಗೊಳಿಸುವವಳು ಅವಳು."

"ಮಧುಪಾತ್ರೆಯಂಥ ಕಣ್ಣುಗಳಿಂದ, ರತಿ ಕ್ರೀಡೆಯಲ್ಲಿ ಪ್ರತಿಸಾರಿ ನನ್ನನ್ನು ಸೋಲಿಸಿ, ಪ್ರತಿ ಸಾರಿ ಸೂರೆಗೊಳ್ಳುತ್ತಿದ್ದ ಅವಳೇ ನನ್ನ ರತಿ."

"ನಾನು ನಂಬಲಾರೆ. ಎಲ್ಲೋ ಏನೋ ಮೋಸ ನಡೆದಿದೆ. ನಿನ್ನ ಮಾತು ಕೇಳುತ್ತಿದ್ದರೆ ನನ್ನ ಹೃದಯ ಚೂರುಚೂರಾಗಿ ಬಿಡುತ್ತದೆ.

"ನೀನು ಹೆಚ್ಚಿಗೆ ಮಾತಾಡುವವನಾಗಿದ್ದರಿಂದ ನಿನ್ನ ಹೃದಯ ಚೂರಾಗಿ ಬಿಡುವುದೇನು ? ಅವಳೆಂದರೆ ನಿನಗೆ ಅಸಹ್ಯವೇನು ? ಆದರೆ ನನಗೆ ಆಕೆಯ ನೆನಪು ನನ್ನನ್ನು ಉದ್ದೀಪಿಸುತ್ತದೆ."

"ಈಗ ನನ್ನ ಬದುಕಿನ ಗತಿ ಏನು... ಏಯ್ ಭಗವಾನ್."

"ನನಗಿಲ್ಲದ ಬಾಧೆ, ನೋವು ನಿನಗ್ಯಾಕೆ ಮಹಾರಾಯ, ನಾನು ಕೊಡದೇ ಇದ್ದದ್ದು ನಿನ್ನ ಬಳಿ ಇದೆ ಎಂದು ಆಕೆ ಏನಾದರೂ ಸುದ್ದಿ ಹೇಳಿದಳೇನು?"

"ಹಾಗೆ ಉದ್ರೇಕಗೊಳ್ಳಬೇಡ, ನನ್ನೀಗ ಒಂದು ಉಪಾಯ ಹೊಳೆದಿದೆ."

"ಏನದು? ಬೇಗ ಹೇಳು"

"ಲಾವಣ್ಯ ಎಷ್ಟು ಬುದ್ಧಿವಂತೆ ಇರಬಹುದು! ಉತ್ತರ, ದಕ್ಷಿಣ ಧ್ರುವಗಳಂತಿದ್ದ ನಮ್ಮಿಬ್ಬರನ್ನು ತನ್ನ ಯುಕ್ತಿ ಸಾಮರ್ಥ್ಯಗಳಿಂದ ತೃಪ್ತಿ ಪಡಿಸುತ್ತಿರುವಳಲ್ಲ, ಆಕೆ ಎಷ್ಟು ಜಾಣೆ! ಆಕೆಗೆ ಒಂದೇ ಶರೀರ ಇದ್ದರೂ ಆಕೆಯ ಬಳಿ ಎರಡು ವ್ಯಕ್ತಿತ್ವಗಳು ಪರಿಪೂರ್ಣವಾಗಿವೆ ಎಂದು ಅರ್ಥವಾಯಿತು."

"ಇಷ್ಟಕ್ಕೂ ಏನಿದು ಗೋಳು?"

"ನಾವು ಆಕೆಯನ್ನು ಆಕೆಯೆಂದೇ ಒಪ್ಪಿಕೊಳ್ಳೋಣ. ನಾವಿಬ್ಬರೂ ಆಕೆಯಿಂದ ತೃಪ್ತಿ ಹೊಂದುತ್ತಿರುವೆವಲ್ಲಾ; ನಮ್ಮ ಪರಿಚಯವನ್ನು ಆಕೆಯ ಜೊತೆಗೆ ನಡೆದು ಬಂದ ರೀತಿಯಲ್ಲಿ ಹೀಗೆಯೇ ಯಥಾವತ್ ಮುಂದುವರೆಸೋಣ."

"ಸಲಹೆ ಏನೋ ಚೆನ್ನಾಗಿದೆ !"

"ಒಪ್ಪಿದಂತೆಯೆ ಅರ್ಥವೇನು !"

"ಒಪ್ಪಿಕೊಂಡೆ. ಹಾಗೆ ಆಗಲಿ."

"ಈ ಮಾತುಗಳೊಂದನ್ನೂ ಆಕೆಯ ಬಳಿ ಹೇಳೋದು ಬೇಡ. ಯಾರಿಗೂ ಹೇಳೋದು ಬೇಡ. ನಾವಿಬ್ಬರೂ ಪರಸ್ಪರ ಸ್ನೇಹಿತರೆಂಬ ಸುದ್ದಿ ಸಹ ಆಕೆಗೆ ತಿಳಿಯಬಾರದು. ನಿನ್ನ ದಾರಿ ನಿನಗೆ, ನನ್ನ ದಾರಿ ನನಗೆ, ನಮ್ಮಿಬ್ಬರ ಗುರಿ ಮಾತ್ರ ಲಾವಣ್ಯ."

"ಗೆಳೆಯ, ನಿನ್ನದು ಅದ್ಭುತವಾದ ಸಲಹೆ."

•

ತೋರಿಕೆಗೆ ಅವರಿಬ್ಬರೂ ಆಕೆಯನ್ನು ಗೌರವದಿಂದ ಹಂಚಿಕೊಳ್ಳಬೇಕೆಂದು ಕೊಂಡಿದ್ದಾರೆ... ಆದರೆ–

ಒಳಗೊಳಗೆ ಅವರಿಬ್ಬರ ಹೃದಯಗಳಿಗೆ ಬಿದ್ದಿರುವ ಕಾಳ್ಗಿಚ್ಚು ಭಗಭಗ ಎಂದು ಉರಿಯುತ್ತಲೇ ಇರುವುದು. ಈ ಗಂದರಗೋಳದಲ್ಲಿ ಆಕೆ ಏನಾದರೂ ಬಿದ್ದರೆ ತಡೆದುಕೊಳ್ಳಲಾಗದೆ ಮಾತ್ತಿಬ್ಬರಿಗಾಗಿ ಶೋಧನೆ ನಡೆಸಿದರೂ ನಡೆಸಬಹುದು. ★



ನಮ್ಮ ನಿಮ್ಮ ಬುದ್ಧಿಶಕ್ತಿಗೂ ನಿಲುಕಲಾರದಂತಹ ಬುದ್ಧಿ ಹೃದಯಕ್ಕಿದೆ.

–ಜಾಕ್ವೆಸ್ ಬೆನಿನ್ ಬಾಶೆ

ತಮ್ಮ ಮನಸ್ಸನ್ನು ಅರಿತಿರುವವರಾರೂ ಸುಮಾರಾಗಿ ತಮ್ಮ ಹೃದಯವನ್ನು ಅರಿತಿರುವುದಿಲ್ಲ.

- ಲಾ ರೋಶೇ ಫೂಕೋ

# 21ನೇ ಶತಮಾನದ ಖ್ಯಾತ ಉದ್ಯಮದಾರ

ಪುಟಾಣಿ ಅರುಣ, ನಾವು ನೀವು ನಿತ್ಯ ನೋಡುತ್ತಿರುವ ಮಕ್ಕಳಂತೆಯೇ ಒಬ್ಬ. ಮುಂದೆ ಅವನು ದೊಡ್ಡವನಾಗಿ ಖ್ಯಾತ ಉದ್ದಿಮೆದಾರನಾಗುವ ಲಕ್ಷಣಗಳು ಹಿರಿಯರಲ್ಲಿ ಭರವಸೆ ಮೂಡಿಸಿದೆ.

ಆದರೆ ಈ ಆಕಾಂಕ್ಷೆಗಳಿಗೆಲ್ಲಾ ನಿಜರೂಪ ಬರುವುದು ಹೇಗೆ? ಜಾಣ್ಮೆಯ ಉಳಿತಾಯ ಯೋಜನೆಯೇ ಇದಕ್ಕೆ ಉತ್ತರ.

ಅರುಣನ ತಂದೆ ಈಗಾಗಲೇ ಸಿಂಡಿಕೇಟ್ ಬ್ಯಾಂಕ್‌ನ ಆಕರ್ಷಕ ಯೋಜನೆಯಲ್ಲಿ ಉಳಿತಾಯ ಪ್ರಾರಂಭಿಸಿದ್ದಾರೆ.

ಅರುಣನ ಪ್ರಥಮ ಹುಟ್ಟು ಹಬ್ಬದಂದೇ ಸುಂದರ ಭವಿಷ್ಯಕ್ಕಾಗಿ ಉಳಿತಾಯದ ನಾಂದಿ. ಅವನ ಹೆಸರಿನಲ್ಲಿ ಸಿಂಡಿಕೇಟ್ ಬ್ಯಾಂಕ್‌ನಲ್ಲಿ ರೂಪಾಯಿ 25 ರೊಂದಿಗೆ ಸೇವಿಂಗ್ಸ್ ಖಾತೆ ಪ್ರಾರಂಭ.

ಮತ್ತೆ ಪ್ರತಿ ತಿಂಗಳೂ ರೂಪಾಯಿ 100 ರಂತೆ ಕೇವಲ ಐದು ವರ್ಷಗಳ ವರೆಗೆ ಕ್ಯುಮುಲೇಟಿವ್ ಡಿಪಾಜಿಟ್ ಯೋಜನೆಯಲ್ಲಿ ವಿನಿಯೋಗ.

ಅರುಣನಿಗೆ 16 ವರ್ಷ ತುಂಬಿದಾಗ ನಾವು ಪ್ರತಿ ತಿಂಗಳೂ ರೂಪಾಯಿ 173-55 ನೀಡುತ್ತೇವೆ. ಇವು ಅವನ ತಾಂತ್ರಿಕ ಶಿಕ್ಷಣದ ಖರ್ಚನ್ನು ನೀಗುತ್ತದೆ.

ಅವನು ಮುಂದೆ 21 ವರ್ಷದ ಯುವಕನಾದಾಗ ರೂಪಾಯಿ 21,000 ರಷ್ಟು ದೊಡ್ಡ ಮೊತ್ತವು ಲಭಿಸುತ್ತದೆ

ಇದು ಅವನು ಪ್ರಾರಂಭಿಸುವ ಸಣ್ಣ ಉದ್ದಿಮೆಗೆ ಬಂಡವಾಳವಾಗಿ ಪರಿಣಮಿಸುತ್ತದೆ.

ನೀವೇ ನೋಡಿ, ಕೇವಲ ಐದು ವರ್ಷಗಳ ಸಮಯೋಚಿತ ಉ ದಿಂದ ಅರುಣನಂತೆ ನಿಮ್ಮ ಮ ಭವಿಷ್ಯವನ್ನೂ ಕೂಡ ಸುಂದರ ಬಹುದು.

ಬನ್ನಿ, ನಿಮ್ಮ ಮಕ್ಕಳ ಒತಬಿ ನಾವು ಕೂಡ ಸಹಭಾಗಿಗಳು.



**ಸಿಂಡಿಕೇಟ್ ಬ್ಯಾ**

ಇಲ್ಲಿ ಉಳಿತಾಯಕ್ಕೆ ಹೊಸ ಹ. ಯೋಜನೆಗಳು

ಅಂತಾರಾಷ್ಟ್ರೀಯ ಮನ್ನಣೆ ಪಡೆದ
ಏಕೈಕ ಮಹಿಳಾ ಶಿಲ್ಪಿ

# ಹೆಪ್‌ವರ್ತ್

**ಕಾಸರವಳ್ಳಿ ಜಿ. ರವೀಶ**

ಚಾತುರ್ಯ, ಕಲಾಪರಿಣತಿಯಂತೆಯೇ ಬಲ ಪ್ರಯೋಗವೂ ಅತ್ಯಂತ ಅವಶ್ಯಕವಾದ ಚಿತ್ರಕಲೆ. ಹೆಚ್ಚಾಗಿ ಪುರುಷರಿಗೇ ಶತಮಾನಗಳಿಂದ ಮೀಸಲಾಗಿತ್ತು: ಸ್ತ್ರೀಯರಿಗೆ ಎಟುಕದ ಕಲೆಯೋ ಎನೋ ಎಂಬಂತಿದ್ದ ಶಿಲ್ಪಕಲೆ. ಆದರೆ ಪರಿಣತಿಯಿಂದ ಅಭ್ಯಸಿಸಿ, ಅಸಾಧಾರಣ, ಸಂಪ್ರದಾಯವಾದೀ ಶಿಲ್ಪಗಳನ್ನು ರಚಿಸಿದುದೂ ಅಲ್ಲದೇ, ನವ್ಯಶಿಲ್ಪ ಪ್ರಪಂಚಕ್ಕೆ ಭದ್ರ ಬುನಾದಿ ಹಾಕಿಕೊಟ್ಟ ಕೀರ್ತಿ ಬಾರ್ಬರಾ ಹೆಪ್‌ವರ್ತಳದ್ದು.

೧೯೦೩ರಲ್ಲಿ ವೇಕ್‌ಫೀಲ್ಡ್ (ಯಾರ್ಕ್‌ಶೈರ್)ನ ಮೂಲೆಯೊಂದರಲ್ಲಿ ಹುಟ್ಟಿದ ಈ ಹುಡುಗಿ ಮುಂದೆ ಜಗತ್ಪ್ರಸಿದ್ಧ ಕಲಾಕಾರ್ತಿಯಾಗುವಳೆಂದು ಯಾರೂ ಕನಸು ಕಂಡಿರಲಾರರು. ಯಾಕೆಂದರೆ ಅವಳ ಮನೆತನದಲ್ಲಿ ಯಾರೂ ಕಲಾವಿದರೇ ಇರಲಿಲ್ಲ. ಇದಕ್ಕಾಗಿಯೇ ಆಕೆ ಲೀಡ್ಸ್ ನಗರಕ್ಕೆ ಚಿತ್ರಾಭ್ಯಾಸಕ್ಕೆ ಹೋಗುವೆನೆಂದಾಗ ಮನೆಯಲ್ಲಿ ಪ್ರತಿಭಟನೆ ಹಾಗೂ ಕುಚೋದ್ಯಗಳು ಆರಂಭವಾದವು: ಆ ಕಾಲದಲ್ಲಿ ಹೆಣ್ಣುಮಕ್ಕಳು ಚಿತ್ರ-ಕಲೆ ಕಲಿಯುವುದು ಸಂಪ್ರದಾಯಸ್ಥರಿಗೆ ಸರಿ-ದೋರುತ್ತಿರಲಿಲ್ಲ. ಮೇರಿ ರ್ಯಾಸಬ್ ಎಂಬ ಅಮೇರಿಕನ್ ಕಲಾವಿದೆಯನ್ನುಳಿದರೆ ಸ್ತ್ರೀಯರು







೧. ಮಹಾಗನಿ ಮರ ಹಾಗೂ ತಂತಿಗಳನ್ನು ಬಳಸಿದ್ದು. ೧೬೬೦ ಅಂಗುಲ ಎತ್ತರ.
೨. 'ಕೊರಿಂಥಸ್' ಎಂದು ಹೆಸರಿಸಲ್ಪಟ್ಟಿರುವ ಮರದ ಕೆತ್ತನೆ. ೩. ಇನ್ನೊಂದು ಕೃತಿ.

ಈ ರಂಗವನ್ನು ಪ್ರವೇಶಿಸಿಯೇ ಇರಲಿಲ್ಲ. ಅಂತೂ ತನ್ನ ಪಟ್ಟಣದ ಲೀಡ್ಸಿನ ಶಾಲೆಯನ್ನು ಸೇರಿದ ಶಿಲ್ಪಕಲೆ ಅಭ್ಯಾಸ ಮಾಡುತ್ತಿರುವಾಗ ಆಕೆಗೆ ಜಗತ್ತಿನ ಅತ್ಯುತ್ತಮ ಕಲಾವಿದರಾದ ಹೆನ್ರಿ ಮೂರ್ ಹಾಗೂ ಕಾನ್ಸ್ಟಂಟಿನ್ ಬ್ರಾಂಕುಸಿ ಇವರ ಪರಿಚಯವಾಯಿತು. ಅಲ್ಲದೇ ಆಕೆಯ ಚಿಗುರುತ್ತಿದ್ದ ಕಲೆಯ ಮೇಲೆ ಅವರ ಪ್ರಭಾವವೂ ಉಂಟಾಯಿತು.

ಬಹಳಷ್ಟು ಸಾಂಪ್ರದಾಯಿಕ ಶೈಲಿಯ ಶಿಲ್ಪಗಳನ್ನೇ ರಚಿಸುತ್ತಿದ್ದ ಆಕೆಗೆ ಪ್ಯಾರಿಸ್, ರೋಮ್ ಹಾಗೂ ಲಂಡನ್ ನಗರಗಳಲ್ಲಿದ್ದ ಅಮೂರ್ತ ಚಿತ್ರಕಾರರ ಪ್ರಭಾವದಿಂದ ಅಮೂರ್ತ ಚಿತ್ರಕಲೆಗೂ ಇಳಿಯಬೇಕೆಂಬ ಆಸಕ್ತಿ ಕೆರಳಿತು. ಸುಮಾರು ೧೯೩೦ರ ವೇಳೆಗೆ ಆಕೆ ತನ್ನದೇ ಆದ ಶೈಲಿಯಲ್ಲಿ ತುಂಬಾ ಸುಲಭೀಕೃತ ಮಾದರಿಗಳ ಶಿಲ್ಪರಚನೆಯನ್ನು ಆರಂಭಿಸಿದ್ದಳು. ಆಗ ಇವಳ ಶಿಲ್ಪದ ಆಕಾರಗಳು ಗುಂಡು ಗುಂಡಗೆ ಹಿಟ್ಟಿನ ಮುದ್ದೆಯಂತೆ ಕಂಡು, ಒಳಭಾಗವನ್ನೆಲ್ಲಾ ಟೊಳ್ಳಾಗಿ ಕೊರೆದಿರುತ್ತಿದ್ದಳು.

ಈ ಸಮಯದಲ್ಲೇ (೧೯೩೩) ಆಕೆ ಬ್ರಿಟನ್ನಿನ ಪ್ರಖ್ಯಾತ ಅಮೂರ್ತ ಕಲಾವಿದ ಬೆನ್ ನಿಕೋಲ್ಸನ್‌ನನ್ನು ಮದುವೆಯಾದಳು.

ನಂತರದ ವರ್ಷಗಳಲ್ಲಿ ಆಕೆಗೆ ಕೇವಲ ಶಿಲ್ಪ (ಕಲ್ಲು ಹಾಗೂ ಮರ)ದ ಕೆತ್ತನೆಗೆ ಮಾತ್ರ ತನ್ನ ಸಾಧನೆ ಸೀಮಿತವಾಗುತ್ತಿರುವುದು ಅನುಭವಕ್ಕೆ ಬಂದು, ಲೋಹಶಿಲ್ಪವನ್ನೂ ಚಿತ್ರಕಲೆಯನ್ನೂ ಆರಂಭಿಸಿದಳು.

ಚಿತ್ರಕಲೆಯಲ್ಲಿ ಶಿಲ್ಪದಂತೆ ಅಸಾಧಾರಣವಾದದ್ದೇನನ್ನೂ ಸಾಧಿಸದಿದ್ದರೂ ಇಂಪ್ರೆಶನಿಸ್ಟ್ ಕಲಾವಿದರ ಅನುಕರಣೆ ಮಾಡಿ, ಹಲವು ಸಮಾರಂಭಗಳ ಕಥೆಗಳ ಉತ್ಕೃಷ್ಟ ಚಿತ್ರ ರಚಿಸಿದ್ದಳು.

ಈ ರೂಪದ ಶಿಲ್ಪದಲ್ಲಿ ಇನ್ನೂ ಒಂದು ಕೊರತೆಯಿದೆ ಎಂದೆನಿಸಿ ಅವುಗಳ ಸೌಂದರ್ಯ ಹೆಚ್ಚಿಸಲು ಆಕೆ ತಂತಿಗಳನ್ನು, ಟೊಳ್ಳು ಭಾಗಗಳ ನಡುವೆ ಬಿಗಿಯತೊಡಗಿದಳು. ಇವು ಸಾಧಾರಣವಾಗಿ ಹಾರ್ಪ್‌ನಂತಹ ಸಂಗೀತ ವಾದ್ಯಗಳನ್ನೇ ನೆನಪಿಗೆ ತರುತ್ತಿದ್ದವು! ೧೯೩೮ರ ನಂತರದ ಶಿಲ್ಪಗಳಲ್ಲಿ ಈ ಅಂಶವನ್ನು ಗಮನಿಸಬಹುದು.

ಅವಳ ಅತ್ಯುತ್ತಮ ಸಾಧನೆಗಾಗಿ ಆಕೆ ಗ್ರಾಂಡ್ ಪ್ರಿ (೧೯೫೬), ಜಿನೇ ಸಾವೋ ಪೋಲೊ ದ್ವೈವಾರ್ಷಿಕ ಪ್ರಶಸ್ತಿ (೧೯೫೯) ಡೇಮ್ ಆಫ್ ಬ್ರಿಟಿಷ್ ಎಂಪೈರ್ (೧೯೬೫) ಮೊದಲಾದ ಪುರಸ್ಕಾರಗಳು ದೊರೆತವು.

ಆಕೆಯ ಕಲಾಕೃತಿಗಳು ಲಂಡನ್ನಿನ ವಿಕ್ಟೋರಿಯಾ ಮತ್ತು ಅಲ್ಬರ್ಟ್ ಕಲಾಶಾಲೆ, ಟೇಟ್ ಗ್ಯಾಲರಿ, ನ್ಯೂಯಾರ್ಕಿನ ಮ್ಯೂಸಿಯಂ ಆಫ್ ಮಾಡರ್ನ್ ಆರ್ಟ್‌ನಂತಹ ಜಗತ್ಪ್ರಸಿದ್ಧ ಕಲಾಗಾರಗಳಲ್ಲದೇ ಸಾವಿರಾರು ಯೂರೋಪಿನ್ ಹಾಗೂ ಅಮೇರಿಕನ್ ಕಲಾಶಾಲೆಗಳಲ್ಲಿ, ಕಲಾಸಕ್ತರ ಮನೆಗಳಲ್ಲಿ ರಾರಾಜಿಸುತ್ತಿವೆ. ಪುರುಷ ಶಿಲ್ಪಿಯೂ ಹೆದರಬಹುದಾದಂತಹ ಬೃಹತ್ ಶಿಲ್ಪಗಳನ್ನು ಹಾಲ್‌ಬಾರ್ನ್ ರಾಜ್ಯಶಾಲೆಯ ಎದುರು ಕಡೆದಿದ್ದಾಳೆ.

ಈ ಶತಮಾನದ ಪೂರ್ವಾರ್ಧದಲ್ಲಿದ್ದ ಹಲವೇ ಅತಿ ಪ್ರಭಾವಿ ಶಿಲ್ಪಿಗಳಲ್ಲಿ ಈಕೆಯೂ ಒಬ್ಬಳಾಗಿ ಜಗತ್ತಿನ ಕಲಾ ಇತಿಹಾಸದಲ್ಲಿ ಅಮರಳಾಗಿ ನಿಂತಿದ್ದಾಳೆ. ★



**ಅಬ್ಬಾ! ಇವನ ಬಳಿ ಎಷ್ಟು ಪೆನ್ಸಿಲ್‌ಗಳು! ಯುಗೋಸ್ಲಾವಿಯದ ಸ್ಟೀವನ್ ಫಿಲಿಪೋವಿಕ್ ಬಳಿ ಹತ್ತು ಸಾವಿರ ಪೆನ್ಸಿಲ್‌ಗಳಿವೆ! ನಾನಾ ನಮೂನೆಯವು. ಬೇರೆ ಬೇರೆ ದೇಶದವು. ಮುವತ್ತು ವರ್ಷಗಳ ಹಿಂದೆ ಈ ಪೆನ್ಸಿಲ್ ಸಂಗ್ರಹಕಾರ್ಯ ಪ್ರಾರಂಭಿಸಿದ ಆತ ಈಗಾಗಲೇ ನೂರಾರು ಕಡೆ ಪೆನ್ಸಿಲ್ ಪ್ರದರ್ಶನ ಏರ್ಪಡಿಸಿದ್ದಾನೆ. ಸ್ಟೀವನ್‌ನ ಬಳಿಯಿರುವ ಅತಿ ದೊಡ್ಡ ಪೆನ್ಸಿಲ್ ಅರ್ಧ ಮೀಟರ್ ಉದ್ದವಾಗಿದೆ. ಅತಿ ಚಿಕ್ಕದೆಂದರೆ ಕೇವಲ ನಾಲ್ಕು ಸೆಂಟಿಮೀಟರ್ ಅಳತೆಯದು.**

# ಸಂತಾಪ ಪ್ರತಿಕ್ರಿಯೆ

ಡಾ. ಕೆ. ಎಂ. ಧ್ರುವಕುಮಾರ

ಮಧ್ಯಾಹ್ನದ ಊಟದ ವೇಳೆ ಮುಗಿಸಿ ಕ್ಲಿನಿಕ್ಕಿಗೆ ಹೊರಡುವ ತಯಾರಿಯಲ್ಲಿದ್ದಾಗ ತುರ್ತು ಪರಿಸ್ಥಿತಿಯೆಂದೂ ಕೂಡಲೆ ನನ್ನನ್ನು ಕಾಣಬೇಕಾಗಿದೆಯೆಂದೂ ದೂರವಾಣಿಯಲ್ಲಿ ಕರೆ ಬಂದಿತು. ಕೂಡಲೆ ಕ್ಲಿನಿಕ್ಕಿಗೆ ಬರಲು ತಿಳಿಸಿ ಅಲ್ಲಿಗೆ ಹೊರಟೆ. ನಾನು ಕ್ಲಿನಿಕ್ ತಲಪಿದ ಎರಡು ನಿಮಿಷಗಳ ನಂತರ ಅವರೂ ಬಂದರು. ಇಬ್ಬರು ಗಂಡಸರ ಜೊತೆಯಲ್ಲಿ ಒಬ್ಬ ಹುಡುಗಿಯಿದ್ದಳು. ಅವಳ ಕಣ್ಣುಗಳು ನಿಸ್ತೇಜ. ತಲೆಯನ್ನು ಬಟ್ಟೆಯಿಂದ ಸುತ್ತಿದ್ದರು. ಆ ಬಟ್ಟೆಯ ಮೇಲೆ ದಪ್ಪವಾದ . ಕಂಬಳಿಯನ್ನು ಹೊದ್ದಿದ್ದಳು. ಕಂಬಳಿಯಿಂದ ಭದ್ರವಾಗಿ ತನ್ನ ಶರೀರವನ್ನು ಮುಚ್ಚಿದ್ದಳು. ಒಂದೇ ಸಮನೆ ಶರೀರವೆಲ್ಲಾ ನಡುಗುತ್ತಿತ್ತು. ಶರೀರದ ಕಂಪನದಿಂದ ಬಹಳ ಹಿಂಸೆಯನ್ನು ಅನುಭವಿಸುತ್ತಿರುವಂತಿತ್ತು. ದವಡೆಗಳ ಕಂಪನದಿಂದ ಹಲ್ಲುಗಳು ಕಟಕಟನೆಂದು ಶಬ್ದ ಮಾಡುತ್ತಿದ್ದವು. ಅವಳನ್ನು ನೋಡಿದರೆ ಜ್ವರದಿಂದ ನರಳುತ್ತಿರುವಂತೆ ಕಂಡಳು. ಅವಳ ಜೊತೆಯಿದ್ದ ಗಂಡಸರಲ್ಲಿ ಒಬ್ಬರು ಆಕೆಯ ತಂದೆಯೆಂದೂ ಇನ್ನೊಬ್ಬರು ಅವಳ ಮಾವನೆಂದೂ ಪರಿಚಯಿಸಿಕೊಂಡರು. ಅವಳ ತಂದೆ ತಮ್ಮ ಮಗಳನ್ನು ಹನ್ನೊಂದು ವರ್ಷದ ರಜನಿಯೆಂದು ಪರಿಚಯ ಮಾಡಿಕೊಟ್ಟರು. ರಜನಿಗೆ ಚಳಿ ಜ್ವರವೆಂದು ತಿಳಿಸಿದರು. ಕೂಡಲೇ ಇವರೆಲ್ಲಿಯೋ ತಪ್ಪಿ ನನ್ನ ಬಳಿ ಬಂದಿರುವರೆನಿಸಿತು. ಏಕೆಂದರೆ ಜ್ವರ ಮಾನಸಿಕವಾಗಿರಲು ಸಾಧ್ಯವೇ ಇಲ್ಲ. "ಅವಳನ್ನು ನನ್ನಲ್ಲೇಕೆ ಕರೆತಂದಿರಿ? ಶಾರೀರಿಕ ರೋಗ ತಜ್ಞರ ಬಳಿ ಕರೆದೊಯ್ಯಿರಿ" ನಾನು ಹೇಳಿದೆ. ಆಗ ರಜನಿಯ ತಂದೆ "ಇಲ್ಲಾ ಸರ್, ನಾವು ಈಗಾಗಲೇ ಹಲವಾರು ವೈದ್ಯರ ಬಳಿ ಕರೆದೊಯ್ದಿದ್ದೇವೆ. ಎಲ್ಲರೂ ಯಾವ ತರಹದ ಶಾರೀರಿಕ ಕಾಯಿಲೆಯೂ ಇಲ್ಲವೆಂದು ತಿಳಿಸಿರುವರು." ಎಂದು ವೈದ್ಯರುಗಳು ಬರೆದುಕೊಟ್ಟ ಚೀಟಿಗಳ ಒಂದು ಕಂತೆಯನ್ನೇ ನನ್ನ ಮುಂದಿಟ್ಟರು. ಆ ಕಂತೆಯನ್ನೆಲ್ಲಾ ನೋಡಲು ಕೊಂಚ ಸಮಯವೇ ಹಿಡಿಯಿತು. ಎಲ್ಲ ವೈದ್ಯರ ಚೀಟಿಗಳಲ್ಲೂ ಅವಳಿಗೆ ಯಾವ ಶಾರೀರಿಕ ಕಾಯಿಲೆಯೂ ಇಲ್ಲವೆಂದು ತಿಳಿಸಲಾಗಿತ್ತು. ಅನೇಕ ಬಾರಿ ರಕ್ತ, ಮೂತ್ರ ಎಕ್ಸ್‌ರೇಗಳೆಲ್ಲಾ ಮಾಡಲಾಗಿದ್ದು ಯಾವುದರಲ್ಲೂ ಶಾರೀರಿಕ ಕಾಯಿಲೆಗಳಿರುವ ಚಿಹ್ನೆಗಳಿರಲಿಲ್ಲ. ವೈದ್ಯರುಗಳು ಬರೆದುಕೊಟ್ಟ ಮಾತ್ರೆಗಳನ್ನೆಲ್ಲಾ ಉಪಯೋಗಿಸಿದರೂ ಅವಳ ತೊಂದರೆ ಮಾತ್ರ ಹೋಗಲಿಲ್ಲ. ಕಡೆಗೆ ಬೇಸತ್ತು ಹೋಮಿಯೋಪತಿ ಆಯುರ್ವೇದಿಕ್ ಯುನಾನಿ ಪಂಡಿತರನ್ನು ನೋಡಿದರೂ ಪ್ರಯೋಜನವಾಗಲಿಲ್ಲ. ರಜನಿಯ ತಂದೆ ದೈವಭಕ್ತಿಯುಳ್ಳವರು. ಯಾವುದೋ ಕರ್ಮದ ಫಲವಿರಬಹುದೆಂದು ಹರಕೆ, ಪೂಜೆ, ದಾನ, ಮುಂತಾದವುಗಳನ್ನು ಮಾಡಿದರೂ ವಿಫಲ. ಯಂತ್ರ ಕಟ್ಟಿಸಲಾಯಿತು. ಕೆಟ್ಟ ಗಾಳಿ ಬಿಡಿಸುವವರನ್ನು

ಕಠಿತರಲಾಯಿತು. ಹಾಡುವವರು ತೆಗೆಯುವವರು ಮತ್ತು ಮಾಟ ಬಿಡಿಸುವವರು ಸಹ ವಿಫಲರಾದರು. ರಜನಿಯ ತಂದೆ ಪೇಸತ್ತು ದಿಕ್ಕೇ ತೋಚದೆ ಕಂಗಾಲಾಗಿದ್ದರು. ಆಗ ರಜನಿಯ ಮಾವ ಇದು ಮಾನಸಿಕವಾಗಿರಬಹುದು ಎಂದು ನನ್ನಲ್ಲಿಗೆ ಕರೆದು ತಂದಿದ್ದರು. ರಜನಿಯ ತಂದೆ ಅವಳಿಗೆ ಏನಾಗಿದೆಯೋ ಎಂದು ವಿಪರೀತ ಗಾಬರಿಯಿಂದ ಬಹಳ ಚಡಪಡಿಸುತ್ತಿದ್ದರು. ಅವರನ್ನು ನೋಡಿದರೆ ಅವರೂ ಮಾನಸಿಕ ರೋಗಿಯೇನೋ ಎನ್ನುವಂತಿದ್ದರು. ರಜನಿಗೆ ಕಾಯಿಲೆಯಾದಾಗಿನಿಂದ ಮನೆಯಲ್ಲಿ ಯಾರೂ ಸರಿಯಾಗಿ ಊಟವನ್ನೂ ಮಾಡಿಲ್ಲವೆಂದು ಗಳಗಳನೇ ಅತ್ತುಬಿಟ್ಟರು.

ರಜನಿಗೆ ಸುಮಾರು ಎರಡು ತಿಂಗಳಿಂದ ಹೊಟ್ಟೆ ನೋವು, ಕೀಲು ನೋವು, ಬೆನ್ನು ನೋವು ಮತ್ತು ತಲೆ ನೋವು. ಇದು ಹೆಚ್ಚಾಗುತ್ತಲೇ ಇದ್ದು ಈ ನಡುವೆ ಸಹಿಸಲಸಾಧ್ಯ ಮತ್ತು ಇತರರಿಗೆ ಅವಳ ನರಳುವಿಕೆಯನ್ನು ನೋಡಲು ಅಸಾಧ್ಯ.

ಈಚೀಚೆಗೆ ಚಳಿಜ್ವರ ಬಂದಂತೆ ನಡುಗುವಳು. ಆದರೆ ಜ್ವರಮಾಪಕ ಜ್ವರವಿಲ್ಲವೆಂದು ಸೂಚಿಸುವುದು. ಎಷ್ಟೇ ಬೆಚ್ಚನೆಯ ಬಟ್ಟೆಗಳನ್ನು ಹೊದ್ದರೂ ನಡುಕ ಮಾತ್ರ ನಿಲ್ಲದು. ಹೊಟ್ಟೆ ನೋವು ಬಂತೆಂದರೆ ಕಾಲುಗಳನ್ನು ಎದೆಯ ಮೇಲೆಳೆದುಕೊಂಡು ಕೈಗಳಿಂದ ಗಟ್ಟಿಯಾಗಿ ಹಿಸುಕುವಳು. ಕೆಲವೊಮ್ಮೆ ವಾಂತಿಯೂ ಆಗುತ್ತಿತ್ತು. ಆ ರೀತಿ ಆದಾಗ ತನಗೆ ಹಿಂಸೆ ತಡೆಯಲಾಗದೆಂದು ಹಾಸಿಗೆಯ ಮೇಲೆ ವಿಚಿತ್ರವಾಗಿ ಹೊರಳುವಳು. ಇದೆಲ್ಲಾ ದಿನಕ್ಕೆ ಎಂಟರಿಂದ ಹತ್ತು ಬಾರಿಯಾದರೂ ಆಗುತ್ತಿತ್ತು. ಆ ನೋವಿಗೆ ಹಗಲು ರಾತ್ರಿಯೆಂಬುದಿರಲಿಲ್ಲ. ಅವಳು ಸ್ಕೂಲಿಗೆ ಹೋಗುವುದನ್ನೂ ನಿಲ್ಲಿಸಿದಳು. ಹೊಟ್ಟೆ ನೋವು ಇಲ್ಲದಿದ್ದರೆ ಕೀಲು ನೋವುಗಳ ಯಾತನೆ. ನೋವಿನಿಂದ ಕೈಕಾಲುಗಳನ್ನು ಅಲ್ಲಾಡಿಸಲು ಆಗುತ್ತಲೇ ಇರಲಿಲ್ಲ. ಇಷ್ಟರ ಮೇಲೆ ಕೈಕಾಲುಗಳ ಸೋಲು ಬೇರೆ. ತಲೆ ನೋವು ಬಂದರೆ ತಡಯಲಾಗದೆ ತಲೆಯನ್ನು ಬಿಗಿಯಾಗಿ ಅದುಮಿ ಹಿಡಿಯುವಳು. ಕೆಲವೊಮ್ಮೆ ತಲೆಯನ್ನು ಗೋಡೆಗೆ ಜಜ್ಜಿಕೊಂಡಿದ್ದು ಉಂಟು. ಈ ಎಲ್ಲಾ ನೋವುಗಳ ಯಾತನೆ ಮಾತ್ರ ಸಹಿಸಲಸಾಧ್ಯ. ಇಷ್ಟಲ್ಲದೇ, ಬೆನ್ನು ಮತ್ತು ಶರೀರದ ಇತರ ಎಲ್ಲಾ ಭಾಗಗಳೂ ನೋಯುತ್ತಿದ್ದವು. ಯಾವ ಚಿಕಿತ್ಸೆಯಿಂದಲೂ ಪ್ರಯೋಜನವಾಗದ್ದರಿಂದ ರಜನಿ ಸಾಯುವಳೆಂದೇ ಅವರೆಲ್ಲಾ ಅಂದುಕೊಂಡು ಬಿಟ್ಟಿದ್ದರು. ಆದರೆ ಮಗಳ ಮೇಲಿನ ಮೋಹ ಹೋಗಲು ಸಾಧ್ಯವೇ? ಅವಳಿಗೋಸ್ಕರ ಏನು ಬೇಕಾದರೂ ಮಾಡಲು ತಯಾರಾಗಿದ್ದರು. ನನ್ನಿಂದಲಾದರೂ ಉಪಯೋಗವಾಗಬಹುದೇನೋ ಎಂಬ ಕಿಂಚಿತ್ತು ಆಸೆಯಿತ್ತು. ಇಷ್ಟೆಲ್ಲಾ ವಿಫಲವಾದಾಗ ನಿರಾಶಾವಾದಿಯಾಗುವುದು ಸ್ವಾಭಾವಿಕವಲ್ಲವೇ? ಆದರೆ ಅಂತಹ ನಿರಾಶಾವಾದಿಯಲ್ಲೂ ಕಿಂಚಿತ್ ಆಸೆ ಇನ್ನೂ ಉಳಿದಿತ್ತು.

ರಜನಿಯ ಮನಸ್ಸಿಗೆ ಬೇಜಾರಾಗುವಂತಹ ಘಟನೆಗಳು ಯಾವುದಾದರೂ ನಡೆದಿರಬಹುದೇ ಎಂದು ತಿಳಿಯಲು ನಾನು ಪ್ರಯತ್ನಿಸಿದೆ. ಅವಳ ತಾಯಿ ಸುಮಾರು ನಾಲ್ಕು ತಿಂಗಳುಗಳ ಕಾಲ ಯಾವುದೋ ಕಾಯಿಲೆಯಿಂದ ಬಹಳವಾಗಿ ನರಳಿ ಕಡೆಗೆ ಎರಡೂವರೆ ತಿಂಗಳ ಹಿಂದೆ ದೈವಾಧೀನರಾಗಿದ್ದರು. ಅವರು ನರಳುತ್ತಿದ್ದುದನ್ನು ನೋಡಿದರೆ ಅವರು ಹೋಗಿದ್ದೇ ಒಂದು ರೀತಿಯಲ್ಲಿ ಒಳ್ಳೆಯದೆಂದು ಎಲ್ಲರೂ ಹೇಳುತ್ತಿದ್ದರು. ತಾಯಿ ಸತ್ತಾಗ ಎಲ್ಲರಂತೆ ರಜನಿಯೂ ಬಹಳ ಅಳುತ್ತಿದ್ದು, ನಂತರ ಸರಿಹೋಗಿದ್ದಳು. ಹದಿನೈದು ದಿನಗಳ ನಂತರ ತೊಂದರೆ ಪ್ರಾರಂಭವಾಯಿತು. ತಂದೆಯ ಪ್ರಕಾರ ತಾಯಿಯ ಸಾವಿನಿಂದ ಅವಳಿಗೆ ದುಃಖವಾಗಿದ್ದರೂ ಈಗ ಅದರ ಬಗ್ಗೆ ಅಷ್ಟೇನೂ ಅಳುವುದಿಲ್ಲವೆಂದು ಹೇಳಿದರು. ಅದೊಂದನ್ನು ಬಿಟ್ಟರೆ ರಜನಿಗೆ ಬೇಜಾರಾಗುವಂತಹ ಘಟನೆಗಳಾವುವೂ ನಡೆದಿರಲಿಲ್ಲ. ರಜನಿಯಂತೂ ಹೆಚ್ಚು ಮಾತನಾಡಲೊಲ್ಲಳು. ಕಾಂತಿಹೀನವಾದ ಜೋಲು ಮುಖ. ತಲೆಯ ಸುತ್ತ ಬಟ್ಟೆ ಮತ್ತು ಶರೀರದ

ಸುತ್ತ ಕಂಬಳಿಯನ್ನು ನೋಡಿದರೆ ಅವಳು ರೋಗಿಷ್ಟೆಯೆಂಬ ಭಾವನೆ ಮೂಡುವುದು. ಅವಳನ್ನು ಪರೀಕ್ಷಿಸಿ ಶಾರೀರಿಕ ಕಾಯಿಲೆಗಳಾವೂ ಇಲ್ಲವೆಂದು ಮನದಟ್ಟು ಮಾಡಿಕೊಂಡೆ. ತಾಯಿಯ ಸಾವಿನ ವಿಷಯದಲ್ಲಿ ಒಂದೆ ಬೇಕಾ ರಾತ್ರಿತ್ತೆಂದೂ ಕ್ರಮೇಣ ಅದು ಕಡಿಮೆಯಾಗಿದೆಯೆಂದೂ ತಿಳಿಸಿದಳು. ಟಿ. ಎ. ಟಿ. ಮಾನಸಿಕ ಪರೀಕ್ಷೆಯಲ್ಲಿ ರಜನಿಗೆ ಬಹಳ ದುಃಖವಿದೆಯೆಂದೂ ಮತ್ತು ತಾಯಿಯ ಸಾವಿನ ಬಗ್ಗೆ ಅವಳು ಒಪ್ಪಿಕೊಳ್ಳುವದಕ್ಕಿಂತಲೂ ಹೆಚ್ಚು ಬೇಜಾರಾಗಿದೆಯೆಂದೂ ತಿಳಿಯಿತು. ತಲೆಯ ಸುತ್ತ ಕಟ್ಟಿದ ಬಟ್ಟೆ ಮತ್ತು ಶರೀರಕ್ಕೆ ಸುತ್ತಿದ್ದ ಕಂಬಳಿಯನ್ನು ಮೊದಲು ತೆಗೆದು ಹಾಕಿದೆ. ಇದು ರಜನಿಗಿಂತಲೂ ಅವಳ ತಂದೆಗೆ ಅತಿಯಾದ ಆತಂಕವಾಯಿತು. "ಸಾರ್ ಅವಳು ಚಳಿಜ್ವರದಿಂದ ವಿಪರೀತ ನಡುಗುತ್ತಾಳೆ. ಕಂಬಳಿ ತೆಗೆದುಬಿಟ್ಟರೆ ಜ್ವರ ಹೆಚ್ಚಾಗಿಬಿಡುತ್ತದೆ," . ಎಂದು ಆತಂಕ ವ್ಯಕ್ತಪಡಿಸಿದರು. ಅವಳು ನಡುಗುತ್ತಿರುವದು ಚಳಿ ಅಥವಾ ಜ್ವರದಿಂದಲ್ಲವೆಂದೂ, ಅದು ಭಯದ ಸೂಚಕವೆಂದೂ ಮತ್ತು ಅದರಿಂದಲೇ ಕಂಬಳಿ ಸುತ್ತಿಕೊಂಡರೂ ಅದು ಹೋಗದೇ ಇರುವುದೆಂದೂ ಹೇಳಿದೆ. ಆದರೆ ಮನೆಯವರೆಲ್ಲರೂ ಅವಳು ರೋಗಿಷ್ಟೆಯೆಂದು ಹೌಹಾರಿ ಅವಳು ಕಾಯಿಲೆಯವಳಂತೆ ಮಲಗಲು ತಮಗೆ ತಿಳಿಯದಂತೆಯೇ ಪ್ರೋತ್ಸಾಹಿಸುತ್ತಿದ್ದರು. ರಜನಿಗೆ ಆಗಿರುವುದು ಶಾರೀರಿಕ ಅಸ್ವಾಸ್ಥ್ಯವಲ್ಲವೆಂದೂ, ಅದು ಮಾನಸಿಕ ಅಸ್ವಾಸ್ಥ್ಯವೆಂದೂ ಅವಳನ್ನು ಶಾರೀರಿಕವಾಗಿ ಅಸ್ವಸ್ಥಳೆಂಬಂತೆ ನೋಡಬಾರದೆಂದೂ ಸೂಚಿಸಿದೆ. ಮಾನಸಿಕ ಆತಂಕವನ್ನು ಕಡಿಮೆ ಮಾಡುವಂತಹ ಮಾತ್ರೆಗಳನ್ನು ಬರೆದು ಕೊಟ್ಟು ಮೂರು ದಿನಗಳ ನಂತರ ಕರೆದುಕೊಂಡು ಬರಲು ಹೇಳಿ ಕಳುಹಿಸಿದೆ.

ಆದರೆ ಮೂರನೆಯ ದಿನವೇ ಮತ್ತೊಂದು ತುರ್ತು ಭೇಟಿಯಾಯಿತು. ಅವಳ ತೊಂದರೆ ವಿಪರೀತವಾಯಿತೆಂದು ಮತ್ತೆ ಅವಳನ್ನು ಕಂಬಳಿಯಲ್ಲಿ ಚೆನ್ನಾಗಿ ಸುತ್ತಿ ಕರೆತಂದಿದ್ದರು. ರಜನಿಗೇನೋ ಆಗಿಹೋಗಿದೆಯೆಂದು ಮನೆಯವರೆಲ್ಲಾ ಗೋಳೋ ಎಂದಳುತ್ತಿರುವರೆಂದು ತಂದೆ ದುಃಖಿಸುತ್ತಾ ಹೇಳಿದರು. ರಜನಿ ಸರಿಯಾಗಿರುವಳೆಂದು ಮತ್ತೊಮ್ಮೆ ಪರೀಕ್ಷಿಸಿ ದೃಢಪಡಿಸಿಕೊಂಡ ನಂತರ ಅವಳಿಗೆ ಪ್ರಾಣಕ್ಕೆ ಅಪಾಯವಾಗುವಂತಹ ಕಾಯಿಲೆಯೇನೂ ಇಲ್ಲವೆಂದು ಹೇಳಿದೆ. ಎಲ್ಲರೂ ಅದೇನಾಗುತ್ತದೋ ಆಗಿಯೇ ಹೋಗಲಿ ಎಂದು ಧೈರ್ಯದಿಂದ ಸಮಾಧಾನವಾಗಿ ಅದನ್ನು ಎದುರಿಸಲು ಸಲಹೆ ಕೊಟ್ಟೆ. [ಅವಳ ತಂದೆಯನ್ನು ಒಪ್ಪಿಸುವುದರಲ್ಲಿ ನಾನೇ ಸುಸ್ತು ಹೊಡೆದಿದ್ದೆ]. ಹಾಗೆಯೇ ಆತಂಕ ಕಡಿಮೆ ಮಾಡುವ ಮಾತ್ರೆಗಳನ್ನೂ ಹೆಚ್ಚಿಸಿದೆ. ಮೂರು ದಿನಗಳ ನಂತರ ನನ್ನ ಆದೇಶದಂತೆ ಅವರು ಮತ್ತೆ ಬಂದರು. ರಜನಿಗೆ ಸ್ವಲ್ಪ ವಾಸಿಯೂ ಗಿತ್ತು; ಆದರೆ ಹೇಳಿಕೊಳ್ಳುವಷ್ಟೇನೂ ವಾಸಿ ಆಗಿರಲಿಲ್ಲ. ಅವಳ ತಂದೆಗೋ ನಾಲ್ಕು ದಿನಗಳಾದರೂ ವಾಸಿಯಾಗಲಿಲ್ಲವಲ್ಲಾ ಎಂಬ ಭಯ, ಚಿಂತೆ. ಮಾನಸಿಕ ಅಸ್ವಾಸ್ಥ್ಯದ ಚಿಕಿತ್ಸೆ ಯಾವಾಗಲೂ ನಿಧಾನವಾದುದು ಎಂದು ಹೇಳಿದರೂ ಅವರಿಗೆ ಮನದಟ್ಟಾದಂತೆ ಕಾಣಲಿಲ್ಲ. ನೋವುಗಳು ಇರುವುದರಿಂದ ಇದು ನರಗಳ ರೋಗವೋ ಎಂಬ ಅನುಮಾನ. ಅವರಿಗೆ ಮೊದಲಿಂದಲೂ ಇದು ಮಾನಸಿಕವಲ್ಲ ಎಂಬ ಭಾವನೆ. ತಮ್ಮ ಭಾವ ಹೇಳಿದರೆಂದು ರಜನಿಯನ್ನು ನನ್ನಲ್ಲಿಗೆ ಕರೆತಂದಿದ್ದರು. ನರರೋಗ ತಜ್ಞರನ್ನು ಕಾಣಬೇಕೆ ಎಂದೂ ನನ್ನನ್ನು ಕೇಳಿದರು.

ಅದರ ಅವಶ್ಯಕತೆಯಿಲ್ಲವೆಂದು ಎಷ್ಟು ಹೇಳಿದರೂ ಅವರಿಗೆ ಸಮಾಧಾನವಾಗಲಿಲ್ಲ. ಒಂದು ವಾರದ ನಂತರ ರಜನಿಯನ್ನು ಮತ್ತೆ ಕರೆತಂದರು. ಬಂದವರೇ "ಸಾರ್ ನಾನು ಒಂದು ತಪ್ಪು ಮಾಡಿದ್ದೇನೆ. ದಯವಿಟ್ಟು ಕ್ಷಮಿಸಬೇಕು," ಎಂದರು. ನರರೋಗ ತಜ್ಞರನ್ನು ಕಾಣುವ ಅವಶ್ಯಕತೆಯಿಲ್ಲವೆಂದು ಹೇಳಿದ್ದರೂ ಅವರನ್ನು ಕಂಡಿದ್ದರು. ಅವರು ಪರೀಕ್ಷಿಸಿ ಯಾವುದೋ ಮಾತ್ರೆಗಳನ್ನು ಕೊಟ್ಟರೆಂದೂ, ಅವಳ ತೊಂದರೆ ವಿಪರೀತ ಹೆಚ್ಚಾಯಿತೆಂದೂ ತಿಳಿಯಿತು. ಆಗ ಹೆದರಿಕೊಂಡು ಆ ಮಾತ್ರೆಗಳನ್ನು ನಿಲ್ಲಿಸಿ ಮತ್ತೆ ನಾನು ಕೊಟ್ಟ ಮಾತ್ರೆಗಳನ್ನೇ ತೆಗೆದುಕೊಂಡು ನನ್ನಲ್ಲಿಯೇ ಚಿಕಿತ್ಸೆ ತೆಗೆದು

ಕೊಳ್ಳಲು ನಿರ್ಧಾರ ಮಾಡಿ ಬಂದಿದ್ದರು. ರೋಗಿ ಅರೆಮನಸ್ಸಿನಿಂದ ಚಿಕಿತ್ಸೆಗೆ ಒಳಗಾದರೆ ಕಾಯಿಲೆ ವಾಸಿಯಾಗುವುದು ಬಹಳ ಕಷ್ಟ. ಅವಳು ಮನಃಪೂರ್ವಕವಾಗಿ ಚಿಕಿತ್ಸೆಗೊಳಗಾದಾಗಲೇ ಚಿಕಿತ್ಸೆ ಯಶಸ್ವಿಯಾಗುವುದು. ಒಟ್ಟಿನಲ್ಲಿ ನಾಲ್ಕನೆ ಭೇಟಿಯ ಹೊತ್ತಿಗೆ ರೋಗಿ ಮತ್ತು ಅವಳ ತಂದೆ ನನ್ನ ಚಿಕಿತ್ಸೆಯನ್ನು ಮನಃಪೂರ್ವಕವಾಗಿ ಒಪ್ಪಿಕೊಂಡಿದ್ದರು. ತಂದೆಯನ್ನು ಹೊರಗೆ ಕಳುಹಿಸಿ ರಜನಿಯೊಬ್ಬಳನ್ನೇ ನೋಡಿದೆ. ರಜನಿ ತನಗೇನೂ ಬೇಜಾರಿಲ್ಲ ತಾಯಿಯ ಸಾವಿನ ಬಗ್ಗೆ ಈಗ ದುಃಖವಿಲ್ಲ ಎನ್ನುವಳು. ಮನೆಯಲ್ಲಿ ಎಲ್ಲಾ ಹೇಗಿವೆ ಎಂದು ಕೇಳಿದೆ. ಕೇಳಿದ ಕೂಡಲೇ ರಜನಿಯ ಮುಖ ಕೋಪದಿಂದ ಕೆಂಪೇರಿತು. ಮನೆಯಲ್ಲಿರುವವರನ್ನೆಲ್ಲಾ ಒಂದಲ್ಲ ಒಂದು ರೀತಿಯಲ್ಲಿ ಬೈಯಲು ಮೊದಲು ಮಾಡಿದಳು. ಊಟ ಮಾಡುವುದಕ್ಕೆ ಬರಲು ತಡಮಾಡಿದರೆ ಅಜ್ಜಿ ಬೈಯುವರು; ಚಿಕ್ಕಮ್ಮ [ತಂದೆಯ ತಮ್ಮನ ಪತ್ನಿ] ತಮ್ಮ ಮಕ್ಕಳನ್ನು ಮುದ್ದು ಮಾಡುವಷ್ಟು ತನ್ನನ್ನು ಮತ್ತು ತನ್ನ ತಂಗಿಯನ್ನು ಮುದ್ದು ಮಾಡುವುದಿಲ್ಲ; ತನ್ನ ಅಕ್ಕಂದಿರು ಎಲ್ಲದಕ್ಕೂ ಹಠ ಮಾಡುತ್ತೀಯಲ್ಲೇ ಎಂದು ಬೈಯುವರು, ಇತ್ಯಾದಿ. ಅವಳ ಪ್ರಕಾರ ತಂದೆ ಮಾತ್ರ ಅವಳನ್ನು ಪ್ರೀತಿಯಿಂದ ನೋಡುತ್ತಿದ್ದರು. ಅವರು ಬೆಳಿಗ್ಗೆ ಅಂಗಡಿಗೆ ಹೋದರೆ ಬರುತ್ತಿದ್ದುದು ರಾತ್ರಿಯೇ. ರಜನಿ ಸ್ವಭಾವತಃ ಹೆಚ್ಚು ಮಾತಿನವಳು. ಸುಮಾರು ಹದಿನೈದು ನಿಮಿಷ ಎಲ್ಲರನ್ನೂ ದೂರಿದಳು.

ಕೆಲವೊಮ್ಮೆ ತನ್ನನ್ನು ಯಾರಾದರೂ ಬೈದರೆ ಈ ನೋವುಗಳು ಬರುವುದೆಂದು ತಾನೇ ತಿಳಿಸಿದಳು. ತನ್ನ ನೋವುಗಳ ಬಗ್ಗೆಯೂ ಬಹಳ ಮಾತನಾಡಿದ್ದಳು. ಮುಂದಿನ ಭೇಟಿಯಲ್ಲಿ ಬಂದವಳೇ ಒಂದು ವಾರದಲ್ಲಿ ಮನೆಯಲ್ಲಿ ಎಲ್ಲರೂ ಅವಳನ್ನು ಬೈಯುವವರೇ ಎಂದು ಮತ್ತೆ ಹೇಳಿದಳು. ಅವಳದು ಬಹಳ ಹಠದ ಸ್ವಭಾವ. ಎಲ್ಲವೂ ತಾನೆಣಿಸಿದಂತೆಯೇ ಆಗಬೇಕು. ಯಾರಾದರೂ ಏನಾದರೂ ಅಂದರೆ ಊಟವನ್ನೇ ಬಿಡುವುದು ಮತ್ತು ಅತ್ತು ರಂಪ ಮಾಡುವುದು ಸಾಮಾನ್ಯ. ತಂದೆಯ ಪ್ರಕಾರ ಮನೆಯಲ್ಲಿ ಎಲ್ಲರಿಗೂ ರಜನಿಯನ್ನು ಕಂಡರೆ ಪ್ರೀತಿ. ಆದರೂ ಅವರನ್ನೆಲ್ಲಾ ಕಂಡರೆ ಅವಳೇಕೆ ಉರಿದು ಬೀಳುವಳೋ ಅವರಿಗೆ ತಿಳಿಯದು. ಮನೆಯಲ್ಲಿ ಎಲ್ಲರೂ ಅವಳನ್ನು ರಮಿಸಿ ಸಮಾಧಾನ ಮಾಡಲು ಪ್ರಯತ್ನಿಸಿ ವಿಫಲರಾದಾಗ ಬೇಸರದಿಂದ ಏನೋ ಅಂದರೆ ಅದನ್ನೇ ದೊಡ್ಡದು ಮಾಡಿ ಎಲ್ಲರಿಗೂ ಸಾಕು ಸಾಕು ಎನ್ನಿಸಿಬಿಡುವಳು. ಅವಳು ಮೊದಲು ಈ ರೀತಿ ಇರಲಿಲ್ಲ. ಈ ಕಾಯಿಲೆ ಪ್ರಾರಂಭವಾದಾಗಿನಿಂದ ಮಾತ್ರ ಈ ರೀತಿ ಮಾಡುತ್ತಾಳೆ. ಒಂದು ದಿನ ಅವಳ ಅಜ್ಜಿ ಊಟಕ್ಕೆ ಬಡಿಸುತ್ತಿದ್ದರು. ಅವಳಿಗೆ ಬೇಕಾದುದಕ್ಕಿಂತ ಸ್ವಲ್ಪ ಹೆಚ್ಚು ಅನ್ನ ಬಡಿಸಿಬಿಟ್ಟರು. ರಜನಿಗೆ ಕೋಪ ಬಂದಿತು. ತನಗೆಷ್ಟು ಬೇಕೋ ಅಷ್ಟು ಮಾತ್ರ ತಿಂದು ಉಳಿದುದನ್ನು ಬಿಡಲು ಅಜ್ಜಿ ಹೇಳಿದರೂ ಅವಳ ಕೋಪ ಮಾತ್ರ ಕಡಿಮೆಯಾಗಲಿಲ್ಲ. ತನಗೆ ಊಟವೇ ಬೇಡವೆಂದಳು. ಅವಳ ಅಜ್ಜಿ ಎಷ್ಟು ಕೇಳಿಕೊಂಡರೂ ಕೋಪ ಕಡಿಮೆಯಾಗಲೇ ಇಲ್ಲ. ಕಡೆಗೆ ಇಷ್ಟು ಸಣ್ಣ ವಿಷಯಕ್ಕೆಲ್ಲಾ ಸಿಟ್ಟು ಮಾಡಿಕೊಂಡು ಊಟ ಮಾಡದಿದ್ದರೆ ಕಾಯಿಲೆ ಹೇಗೆ ವಾಸಿಯಾಗುತ್ತೆ? ಎಂದು ಒಂದು ಮಾತು ಹೇಳಿದರು. ಅದಕ್ಕೆ ನನ್ನ ತಾಯಿ ಇದ್ದಾಗ ಈ ರೀತಿ ಆಗುತ್ತಿರಲಿಲ್ಲ. ನನ್ನ ಪಕ್ಕದಲ್ಲಿ ಕುಳಿತು ತಿನ್ನಿಸುತ್ತಿದ್ದರು, ಎಂದು ದೊಡ್ಡ ರಂಪವನ್ನೇ ಮಾಡಿದಳು! ತನ್ನ ಮೇಲೆ ಅಜ್ಜಿಗೆ ಬಹಳ ಪ್ರೀತಿ ಎಂದು ರಜನಿಯೇ ಒಪ್ಪಿಕೊಳ್ಳುವಳು.

ಇನ್ನೊಂದು ಬಾರಿ ಅವಳ ಅಕ್ಕ ಕಾಲೇಜಿಗೆ ಹೋಗುವ ಅವಸರದಲ್ಲಿ ರಜನಿಗೆ ಜಡೆ ಹಣೆಯಲು ಮರೆತಳು. ಅದೇ ಒಂದು ದೊಡ್ಡ ರಾದ್ಧಾಂತವಾಯಿತು. ಆ ಅಕ್ಕನನ್ನು ಕಂಡರೆ ರಜನಿಗೆ ಬಹಳ ಪ್ರೀತಿ. ಯಾಕೆ ಈ ರೀತಿ ಎಲ್ಲರಿಗೂ ಸಾಕುಮಾಡಿಬಿಡುವಳೆಂದು ಕೇಳಿದರೆ ರಜನಿಗೇ ತಿಳಿಯದು. ತಾನು ಈ ರೀತಿ ಮಾಡುತ್ತಿದ್ದೇನಲ್ಲಾ ಎಂದು ಅವಳಿಗೇ ಬೇಸರವಾಯಿತು. "ಏನೋ ಸಾರ್, ನಮ್ಮ ತಾಯಿ ಇದ್ದಾಗ ಈ ರೀತಿ ಎಲ್ಲಾ ಆಗುತ್ತಲೇ ಇರಲಿಲ್ಲ. ನನ್ನ ತಾಯಿ ಮಾಡಿದಂತೆ ಇವರಾರಿಗೂ

ಹೋಗಲು ಬರುವುದಿಲ್ಲ" ಎಂದು ಅಳಲು ಮೊದಲು ಮಾಡಿದಳು. ಒಂದು ನಿಮಿಷ ಅತ್ತವಳೇ ಕೂಡಲೇ ಕರ್ಚೀಫಿನಿಂದ ನೀಟಾಗಿ ಕಣ್ಣೊರೆಸಿಕೊಂಡಳು. ಅದೆಷ್ಟು ನೀಟಾಗಿ ಕಣ್ಣೊರೆಸಿದ್ದಳೆಂದರೆ ಅವಳು ಅತ್ತಿದ್ದಳೆಂದೂ ತಿಳಿಯುತ್ತಿರಲಿಲ್ಲ.

ಕಾನ್ವೆಂಟಿಗೆ ಹೋಗುತ್ತಿದ್ದ ಹುಡುಗಿಯಾಗಿದ್ದರಿಂದ ಆಂಗ್ಲ ಪದಗಳನ್ನು ಚೆನ್ನಾಗಿಯೇ ಉಪಯೋಗಿಸುತ್ತಿದ್ದಳು. "ಸಾರಿ ಸರ್, ಇನ್ಮೇಲೆ ನಾನು ಅಳೋಲ್ಲ," ಎಂದಳು. ಅಳುವುದರಲ್ಲೇನು ತಪ್ಪೆಂದು ತಿಳಿಯಲು ಪ್ರಯತ್ನಿಸಿದೆ. ತಾಯಿಯ ಜ್ಞಾಪಕ ಬಂದಾಗ ಅಳು ಬರುವುದೆಂದೂ ಆಗ ಎಲ್ಲರೂ ತನಗೆ ಅಳಕೂಡದೆಂದೂ ಸಮಾಧಾನ ಪಡಿಸುವರೆಂದೂ ತಿಳಿಸಿದಳು. "ನಿನ್ನ ತಂಗಿ ನಿನ್ನಿಂತ ಚಿಕ್ಕವಳು ನಿನ್ನ ಹಾಗೆ ಅಷ್ಟೊಂದು ಅಳುತ್ತಾಳೆಯೋ ನೋಡು" ಎಂದೂ ಹೋಲಿಸುವರು. "ಜಾಸ್ತಿ ಅತ್ತರೆ ನಂಜಾಗುವುದು" ಎಂದು ಅಜ್ಜ ಗದರಿಕೊಳ್ಳುವರು. ತಂದೆಯ ಮುಂದೆ ಅತ್ತರೆ ಅವಳ ಜೊತೆಗೆ ಅವರೂ ಅಳುವರು. ಅವರು ಅಳುವುದನ್ನು ನೋಡಲು ರಜನಿಗೇ ಬೇಜಾರು. ಆದುದರಿಂದ ಅವರ ಮುಂದೆ ಅಳುವುದಿಲ್ಲ. ಕೆಲವೊಮ್ಮೆ ರಾತ್ರಿ ಎಲ್ಲರೂ ಮಲಗಿದ ಮೇಲೆ ತನ್ನಷ್ಟಕ್ಕೆ ತಾನೇ ದುಃಖ ತಡೆಯಲಾರದೆ ಅಳುವಳು. ಅಳುವನ್ನು ತಡೆ ಹಿಡಿಯಕೂಡದೆಂದೂ ಮತ್ತು ಮನಸ್ಸಿಗೆ ತೃಪ್ತಿಯಾಗುವಷ್ಟು ಅಳಲು ಉತ್ತೇಜಿಸಿದೆ. ರಜನಿಯ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯಿತು. ಅವಳಿಗೇನಾದರೂ ಸರಿಯಿಲ್ಲದಿದ್ದಲ್ಲಿ ತಾಯಿ ರಾತ್ರಿಯೆಲ್ಲಾ ತಮ್ಮ ಪಕ್ಕದಲ್ಲೇ ಮಲಗಿಸಿಕೊಂಡು ನೋಡಿಕೊಳ್ಳುತ್ತಿದ್ದರು. ಇಷ್ಟಲ್ಲದೇ ಊಟ, ತಿಂಡಿ, ಬಟ್ಟೆ, ಆಟ, ಪಾಠ ಮುಂತಾದ ಎಲ್ಲ ವಿಷಯಗಳಲ್ಲೂ ಅವಳ ಅವಶ್ಯಕತೆಯನ್ನರಿತು ಅವಳಿಗೇನು ಬೇಕೋ ಅದನ್ನು ಒದಗಿಸುವುದರಲ್ಲಿ ತಾಯಿ ಎತ್ತಿದ ಕೈ. ಈಗ ಎಲ್ಲರೂ ಅವಳನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದರೂ ಅವಳ ತಾಯಿಯ ಹಾಗೆ ನೋಡಿಕೊಳ್ಳುತ್ತಿರಲಿಲ್ಲ. ತಾಯಿಯನ್ನು ಕಳೆದುಕೊಂಡಿರುವ ತಬ್ಬಲಿಯೆಂದು ಮನೆಯವರೆಲ್ಲ ಇತರರಿಗಿಂತ ಸ್ವಲ್ಪ ಹೆಚ್ಚಾದ ಪ್ರೀತಿಯಿಂದಲೇ ನೋಡಿಕೊಳ್ಳುತ್ತಿದ್ದರು. ಆದರೆ ತಾಯಿಯ ಸ್ಥಾನವನ್ನು ತುಂಬಲು ಸಾಧ್ಯವೇ? ತಂದೆಯನ್ನು ಒಳಗೆ ಕರೆದು ರಜನಿಗೆ ಅಳು ಬಂದಾಗ ತಡೆಯಲು ಪ್ರಯತ್ನಿಸಬಾರದೆಂದು ತಿಳಿಸಿದೆ. "ಅವಳು ಅಳುವುದನ್ನು ನೋಡಿದ ಕೂಡಲೆ ನನಗೂ ವಿಪರೀತ ಅಳು ಬರುತ್ತದೆ, ಏನು ಮಾಡಲಿ ಸಾರ್?" ಎಂದು ಅವರೇ ಅಳಲು ಮೊದಲು ಮಾಡಿದರು. ಇಬ್ಬರೂ ದುಃಖ ತೋಡಿಕೊಂಡು ಅಳುವುದರಲ್ಲಿ ತಪ್ಪೇನು ? ರಜನಿಯ ತಂದೆಗೆ ತಾವೇ ಮಕ್ಕಳ ಮುಂದೆ ಅತ್ತುಬಿಟ್ಟರೆ ಮಕ್ಕಳು ಧೃತಿಗೆಡುವರೆಂಬ ಭೀತಿ. ಈ ತರಹ ಭೀತಿಯ ಬಗ್ಗೆ ನಾವು ಕೇಳುವುದು ಸರ್ವೇ ಸಾಮಾನ್ಯ. ಇಂತಹ ಕಲ್ಪನೆಗಳು ತಪ್ಪು. ನಮ್ಮ ನೈಜ ಭಾವನೆಗಳನ್ನು ಹೊರಗೆಡುವುದರಿಂದ ಮಕ್ಕಳು ಧೃತಿಗೆಡುವುದಿಲ್ಲ. ಮಕ್ಕಳಿಗೂ ತಂದೆತಾಯಿಯರೂ ಎಲ್ಲ ಮಾನವರಂತೆಯೇ ಎಂಬ ಭಾವನೆ ಮೂಡುವುದರಿಂದ ಅವರ ಮಾನಸಿಕ ಬೆಳವಣಿಗೆ ಹಿತಕರವಾಗಿರುವುದು. ನಾವು ಅತ್ಯಂತ 'ಧೈರ್ಯಶಾಲಿಗಳು ಮತ್ತು ಯಾವ ಸಂದರ್ಭದಲ್ಲೂ ಧೈರ್ಯಗೆಡುವುದಿಲ್ಲ ಎಂಬ ಸುಳ್ಳನ್ನು ಬಿತ್ತುವುದರಿಂದ ಹಾನಿಯುಂಟಾಗಬಹುದು. ಆದರೆ ನಮಗೆ ಎಷ್ಟೇ ದುಃಖ ವಾದರೂ ನಾವು ಕಷ್ಟಪಟ್ಟು ಎದುರಿಸುತ್ತೇವೆ ಎಂಬುವುದನ್ನು ತೋರಿಸಿದರೆ ಮಕ್ಕಳಿಗೆ ಅದಕ್ಕಿಂತ ಧೈರ್ಯ ಬೇರೊಂದಿಲ್ಲ.

ಮುಂದಿನ ಭೇಟಿಯಲ್ಲಿ ರಜನಿಯನ್ನು ನೋಡಿ ದಂಗಾದೆನು. ನೀಟಾಗಿ ಹೆಣೆದ ಜಡೆ ಶುಭ್ರವಾದ ಮುಖ ಮತ್ತು ನಾಜೂಕಾಗಿ ಬಟ್ಟೆಯನ್ನು ಧರಿಸಿದ್ದ ರಜನಿಯಲ್ಲಿ ಬಹಳಷ್ಟು ಮಾರ್ಪಾಡು. ಇದಲ್ಲದೆ ಸಿಡುಕು ಮುಖದ ಬದಲು ನಗುಮುಖ. ಮೊದಲ ಬಾರಿಗೆ ತನ್ನ ನೋವುಗಳೆಲ್ಲಾ ಕಡಿಮೆಯಾಗಿವೆಯೆಂದು ಹೇಳಿದಳು. ಈ ಭೇಟಿಯ ಪೂರ್ತಿ ತನ್ನ ತಾಯಿ ಯಾವ ರೀತಿ ನೋಡಿಕೊಳ್ಳುತ್ತಿದ್ದರು, ಎಂದು ವರ್ಣಿಸುವುದರಲ್ಲೇ ಕಳೆದಳು. ಮಧ್ಯೆ ಆಗಾಗ ಅಳುವಳು. ಆದರೆ ಹಿಂದಿನ ಭೇಟಿಯಲ್ಲಿದ್ದ

ಕ್ಕಿಂತ ಈಗ ಅಳು ಕಡಿಮೆ. ಮತ್ತೆರಡು ಭೇಟಿಗಳಾದವು. ಅವಳ ತೊಂದರೆಗಳೆಲ್ಲಾ ಸುಮಾರಾಗಿ ಕಡಿಮೆಯಾದವು. ದಿನಕ್ಕೆ ಎಂಟ್ಹತ್ತು ಬಾರಿ ಬರುತ್ತಿದ್ದ ನೋವು ಈಗ ಕೇವಲ ಮೂರ್ನಾಲ್ಕು ಬಾರಿ ಬರುವುದು. ಮೊದಲು ನೋವು ಬಂದರೆ ಒಂದೊಂದು ಬಾರಿಯೂ ಸುಮಾರು ೩೦ ನಿಮಿಷಗಳಿರುತ್ತಿತ್ತು. ಈಗ ಅದು ಹತ್ತು ನಿಮಿಷಕ್ಕೆ ಇಳಿಯಿತು. ಆದರೆ ನೋವು ಮಾತ್ರ ಮೊದಲು ಎಷ್ಟು ಜೋರಾಗಿ ಬರುತ್ತಿತ್ತೋ ಈಗಲೂ ಅಷ್ಟೇ ಜೋರಾಗಿ ಬರುವುದು. ರಜನಿಗೆ ತಾಯಿಯ ಸಾವಿನಿಂದ ಅವಳು ತಿಳಿದುಕೊಂಡಿರುವುದಕ್ಕಿಂತಲೂ ಹೆಚ್ಚು ಬೇಸರವಾಗಿದೆಯೆಂದು ಮತ್ತು ಆ ಬೇಸರವನ್ನು ಎಲ್ಲರ ಮೇಲೂ ತಿರಿಸಿಕೊಳ್ಳುತ್ತಿರುವೆನೆಂದು ಅವಳೇ ಒಪ್ಪಿಕೊಂಡಳು. ತಾಯಿಯ ವಿಷಯ ಬಂದಾಗ ಅಳುವುದು ಕಡಿಮೆಯಾಯಿತಾದರೂ ನಿಲ್ಲಲಿಲ್ಲ.

ತಾಯಿಯ ಸಾವನ್ನು ಅವಳು ಒಂದು ರೀತಿಯಲ್ಲಿ ಒಪ್ಪಿಕೊಂಡಿರಲಿಲ್ಲ. ತಾಯಿಯ ಸ್ಥಾನವನ್ನು ಅಜ್ಜಿ, ಚಿಕ್ಕಮ್ಮ, ಅಕ್ಕ ಇತ್ಯಾದಿ ಯಾರಾದರೂ ತುಂಬಲೆಂದು ಎದುರು ನೋಡುತ್ತಿದ್ದಳು. ಬೇರೆ ಇನ್ನಾರಾದರೂ ತಾಯಿಯಾಗಲು ಸಾಧ್ಯವೇ? ಆದರೆ ಚಿಕ್ಕವಳಾದ ರಜನಿಗೆ ತಾಯಿಯ ಅವಶ್ಯಕತೆ ಬಹಳ. ತಾಯಿ ಇಲ್ಲದ ಮಕ್ಕಳನ್ನು ಬೆಳೆಸುವ ತಂದೆ ಮಕ್ಕಳಿಗೆ ತಾನೇ ತಂದೆ ಮತ್ತು ತಾಯಿ ಎಂದು ಹೇಳುವುದನ್ನು ಆಗಾಗ ಕೇಳುತ್ತೇವೆ. ತಂದೆ ಮತ್ತು ತಾಯಿ ಇಬ್ಬರ ಸ್ಥಾನವನ್ನು ಒಬ್ಬರೇ ತುಂಬುವುದು ಅಸಾಧ್ಯ. ತನ್ನಿಚ್ಛೆಯಂತೆ ತಾಯಿಯ ಸ್ಥಾನವನ್ನು ತುಂಬಲು ಇತರರು ಯಾವಾಗ ಅಸಮರ್ಥರಾದರೋ ಆಗ ರಜನಿಗೆ ಎಲ್ಲರ ಮೇಲೂ ಅಸಾಧ್ಯ ಕೋಪ. ಯಾರ ಮೇಲೆ ಕೋಪವಿರುತ್ತದೋ ಆಗ ಅವರು ಏನು ಮಾಡಿದರೂ ತಪ್ಪೇ. ಹಠ ಮಾಡಿದಾಗ ಮತ್ತು ಕೋಪದಿಂದ ಕೂಗಾಡಿದಾಗ ಎಲ್ಲರೂ ಬೈಯುವರು. ಚಿಕ್ಕವಳಾಗಿ ಕೋಪದಿಂದ ದೊಡ್ಡವರನ್ನು ಗೆಲ್ಲಲು ಸಾಧ್ಯವೇ? ಆದರೆ ನೋವುಗಳು ಬಂದರೆ ಎಲ್ಲರೂ ಹಾಹಾರಿ ಅವಳಿಗೇನು ಬೇಕೋ ಅದನ್ನು ಮಾಡುವರು. ಕೇವೊಮ್ಮೆ ಬೈದಾಗ ಈ ನೋವುಗಳು ಬಂದರೆ ಅವಳನ್ನು ಬೈಯದಂತೆ ನೋಡಿಕೊಳ್ಳಲು ತಂದೆ ಆದೇಶವೀಯುತ್ತಿದ್ದರು. ಈ ಕಾಯಿಲೆಯಿಂದ ಎಲ್ಲರ ಗಮನವನ್ನು ರಜನಿ ತನ್ನೆಡೆಗೆ ಸೆಳೆದುಕೊಂಡಿದ್ದಳು. ಅವಳ ಅಪಪ್ರಜ್ಞೆಗೆ ಬೇಕಾದದ್ದೇ ಅದು, ಆದರೆ ಪ್ರಜ್ಞೆಗೆ ತಾನು ಎಲ್ಲರಿಗೂ ಕಷ್ಟ ಕೊಡುತ್ತಿದ್ದೇನಲ್ಲ ಎಂಬ ಬೇಸರ. ಪ್ರಜ್ಞೆ ಮತ್ತು ಅಪಪ್ರಜ್ಞೆಯ ದ್ವಂದ್ವದಿಂದ ಇನ್ನಷ್ಟು ಮಾನಸಿಕ ಅಶಾಂತಿ.

ರಜನಿಯ ತೊಂದರೆ ಕಡಿಮೆಯಾಗಲು ಕಾರಣ ಏನಿರಬಹುದು? ಇದಕ್ಕೆ ಮಾತ್ರೆಗಳೂ ಸ್ವಲ್ಪಮಟ್ಟಿಗೆ ಕಾರಣ. ಆದರೆ ಮಾತ್ರೆಗಳೇನಿದ್ದರೂ ತಾತ್ಕಾಲಿಕ ಪರಿಹಾರ. ಕೇವಲ ಮಾತ್ರೆಗಳ ಮೊರೆ ಹೊಕ್ಕರೆ ಅವುಗಳನ್ನು ಖಾಯಂ ಆಗಿ ತೆಗೆದುಕೊಳ್ಳಬೇಕಾಗುವುದು. ತೊಂದರೆಯ ಮೂಲವನ್ನು ಭೇದಿಸಿ ಅರ್ಥ ಮಾಡಿಕೊಳ್ಳುವುದೇ ಶಾಶ್ವತವಾದ ಚಿಕಿತ್ಸೆ. ಈ ಚಿಕಿತ್ಸಾ ವಿಧಾನವೇ ಮನೋವಿಶ್ಲೇಷಣೆ. [illegible] ಮರೆಯಿಲ್ಲದೆ ಮಾತನಾಡುವುದೇ ಇಲ್ಲಿ [illegible]. ರಜನಿಗೆ ನಾನು ಕೊಟ್ಟಿದ್ದ ಮೊದಲನೆ [illegible] ಭಾವನೆಗಳನ್ನು ತಡೆಹಿಡಿಯದೇ ಹೊರಗೆಡವಬೇಕೆಂಬುದು. ಅದೇ ರೀತಿ ಅವಳು ಮನಃಪೂರ್ವಕವಾಗಿ ಅಳುತ್ತಿದ್ದಳು. ನಾವು ಭಾವನೆಗಳಿಗೆ ಕಡಿವಾಣ ಹಾಕಿದರೆ ಅವು ಒಳಗೊಳಗೇ ಕುದಿಯುತ್ತಿದ್ದು ಅಪಪ್ರಜ್ಞೆಯನ್ನು ಬಲಿಷ್ಠಗೊಳಿಸುವುವು. ಭಾವನೆಗಳನ್ನು ಹೊರಗೆಡವಿದರೆ ಅಪಪ್ರಜ್ಞೆಯ ಬಲ ಕುಂದುವುದು. ರಜನಿ ಚೆನ್ನಾಗಿ ಅತ್ತಿದ್ದರಿಂದ ಅಪಪ್ರಜ್ಞೆಯ ಬಲ ಕಡಿಮೆಯಾಯಿತು. ಅವಳ ಅಪಪ್ರಜ್ಞೆಗೆ ಬೇಕಾದದ್ದು ಮಿಕ್ಕವರೆಲ್ಲರೂ ಅವಳ ತಾಯಿಯ ಸ್ಥಾನವನ್ನು ತುಂಬಬೇಕೆಂಬುದು. ಯಾವಾಗ ಅವಳ ಅಪಪ್ರಜ್ಞೆಯ ಬಲ ಕಡಿಮೆಯಾಯಿತೋ ಆಗ ಅವಳು ಇತರರಿಂದ ಅಪೇಕ್ಷಿಸುತ್ತಿದ್ದುದು ಕಡಿಮೆಯಾಯಿತು. ಇದರಿಂದ ಇತರರೊಡನೆ ಅವಳ ನಡವಳಿಕೆ ಸುಧಾರಿಸಿತು. ಮ[illegible] ವಿಶ್ಲೇಷಣೆಯಲ್ಲಿ ತಾಯಿಯ ಸ್ಥಾನವನ್ನು [illegible]

ತುಂಬಲು ಅಸಾಧ್ಯವೆಂಬ ಮತ್ತು ವಾಸ್ತವ ಪರಿಸ್ಥಿತಿಗೆ ಹೊಂದಿಕೊಳ್ಳಬೇಕೆಂಬ ತಿಳುವಳಿಕೆ ಮೂಡಿತು. ರಜನಿ ಇದನ್ನೆಲ್ಲಾ ಒಪ್ಪಿಕೊಂಡು ಅವಳ ನಡವಳಿಕೆಯಲ್ಲಿ ಬಹಳಷ್ಟು ಮಾರ್ಪಾಡಾಗಿದ್ದರೂ ಕಾಯಿಲೆ ಮಾತ್ರ ಪೂರ್ತಿ ವಾಸಿಯಾಗಲಿಲ್ಲ. ನೋವು ಮುಂತಾದ ತೊಂದರೆಗಳು ಮೊದಲಿನಂತಲ್ಲ ಬಹಳಷ್ಟು ಕಡಿಮೆಯಾಗಿದ್ದರೂ ಇನ್ನೂ ನಿಂತಿರಲಿಲ್ಲ. ಆಗಾಗ್ಗೆ ನೋವು ತಡೆಯಲಸಾಧ್ಯವಾಗುವುದು. ಮನಸ್ಸಿನ ಆತಂಕವನ್ನು ಕಡಿಮೆ ಮಾಡುವ ಮಾತ್ರೆಗಳನ್ನು ಎಷ್ಟೇ ಸೇವಿಸಿದರೂ ಪ್ರಯೋಜನವಾಗಲಿಲ್ಲ. ಮೊದಲಿನಂತೆ ಅಳು ಮುಂತಾದವುಗಳಿಲ್ಲದೇ ಮನೆಯಲ್ಲಿ ಎಲ್ಲರ ಹತ್ತಿರ ಗೆಲುವಾಗಿಯೇ ಇರುವಳು. ತಾಯಿಯ ಅಗಲಿಕೆ ಬಗ್ಗೆ ಆಗಾಗ್ಗೆ ಅತ್ತರೂ ಮೊದಲಿನಷ್ಟಿರಲಿಲ್ಲ. ಅವಳಿಷ್ಟು ಸುಧಾರಿಸಿದರೂ ಅವಳ ತೊಂದರೆ ಪೂರ್ಣವಾಗಿ ಏಕೆ ನಿಲ್ಲಲಿಲ್ಲ?

ಪಾವ್ಲೋವ್ ಎಂಬ ವಿಜ್ಞಾನಿ ಕಂಡೀಶನಿಂಗ್ ಎಂಬ ತತ್ವವನ್ನು ಕಂಡುಹಿಡಿದನು. ಅದರ ಪ್ರಕಾರ ಇಲ್ಲಿಂದ ಒಬ್ಬರು ಅಮೇರಿಕಕ್ಕೆ ಹೋದರು ಎಂದಿಟ್ಟುಕೊಳ್ಳಿರಿ. ನಮ್ಮ ವೇಳೆಗೂ ಮತ್ತು ಅವರ ವೇಳೆಗೂ ಬಹಳ ವ್ಯತ್ಯಾಸವುಂಟು. ಇಲ್ಲಿ ಬೆಳಗಾಗಿದ್ದರೆ ಅಲ್ಲಿ ರಾತ್ರಿ ಮತ್ತು ಅಲ್ಲಿ ಬೆಳಗಾಗಿದ್ದರೆ ಇಲ್ಲಿ ರಾತ್ರಿ. ಅವರು ಈ ವೇಳೆಯ ಬದಲಾವಣೆಗೆ ಹೊಂದಿಕೊಳ್ಳಲು ಕೆಲವು ದಿನಗಳೇ ಹಿಡಿಯಬಹುದು. ಅವರಿಗೆ ಅಲ್ಲಿ ಮಧ್ಯಾಹ್ನವೆಂದು ತಿಳಿದಿದ್ದರೂ ತಡೆಯಲಾರದ ನಿದ್ದೆ ಬರುವುದು ಮತ್ತು ರಾತ್ರಿಯ ಹೊತ್ತು ನಿದ್ದೆ ಬಾರದೆ ಹೊರಳಾಡುವರು. ನಾನು ಮಧ್ಯಾಹ್ನ ನಿದ್ದೆ ಮಾಡಕೂಡದು, ರಾತ್ರಿ ನಿದ್ದೆ ಮಾಡಬೇಕು ಎಂದು ಅವರು ಅನೇಕ ಸಲ ಅಂದುಕೊಂಡರೂ ಅದು ಕೂಡಲೆ ಸರಿಹೋಗುವುದಿಲ್ಲ. ಇದು ಮಾನಸಿಕವಲ್ಲ. ನಮ್ಮ ಶರೀರ ಒಂದು ಕಟ್ಟುಪಾಡಿಗೊಳಪಟ್ಟು ಕ್ರಮಕ್ಕೆ ಹೊಂದಿಕೊಂಡಿರುತ್ತದೆ



ಆದ್ದರಿಂದ ಆ ಸಮಯಕ್ಕೆ ಸರಿಯಾಗಿ ಬೇಡ ವೆಂದರೂ ನಿದ್ದೆ ಬಂದುಬಿಡುವುದು. ಈ ತತ್ವದ ಆಧಾರದ ಮೇಲೆಯೇ ರಜನಿಯ ತೊಂದರೆಯೂ ಅವಲಂಬಿಸಿರುವುದು. ನೋವುಗಳಿಂದ ನರಳಿ ನರಳಿ ಅವಳ ಶರೀರ ನೋವಿನ ಕಟ್ಟುಪಾಡಿಗೇ ಒಗ್ಗಿ ಹೋಗಿತ್ತು. ಇದನ್ನು ಹೋಗಲಾಡಿಸುವುದೆಂತು? ಈ ಚಿಕಿತ್ಸಾ ವಿಧಾನಕ್ಕೆ ಡೀಕಂಡಿಶನಿಂಗ್ ಥೆರಪಿ ಎಂದು ಕರೆಯುತ್ತೇನೆ. ಈ ಚಿಕಿತ್ಸೆಯನ್ನು ಅನೇಕ ರೀತಿಯಲ್ಲಿ ಮಾಡಬಹುದು. ವಿದ್ಯುತ್ ಪ್ರಚೋದನೆ ಒಂದು ವಿಧಾನ. ಇದಕ್ಕೆ ಸೂಕ್ತ ಯಂತ್ರ ಬೇಕು. ಇದು ಸಾಮಾನ್ಯವಾಗಿ ಎಲ್ಲರೂ ತಿಳಿದಂತಹ ಷಾಕ್ ಚಿಕಿತ್ಸೆಯಲ್ಲ. ಈ ಚಿಕಿತ್ಸೆಯಲ್ಲಿ ಯಾವುದೇ ರೀತಿಯ ಅಪಾಯವಿಲ್ಲ. ಇದರಲ್ಲಿ ರೋಗಿಯ ಪ್ರಜ್ಞೆ ತಪ್ಪು ವುದಿಲ್ಲ. ಇದನ್ನು ಕ್ಲಿನಿಕ್ಕಿನಲ್ಲಿ ಮಾಡಬಹುದು. ರೋಗಿಗೆ ಕೊಂಚ ನೋವು ಮಾತ್ರ ಉಂಟಾಗುವು ದನ್ನು ಬಿಟ್ಟರೆ ಇನ್ನಾವ ತೊಂದರೆಯೂ ಆಗುವು ದಿಲ್ಲ. ರಜನಿಯನ್ನು ಸುಮಾರು ಇಪ್ಪತ್ತು ಬಾರಿ ನೋಡಿದ ಅವಧಿಯಲ್ಲಿ ಮೂರು ಬಾರಿ ಡೀಕಂಡೀಶ ನಿಂಗ್ ಚಿಕಿತ್ಸೆಯನ್ನು ಕೊಡಲಾಯಿತು. ತನ್ನ ನೋವುಗಳ ಬಗ್ಗೆಯೇ ಯೋಚಿ ಸುತ್ತಿರಲು ತಿಳಿಸಿ ತಲೆಗೆ ವಿದ್ಯುತ್ ಪ್ರಚೋ ದನೆ ಕೊಟ್ಟೆನು. ರಜನಿಯ ತೊಂದರೆ ಕ್ರಮೇಣ ನಿಂತುಹೋಯಿತು. ಅದು ಕಡಿಮೆಯಾಗುತ್ತಿ ದ್ದಂತೆ ಇಲ್ಲಿಗೆ ಎರಡು ವಾರಕ್ಕೊಮ್ಮೆ ನಂತರ ತಿಂಗಳಿಗೊಮ್ಮೆ ಬರಲು ಹೇಳಿದೆ. ಈಗ ಶಾಲೆಗೂ ಹೋಗುತ್ತಿದ್ದಾಳೆ. ಅಷ್ಟು ದಿನ ಶಾಲೆಗೆ ಹೋಗದಿದ್ದರೂ ಪಾಸಾದಳು. ಈ ವಿಷಯ ತಿಳಿಸಲು ರಜನಿಯ ತಂದೆ ನನ್ನಲ್ಲಿಗೆ ಬಂದಾಗ ಅವರಿಗೆ ಸಂತೋಷದಿಂದ ಕಣ್ಣೀರು ತುಂಬಿ "ಥ್ಯಾಂಕ್ಸ್" ಎಂದು ಹೇಳಲೂ ಅಸಾಧ್ಯ ವಾಯಿತು. ಮನುಷ್ಯನ ಸ್ವಭಾವ ವಿಚಿತ್ರವ ಲ್ಲವೇ? ಚಿಕಿತ್ಸೆಗೆ ಬಂದಾಗಲೂ ಕಣ್ಣೀರು. ಚಿಕಿತ್ಸೆ ಮುಗಿದಾಗಲೂ ಕಣ್ಣೀರು. ಒಂದು ವ್ಯತ್ಯಾ ಸವೆಂದರೆ ಈಗ ಸಂತೋಷದ ಕಣ್ಣೀರು.

ಈ ಕಾಯಿಲೆಗೆ ಸಂತಾಪ ಪ್ರತಿಕ್ರಿಯೆ ಎಂದು ಹೆಸರು. ಈ ರೀತಿಯ ಸಂತಾಪ ಪ್ರತಿಕ್ರಿಯೆ ಜೀವ ನದಲ್ಲಿ ಯಾವುದೇ ರೀತಿಯ ಪೆಟ್ಟು ಬಿದ್ದಾಗ ಆಗುತ್ತದೆ. ಬಹಳ ಆತ್ಮೀಯರಾಗಿರುವವರ ಸಾವು, ಪರೀಕ್ಷೆಯಲ್ಲಿ ಅನುತ್ತೀರ್ಣತೆ, ಉದ್ಯೋಗ ವನ್ನು ಕಳೆದುಕೊಳ್ಳುವುದು ಮುಂತಾದ ಜೀವ ನದ ತೊಡಕುಗಳ ನಂತರ ಇದು ಸಾಮಾನ್ಯ. ನಮ್ಮ ಆತ್ಮೀಯರ ಸಾವಿನಿಂದ ಸಂತಾಪವಾಗು ವುದಿಲ್ಲವೇ? ಸಾಮಾನ್ಯವಾಗಿ ಈ ವ್ಯಸನದ ಅವಧಿ ನಾಲ್ಕರಿಂದ ಆರು ವಾರಗಳು. ಇದು ಆರು ತಿಂಗಳಗಳವರೆವಿಗೂ ಮುಂದುವರಿಯ ಬಹುದು. ರಜನಿಯ ಮನೆಯಲ್ಲಿ ಇತರರೆಲ್ಲರೂ ಈ ದುಃಖದಿಂದ ಚೇತರಿಸಿಕೊಂಡಿದ್ದರೂ ರಜನಿ ಮಾತ್ರ ಚೇತರಿಸಿಕೊಂಡಿರಲಿಲ್ಲ. ಇತರರು ಅವಳು ತನ್ನ ಭಾವನೆಗಳನ್ನು ಹೊರಗೆಡಹಲು ಬಿಟ್ಟಿ ದ್ದರೆ ಅವಳಿಗೆ ಈ ತೊಂದರೆಯಾಗುತ್ತಿರಲಿಲ್ಲ.

ತೀವ್ರವಾದ ದುಃಖವನ್ನು ಅವಳು ಒಳಗಿಟ್ಟು ಕೊಂಡುದೇ ಅವಳ ತೊಂದರೆಗೆ ಕಾರಣ. ರಜ ನಿಯ ತಾಯಿ ಅವಧಿ ಮುಗಿಯುವ ಮುನ್ನವೇ ಸತ್ತಿದ್ದರಿಂದ ದೆವ್ವವಾಗಿ ರಜನಿಯನ್ನು ಕಾಡು ತ್ತಿರಬಹುದೆಂದು ಅದಕ್ಕೇನು ಮಾಡಬೇಕೋ ಅದೆಲ್ಲವನ್ನೂ ಮಾಡಿಸಿದ್ದರು. ಈ ತರಹ ಮೂಢ ನಂಬಿಕೆಯಿಂದ ಯಾರಾರನ್ನೋ ದೂರಿ ಹೊಕ್ಕು ಕಾಯಿಲೆಯನ್ನು ಉಲ್ಬಣಗೊಳಿಸುವುದು ಮಾಮೂಲು. ಶಾರೀರಿಕ ನೋವುಗಳು ಮಾನಸಿಕ ಅಸ್ವಾಸ್ಥ್ಯದಿಂದಲೂ ಉಂಟಾಗಬಹುದು ಎಂಬು ದಕ್ಕೆ ರಜನಿ ಒಳ್ಳೆಯ ಉದಾಹರಣೆ. ★



**ಇತರರ ತಪ್ಪುಗಳ ಕಡೆಗೇ ಹೆಚ್ಚು ನಿಗಾ ಇಡುವ ನಾವು ನಮ್ಮ ತಪ್ಪುಗಳೇನೇ-ನೆಂಬುದನ್ನು ಅರಿವ ಮೊದಲೇ ಸಾವು ಅಪ್ಪಿಕೊಂಡಿರುತ್ತದೆ.**

# ಐದು ಪೈಸೆ

ಜೈಪ್ರಕಾಶ ಬಿ. ಎಸ್.

ಗುರುಮೂರ್ತಿಗೆ ಆ ಐದು ಪೈಸೆ ಸಿಕ್ಕಿದ್ದು ಅಂದು ಬೆಳಿಗ್ಗೆ ಕ್ಯಾಂಟೀನಿನಿಂದ ಆಫೀಸಿಗೆ ಹಿಂದಿರುಗುತ್ತಿದ್ದಾಗ. ಯಾವುದೋ ಗುಂಡಿನಲ್ಲಿದ್ದವ ಕರಿ ಬಣ್ಣಕ್ಕೆ ತಿರುಗಿದ ಆ ನಾಣ್ಯವನ್ನು ಅರಿವಿಲ್ಲದೆಯೋ ಕೈಗೆತ್ತಿಕೊಂಡಿದ್ದ. ಎತ್ತಿಕೊಂಡ ತಕ್ಷಣವೇ, "ಥತ್ ಯಾರದೋ ಕಾಸು. ನಾನ್ಯಾಕೆ ತಗೊಂಡೆ?" ಎಂದುಕೊಂಡವನು ಭಿಕ್ಷುಕನಿಗೆ ಹಾಕಿದರಾಯ್ತು ಎಂದು ಜೇಬಿಗಿಳಿಸಿದ. ಜೇಬಿನಲ್ಲಿದ್ದ ಕಾಗದದ ನೆನಪಾಗಿ ಆಫೀಸಿನ ಕಡೆ ಕಾಲು ಚುರುಕುಮಾಡಿದ್ದ.

ಬೆಳಿಗ್ಗೆ ಯಾರ ಮುಖ ನೋಡಿದನೋ ಗುರು, ಅಂದು ಸಾಹೇಬರು ಎಂದಿಗಿಂತ ಹೆಚ್ಚು ಅಪ್ರಸನ್ನರಾಗಿದ್ದರು. ಯಾವುದೋ ಕಾಗದ ಹುಡುಕಲು ಗುರುವಿಗೆ ಹೇಳಿ, ಐದು ನಿಮಿಷಕ್ಕೊಮ್ಮೆ ತಮ್ಮ ಚೇಂಬರಿನಿಂದ, "ಸಿಕ್ಕಲಿಲ್ಲೇನ್ರಿ?" ಎಂದು ಒದರುತ್ತಿದ್ದರು. ಕಾಗದ ಸಿಕ್ಕಾಗ ಸಾಹೇಬರು ಏನೋ ಅರ್ಜೆಂಟ್ ಕೆಲಸ ಎಂದು ಹೊರಗೆ ಹೋಗಿದ್ದರು. ಒಂದು ಕಪ್ ಚಹಾ ಆದರೂ ಕುಡಿಯೋಣ ಎಂದು ಗುರು ಕ್ಯಾಂಟೀನಿಗೆ ಹೋಗಿದ್ದ.

ಆಫೀಸಿಗೆ ಬಂದಾಗ ಸಾಹೇಬರು ಮತ್ತೆ ತಮ್ಮ ಚೇಂಬರಿನಲ್ಲಿ ಮಂಡಿಸಿದ್ದರು. ಸಹೋದ್ಯೋಗಿಗಳು ಮುಂದೆ ನಡೆಯುವ ತಮಾಷೆ ನೋಡಲು ಸಿದ್ಧರಾದಂತೆ ಕಂಡುಬಂದಿತ್ತು. ಗುರು ಎಂದರೆ 'ಒಳ್ಳೆ ಬಕ್ರಾ' ಎಂದು ಅವರೆಲ್ಲರ ಅಭಿಪ್ರಾಯ. ತಾನಾಯಿತು, ತನ್ನ ಪಾಡಾಯಿತು ಎಂದು ಇರುತ್ತಿದ್ದ ಗುರುಮೂರ್ತಿ ಅವರೆಲ್ಲರಿಂದ ತನ್ನನ್ನೇ ತಾನು ಪ್ರತ್ಯೇಕಿಸಿಕೊಂಡಿದ್ದ. "ಎಲ್ರೀ ಆ ಕಾಗದ?" ಎಂದು ಅರಚುತ್ತಲೇ ಗುರುವನ್ನು ಬರಮಾಡಿಕೊಂಡರು ಸಾಹೇಬರು. ಸಂಬಳ ಬಿಟ್ಟರೆ ಮೇಲೆ ಮೂರು ಕಾಸೂ ಗಿಟ್ಟದ ಆ ಆಫೀಸಿಗೆ ವರ್ಗವಾದಾಗಿನಿಂದ ಸಾಹೇಬರ ಟೆಂಪರು ಒಳ್ಳೆಯದಿಲ್ಲ ಎನ್ನುವುದು ಅವರ ಸಹೋದ್ಯೋಗಿಗೂ ಗೊತ್ತಿದ್ದ ವಿಚಾರ. ಆಫೀಸಿನಲ್ಲಿ ಆ ಸಿಟ್ಟಿಗೆ ಆಹಾರವಾಗುತ್ತಿದ್ದವನು ಗುರು. ಅಗಸ ಮೇರುವ ಹೊರೆಗೆ ಬೆನ್ನು ಕೊಟ್ಟು ನಿಲ್ಲುವ ಕತ್ತೆಯಂತೆ ತಲೆ ತಗ್ಗಿಸಿ ಎದುರು ನಿಲ್ಲುವ ಗುರುವನ್ನು ಕಂಡರೆ ಅವರ ದರ್ಬಾರು ಜೋರಾಗಿ ನಡೆಯುತ್ತಿತ್ತು. ಬೇರೆಯವಂತೆ ಒಂದಿಷ್ಟು ಮೇಲು ಸಂಪಾದನೆಯನ್ನು ತಾನೂ ಪಡೆಯದೆ ಸಾಹೇಬರ ಕಡೆಗೂ ಕಳುಹಿಸದೆ ಗುರು ಅವರ ದೃಷ್ಟಿಯಲ್ಲಿ ಒಬ್ಬ ನಾಲಾಯಕ.

ಅವಸರವಸರವಾಗಿ ಕಾಗದವನ್ನು ತೆಗೆದು ಸಾಹೇಬರ ಮುಂದಿಟ್ಟಾಗ ಫ್ಯಾನ್ ಗಾಳಿಗೆ ಹಾರಿ ಅದು ಕೆಳಗೆ ಬಿದ್ದಿತ್ತು. ಸಾಹೇಬರ ಕ್ರೂರ ದೃಷ್ಟಿಯನ್ನು ತಪ್ಪಿಸುತ್ತಾ ಕೆಳಗೆ ಬಗ್ಗಿ ಕಾಗದ ಎತ್ತಿದಾಗ ಟಣ್ ಎನ್ನುತ್ತಾ ಆ ಹಾಳು ಐದು ಪೈಸೆ ಬಿದ್ದು ಟೇಬಲ್ ಕೆಳಗೆ ನುಸುಳಬೇಕೆ? "ಏನ್ರೀ, ನಿಮ್ಮ ಹುಡುಗಾಟ? ಅದೇನು ಕೇಳಿ

ಸಿದ್ದು ತಕ್ಕೊಳ್ಳಿ," ಎನ್ನುತ್ತಾ ತಮ್ಮ ಕುರ್ಚಿಯನ್ನು ಹಿಂದಕ್ಕೆ ದೂಡಿದರು. ಟೇಬಲ್ ಕೆಳಗೆ ಕೈಹಾಕಿ ತಡವಿದಾಗ ಧೂಳಿನೊಡನೆ ಬಂದ ಐದು ಪೈಸೆ ಗುರುವನ್ನು ಅಣಕಿಸಿತ್ತು. ಸಾಹೇಬರ ಮುಖ ಕೆಂಪಗಾಗಿ, ತಮ್ಮ ಸಿಟ್ಟನ್ನೆಲ್ಲಾ ಗುರುವಿಗೆ ಛೀಮಾರಿ ಹಾಕುವುದರ ಮೂಲಕ ತೀರಿಸಿಕೊಂಡು, ಇನ್ನಷ್ಟು ಕೆಲಸ ಹಚ್ಚಿ ಕಳುಹಿಸಿದ್ದರು. ಒಳಗೆ ನಡೆದದ್ದೆಲ್ಲಾ ತಮಗೆ ತಿಳಿದೇ ಇಲ್ಲವೇನೋ ಎನ್ನುವಂತೆ ಕುಳಿತಿದ್ದ ಸಹೋದ್ಯೋಗಿಗಳ ಕಡೆ ನೋಡದೆ ತನ್ನ ಸ್ಥಾನಕ್ಕೆ ಬಂದಿದ್ದ ಗುರು.

ಆಫೀಸಿನ ವ್ಯವಹಾರ ಮಾಮೂಲಿನಂತೆಯೇ ನಡೆದಿತ್ತು. ಸಾಹೇಬರ ರೂಮಿಗೆ ನಾಲ್ಕು ಬಾರಿ ಕ್ಯಾಂಟೀನಿನ ಹುಡುಗ ಕಾಫಿ ತಂದಿದ್ದ. ಎದುರು ಟೇಬಲ್ಲಿನಲ್ಲಿ ಕೂರುವ ನಾಯ್ಕ ಅರ್ಧ ಘಂಟೆಗೊಮ್ಮೆ ಟೈಪಿಸ್ಟ್ ಮಂಜುಳಾಳ ಟೇಬಲ್ಲಿನ ಬಳಿ ಹೋಗಿ ಅದೇನೋ ಜೋಕು ಹೇಳಿ ನಗಿಸಿ ಬರುತ್ತಿದ್ದ. ಕಿಟಕಿಯ ಬಳಿ ಕೂರುವ ಶಾಸ್ತ್ರಿ ಆಗಾಗ ನಸ್ಯ ಮೂಗಿಗೆ ಏರಿಸುತ್ತಾ ಬಂದವರ ಬಳಿಯೆಲ್ಲಾ ತನ್ನ ತಮ್ಮನಿಗಾದ ಅಪಘಾತದ ವಿವರಣೆ ನೀಡುತ್ತಿದ್ದ. ನಾಲ್ಕು ಗಂಟೆಗೆ ಸರಿಯಾಗಿ ಎಲ್ಲರೂ ಎದ್ದು ಕ್ಯಾಂಟೀನಿನ ಕಡೆ ಕಾಫಿಗೆಂದು ಹೊರಟರು. ತಲೆ ಬಗ್ಗಿಸಿ ಕೆಲಸ ಮಾಡುತ್ತಿದ್ದ ಗುರುವನ್ನು ಯಾರೂ ಕರೆಯಲಿಲ್ಲ. ಬಾಗಿಲವರೆಗೂ ಹೋದ ಮಂಜುಳಾಳಿಗೆ ಕೆಡುಕೆನ್ನಿಸಿರಬೇಕು; ಒಂದು ನಿಮಿಷ ತಡೆದು "ನೀವು ಬರಲ್ಲವೇನ್ರಿ ಚಹಕ್ಕೆ?" ಎಂದು ಕೇಳಿದ್ದಳು. ಕೃತಜ್ಞತೆಯಿಂದ ಅವಳತ್ತ ನೋಡಿ, "ನೀವು ಹೋಗಿ ಬನ್ರಿ; ಇನ್ನು ಸ್ವಲ್ಪ ಕೆಲಸ ಇದೆ." ಎಂದಿದ್ದ ಗುರು. ಇವನಿಗೆ ಬಿಡುವಾಗಿ ಕಾಫಿಗೆಂದು ಹೋದಾಗ ಕ್ಯಾಂಟೀನಿನ ಮುಂದೆ ಕೂಡುವ ರೆಗ್ಯುಲರ್ ಭಿಕ್ಷುಕ ಇರಲೇ ಇಲ್ಲ. ಸರಿಯಾಗಿ ಹತ್ತು ಘಂಟೆಗೆ ಬಂದು ಟವೆಲ್ ಹರಡಿ ಕೂತು ನಾಲ್ಕು ಗಂಟೆಯ ವರೆಗೆ ತನ್ನ ರೆಕಾರ್ಡ್ ಹಾಕುವ ಆ ಭಿಕ್ಷುಕ, ಆ ಮೇಲೆ ತನ್ನ ಗಂಟು ಮೂಟೆಯೊಡನೆ ಬಸ್‌ಸ್ಟ್ಯಾಂಡಿನ ಬಳಿ ತಳವೂರುವ ಟೈಂ ಎಂದರೆ ಟೈಂ ಅವನದು. ನಾಲ್ಕು ಗಂಟೆಯ ನಂತರವೂ ಕ್ಯಾಂಟೀನ್ ಬಳಿ ಓವರ್ ಟೈಂ ಮಾಡಲು ಅವನೇನು ಬಡ ಕಾರಕೂನನೇ? ಆ ಕರಿ ಐದು ಪೈಸೆ ಜೇಬಿನಲ್ಲೇ ಉಳಿಯಿತು. ಸಂಜೆ ಸ್ವಲ್ಪ ಹೊತ್ತಾಗಿಯೇ ಆಫೀಸು ಬಿಟ್ಟ ಗುರು ಬಸ್ ಸ್ಟಾಪ್ ತಲುಪುವ ವೇಳೆಗೆ ಮಳೆ ಹನಿಯುತ್ತಿತ್ತು. ಎದುರಿಗೆ ಯಾವ ಭಿಕ್ಷುಕನೂ ಕಾಣಲಿಲ್ಲ.

ಗುರುಮೂರ್ತಿ ಒಬ್ಬ ವಿಚಿತ್ರ ವ್ಯಕ್ತಿ ಎಂದೇ ಬಹಳ ಜನರ ಅಭಿಪ್ರಾಯ. ಅರ್ಚಕ ವೃತ್ತಿಯಲ್ಲಿದ್ದ ತಂದೆ, ಮನೆ ತುಂಬಿದ್ದ ಮಕ್ಕಳು, ಕಿತ್ತು ತಿನ್ನುವ ಬಡತನದಲ್ಲಿಯೇ ಬೆಳೆದಿದ್ದ ಅವನು. ತಂದೆ ಮಹಾ ಧರ್ಮಭೀರು. ಮಕ್ಕಳಿಗೆ, "ಇನ್ನೊಬ್ಬರ ಸ್ವತ್ತಿಗೆ ಆಸೆಪಡಬಾರದು. ಇನ್ನೊಬ್ಬರ ಋಣ ಇರಬಾರದು. ಋಣ ಜನ್ಮ ಜನ್ಮಗಳಲ್ಲಿ ನಮ್ಮನ್ನು ಕಾಡುತ್ತದೆ," ಎಂದು ಸದಾ ಹೇಳುತ್ತಿದ್ದರು. ಹೇಗೋ ಆ ಬಡತನದಲ್ಲಿಯೇ ಓದಿಕೊಂಡು ಕೆಲಸ ಸಂಪಾದಿಸಿ ತಾನೂ ಒಬ್ಬ ಮನುಷ್ಯನೆನ್ನಿಸಿಕೊಂಡಿದ್ದ ಗುರು. ಬರುವ ಸಂಬಳ ಸಾಕಾಗುತ್ತಿತ್ತು ಎಂದೇನಲ್ಲ. ಆದರೆ ಬಡತನ ಹೊಸದೇನೂ ಆಗಿರಲಿಲ್ಲ. ಹಾಗೆ ನೋಡಿದರೆ, ಅವನ ಬಾಲ್ಯದ ಜೀವನಕ್ಕೆ ಹೋಲಿಸಿದರೆ ಈಗ ಅವನು ಸಾಹುಕಾರನೇ! ಮದುವೆಯೂ ಆಗಿ ಮಕ್ಕಳು ಮನೆ ತುಂಬಿದಾಗಲೂ ಅವನು ಎಂದೂ ಹಣಕಾಸಿನ ಬಗ್ಗೆ ಆಸೆ ಪಟ್ಟವನೇ ಅಲ್ಲ. ಅವನ ಹೆಂಡತಿಯೂ ಬಡವರ ಮನೆಯವಳೆ. ಪಟ್ಟಣದಲ್ಲಿ ಆಫೀಸಿನಲ್ಲಿ ಕೆಲಸ ಮಾಡುವವ, ಕೈತುಂಬಾ ಸಂಪಾದಿಸಬಹುದು ಎಂಬ ಅವಳ ಕಲ್ಪನೆ ಎಂದೋ ಕರಗಿಹೋಗಿತ್ತು. ತನ್ನ ಗಂಡನನ್ನು ಅರ್ಥ ಮಾಡಿಕೊಳ್ಳಲು ಹೆಣಗಿ ಬದುಕುವ ದಾರಿ ಗೊತ್ತಿದ್ದವ ಎಂದು ಸುಮ್ಮನಾಗಿದ್ದಳು. ಇನ್ನೊಬ್ಬರ ಒಂದು ಕಾಸನ್ನೂ ಮುಟ್ಟದ ಗುರುವಿನ ನಡವಳಿಕೆಯಿಂದ ಒಮ್ಮೊಮ್ಮೆ ಅವಳ ಮೈ ಉರಿಯುತ್ತಿತ್ತು. ಲೋಕದ ರೀತಿ ನೀತಿ ವ್ಯವಹಾರಗಳನ್ನೆಲ್ಲಾ ನೋಡುತ್ತಿದ್ದ ಅವಳು, "ನಿಮ್ಮ ಮ



ಶ್ಚಂದ್ರನ ಮೊಮ್ಮಗ, ಆ ಗಾಂಧೀ ಮಹಾತ್ಮನ ಶಿಷ್ಯ ಅನ್ನಿಸ್ಕೊಬೇಕೇನ್ರಿ ನೀವು," ಎಂದು ರೇಗುವಳು. ಗುರು ಯಾವುದನ್ನೂ ಕಿವಿಯ ಮೇಲೆ ಹಾಕಿಕೊಳ್ಳುತ್ತಿರಲಿಲ್ಲ. ಒಮ್ಮೆ ಅವನ ತಮ್ಮನೊಬ್ಬ ಒಂದು ಸಾವಿರ ರೂಪಾಯಿ ಗುರುವಿನ ಕೈಗೆ ಕೊಟ್ಟು, "ನಾಳೆ ತೆಗೆದುಕೊಳ್ಳುತ್ತೇನೆ," ಎಂದು ಹೇಳಿ ಹೋಗಿದ್ದ. ಅಂದೆಲ್ಲಾ ಗುರುವಿಗೆ ನೆಮ್ಮದಿಯೇ ಇಲ್ಲ. ಕಪಾಟಿನಲ್ಲಿಟ್ಟು ಬೀಗ ಹಾಕಿದ್ದರೂ ಭಯ. ರಾತ್ರಿಯೆಲ್ಲಾ ಎದ್ದು ಎದ್ದು, ಎಲ್ಲಾ ಸರಿಯಾಗಿದೆಯೇ ಎಂದು ನೋಡುವ. ಅಕಸ್ಮಾತ್ ಏನಾದರೂ ಆದರೆ ಏನಪ್ಪಾ ಗತಿ ದೇವರೇ ಎಂದು ಒದ್ದಾಡಿದ್ದ. ಮೂರನೆಯ ದಿನ ತಮ್ಮ ಬಾರದಿದ್ದಾಗ ಗುರು ಗಾಬರಿಗೊಂಡಿದ್ದ. ಎರಡು ದಿನಗಳ ನಂತರ ತಮ್ಮ ಬರುವ ವೇಳೆಗೆ ಗುರುವಿಗೆ ಜ್ವರವೇ ಬಂದ ಹಾಗಾಗಿತ್ತು. ಇವರ ಆತಂಕ, ಗಾಬರಿ ನೋಡಿದರೆ ಅವನ ಹೆಂಡತಿಗೆ ಇವನೊಬ್ಬ ಅರೆಹುಚ್ಚ ಎನ್ನಿಸುತ್ತಿದ್ದ.

"ಇನ್ನು ಯಾರಿಗ್ರೀ ಟಿಕೆಟ್ ಬರಬೇಕು?" ಎನ್ನುತ್ತಾ ಕಂಡಕ್ಟರ್ ಬಂದಾಗ ಚಿಲ್ಲರೆಗೆ ತಡಕಾಡಿದ ಗುರು. ಇಪ್ಪತ್ತೈದು ಪೈಸೆ ಟಿಕೆಟ್ಟಿಗೆ ಚಿಲ್ಲರೆ ಇದ್ದದ್ದು ಇಪ್ಪತ್ತೇ ಪೈಸೆ. ಆ ಕರಿ ಐದು ಪೈಸೆಯು ನೆನಪಾದರೂ, ಅದು ಭಿಕ್ಷುಕನಿಗೆ ಕೊಡಬೇಕಾದ್ದು ಎಂದುಕೊಂಡು ತನ್ನ ಜೀರ್ಣವಾಗಿದ್ದ ಪರ್ಸಿನಿಂದ ಎರಡು ರೂಪಾಯಿಯ ನೋಟು ಕೊಟ್ಟಿದ್ದ. "ಚಿಲ್ಲರೆ ಇಲ್ಲವೇನ್ರಿ?" ಎನ್ನುತ್ತಾ ಬೇಸರದಿಂದಲೇ ಟಿಕೆಟ್ ಹರಿದು ಅದರ ಹಿಂದೆ ೧–೭೫ ಎಂದು ಬರೆದು ಕೊಟ್ಟಿದ್ದ ಕಂಡಕ್ಟರ್. ಬಸ್ ಇವನ ಸ್ಟಾಪಿಗೆ ಬಂದಾಗ ಮಳೆ ಜೋರಾಗಿ ಬೀಳುತ್ತಿತ್ತು. ಹೊರಗೆ ನಿಂತವರಿಗೆ ಒಳಗೆ ನುಗ್ಗುವ ಅವಸರ. "ಇಳೀರ್ರಿ ಬೇಗ ಬೇಗ; "ಸ್ವಲ್ಪ ಇಳಿಯೋರಿಗೆ ಜಾಗ ಬಿಡ್ರಿ" ಎಂದು ಅಸಹನೆಯಿಂದ ಕಂಡಕ್ಟರ್ ಕೂಗು ಹಾಕುತ್ತಲೇ ಇದ್ದ. ಓಡುತ್ತ ಓಡುತ್ತಲೇ ಮಳೆಯಲ್ಲಿ ಮನೆ ತಲುಪಿದ ಮೇಲೆ ಗುರುವಿಗೆ ತಾನು ಚಿಲ್ಲರೆ ತೆಗೆದುಕೊಳ್ಳದಿದ್ದದ್ದು ನೆನಪಿಗೆ ಬಂದಿತು. "ನೆನೆಸಿಕೊಂಡೇ ಬರಬೇಕ

ಮನೆಗೆ? ಅಲ್ಲಿಯಾದರೂ ಸ್ವಲ್ಪ ನಿಲ್ಲಬಾರದಾಗಿತ್ತೆ? ನಿಮ್ಮಿಂದಲೇ ನನಗೆ ಈ ತಲೆನೋವು," ಎಂದು ಸ್ವಾಗತಿಸಿದ್ದಳು ಮಡದಿ. ಮಳೆ ಜೋರಾಗಿದ್ದರಿಂದ ಇದ್ದಕ್ಕಿದ್ದಂತೆ ಕರೆಂಟ್ ಹೋಯಿತು. ಕತ್ತಲೆಯಲ್ಲೇ ಶರ್ಟು ತೆಗೆದು ಗೂಟಕ್ಕೆ ನೇತು ಹಾಕಿದ್ದ.

ಮರುದಿನ ಆಫೀಸಿಗೆ ಹೋದವನಿಗೆ ಕಾಫಿಗೆಂದು ಕ್ಯಾಂಟೀನಿಗೆ ಹೋಗಿ ಭಿಕ್ಷುಕನನ್ನು ನೋಡಿದಾಗ ತಟ್ಟನೆ ಆ ಐದು ಪೈಸೆಯ ನೆನಪಾಗಿತ್ತು. ಜೇಬಿಗೆ ಕೈಹಾಕಿದಾಗ, ತಾನು ಹಾಕಿಕೊಂಡಿರುವುದು ಬೇರೆ ಶರ್ಟು ಎಂಬುದು ಹೊಳೆದು ತನ್ನನ್ನು ತಾನೇ ಶಪಿಸಿಕೊಂಡಿದ್ದ. ಇವನು ಜೇಬಿಗೆ ಕೈಹಾಕಿದ್ದನ್ನು ನೋಡಿದ ಭಿಕ್ಷುಕ ಇವನತ್ತ ಆಸೆಗಣ್ಣಿನಿಂದ ನೋಡುತ್ತಾ ತನ್ನ ಗಂಟಲವನ್ನೂ ಜೋರು ಮಾಡಿದ್ದ. ಶರ್ಟು ಕೊಳೆಯಾಗಿದೆ ಎಂದು ಹೆಂಡತಿ ಅದನು ಒಗೆಯಲು ಹಾಕಿದ್ದರೆ ಅವಳನ್ನು ಹೇಗೆ ಐದು



"ಏನು? ಹಲ್ಲು ದುರಿಸ್ತೀಯಾ? ಸದ್ಯ, ಮೊದಲು ಉದುರಿಸು ಮಹರಾಯಾ..."

ಪೈಸೆ ಕೇಳುವುದು? ಎಂದು ಗುರು ಯೋಚನಾಮಗ್ನನಾದ. ಆಫೀಸಿನಲ್ಲೆಲ್ಲಾ ಅದೇ ಯೋಚನೆ. ಸ್ವಲ್ಪ ಬೇಗ ಹೊರಟು ಮನೆಗೆ ಬಂದವನಿಗೆ ಮೊದಲು ಕಣ್ಣಿಗೆ ಬಿದ್ದದ್ದು ಹೊರಗೆ ಹಗ್ಗದ ಮೇಲೆ ಹಾರಾಡುತ್ತಿದ್ದ ಶರ್ಟು. ಒಳಗೆ ಹೋದರೆ ದೊಡ್ಡ ರಾದ್ಧಾಂತವೇ ನಡೆದಂತಿತ್ತು. ಕಡೆಯ ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡಿದ್ದ ಹೆಂಡತಿಯ ಕಣ್ಣು ಅತ್ತು ಅತ್ತು ಊದಿಕೊಂಡಂತಿತ್ತು. ಗಂಡನನ್ನು ನೋಡಿದ್ದೇ ತಡ ಅದುವರೆಗೂ ಅವಳು ತಡೆಹಿಡಿದಿದ್ದ ಗಾಬರಿ ಭಯ ದುಃಖ ಎಲ್ಲಾ ಹೊರ ಹೊಮ್ಮಿತ್ತು. ಮಧ್ಯಾಹ್ನ ಬಟ್ಟೆ ಒಗೆಯಲು ಕೊಟ್ಟಾಗ ಎಲ್ಲೋ ಐದು ಪೈಸೆ ಬಿದ್ದುಬಿಟ್ಟಿತ್ತು. ಮನೆಯಲ್ಲೆಲ್ಲಾ ತೆವಳುತ್ತಿದ್ದ ಚಿಕ್ಕ ಮಗು ಅದನ್ನು ಬಾಯಿಗೆ ಹಾಕಿಕೊಂಡಿತ್ತು. ಉಸಿರು ಕಟ್ಟಿಕೊಂಡು ಒದ್ದಾಡುತ್ತಿದ್ದ ಮಗುವನ್ನು ಕಂಡು ಹೆಂಡತಿಯ ಕೈಕಾಲೇ ಬಿದ್ದುಹೋಗಿತ್ತು. ಕೆಲಸದವಳು ಓಡಿಬಂದು ಮಗುವಿನ ಬಾಯಿಗೆ ಕೈ ಹಾಕಿ ನಾಣ್ಯವನ್ನು ತೆಗೆದಿದ್ದಳು. ಆ ನಾಣ್ಯ ಕಷ್ಟಪಟ್ಟಿದ್ದನ್ನು ನೋಡಿ ಮನಸ್ಸಿಗೆ ಸಮಾಧಾನವಿಲ್ಲದೆ ಡಾಕ್ಟರರ ಬಳಿ ಹೋಗಿದ್ದೂ ಆಗಿತ್ತು.

ಇದನ್ನೆಲ್ಲಾ ಹೆಂಡತಿ ಹೇಳುವಾಗ ಅವಳಿಗೆ ಕಣ್ಣೀರು ಬರುತ್ತಿತ್ತು. ಗುರುವಿಗೆ "ಆ ಐದು ಪೈಸೆಯನ್ನು ಏನು ಮಾಡಿದೆ?" ಎಂದು ಕೇಳುವ ಆತುರ. ಬಹಳ ಕಷ್ಟಪಟ್ಟು ನಾಲಿಗೆ ಬಿಗಿಹಿಡಿದು ಹೆಂಡತಿಗೆ ಸಮಾಧಾನ ಹೇಳಿದ್ದ. ರಾತ್ರಿ ತಡೆಯಲಾರದೆ "ಆ ಕಾಸನ್ನೇನ್ರಿ? ಏನೇ" ಎಂದು ಕೇಳೇಬಿಟ್ಟ. ಕೆಳಗೆ ಬಿದ್ದಿದ್ದ ಪೈಸೆಯನ್ನು ಕೆಲಸದವಳು ಯಾವಾಗಲೂ ಗೂಡಿನಲ್ಲಿರುತ್ತಿದ್ದ ಡಬ್ಬದಲ್ಲಿ ಎಸೆದು ಮುಚ್ಚಳ ಹಾಕಿದ್ದಳು. ಆ ಡಬ್ಬವೊಂದು ಮಹಾಸಾಗರ. ಅದರಲ್ಲಿ ಪಿನ್ನು, ಮೊಳೆ, ಹಳೇ ಬೀಗ, ಹರಿದ ಟೇಪು, ಮುರಿದ ಆಟಿಗೆಗಳು, ಬಣ್ಣ ಬಣ್ಣದ ಬಟನ್‌ಗಳು, ದಾರ ಸೂಜಿ, ಚೀಟಿಗಳು, ಯಾವ ಕಾಯಿಲೆಗೋ ಯಾವಾಗಲೋ ತೆಗೆದುಕೊಂಡು ಉಳಿದಿದ್ದ ಔಷಧಗಳು ಎಲ್ಲಾ ಇರುತ್ತಿತ್ತು. ಅದರಲ್ಲಿ ಐದು ಪೈಸೆ ಮತ್ತೆ ತೆಗೆಯುವುದು ಹೇಗೆ? ಹೆಂಡತಿ

ಯನ್ನು ಕೇಳಿದರಂತೂ ಅವಳಿಗೆ ತಾನು ಹುಚ್ಚೆನೆನ್ನುವುದರಲ್ಲಿ ಯಾವ ಸಂಶಯವೂ ಉಳಿಯುವುದಿಲ್ಲ. ಗುರು ನಿಟ್ಟುಸಿರು ಬಿಟ್ಟ. ಹೆಂಡತಿ ಅವನು ಮಗುವನ್ನು ಕುರಿತು ಚಿಂತಿಸುತ್ತಿರಬಹುದೆಂದು ತಿಳಿದು, "ಹೋಗಲಿ ಬಿಡ್ರಿ, ದೇವರು ದೊಡ್ಡವನು; ಸ್ವಲ್ಪದರಲ್ಲಿ ಪಾರು ಮಾಡಿದ," ಎಂದಿದ್ದಳು. ಆ ರಾತ್ರಿ ಅವನಿಗೆ ಇನ್ನೊಂದು ಸಂಶಯ ಬಂದಿತ್ತು. ತಾನು ಭಿಕ್ಷುಕನಿಗೆ ಹಾಕುತ್ತೇನೆಂದು ಸಂಕಲ್ಪ ಮಾಡಿಕೊಂಡು ಅದನ್ನು ಕಾರ್ಯಗತ ಮಾಡಲಿಲ್ಲವೆಂದೇ ಈ ಅನಾಹುತವಾಯಿತೇ? ಎಂದು. ಹಾಳು ಯಾವ ಪಾಪಿ ಪರದೇಶಿಯ ಹಣವೋ ಅದನ್ನು ಮನೆಗೆ ತಂದು ನನ್ನ ಮಗುವಿನ ಜೀವಕ್ಕೆ ಅಪಾಯ ಮಾಡಿದನೆಲ್ಲಾ ಎಂದು ಕೊರಗಿದ್ದ.

ಮರುದಿನ ಸ್ವಲ್ಪ ಅವಸರದಲ್ಲಿಯೇ ಕೆಲಸಕ್ಕೆ ಹೊರಟವನಿಗೆ, ದಿನವೆಲ್ಲಾ ಆ ಐದು ಪೈಸೆಯ ಚಿಂತೆ. ಏನಾದರೂ ಸರಿ, ಇಂದು ಅದನ್ನು ಪೆಟ್ಟಿಗೆಯಿಂದ ತೆಗೆಯಬೇಕು ಎಂದು ನಿರ್ಧರಿಸಿಕೊಂಡ. ಆ ಸಂಜೆಯಲ್ಲಿ ಹಿಡಿದ ಮಳೆ ಬಿಡಲಿಲ್ಲ. ಮನೆ ಸೇರುವುದೇ ಪ್ರಯಾಸವಾಗಿತ್ತು. ರಾತ್ರಿ ಊಟ ಮಾಡುವಾಗ, "ಕಪ್ಪಾಗಿತ್ತು ಅಂದ್ಯಲ್ಲ, ಎಲ್ಲಿ ತೋರಿಸು ಆ ಪೈಸಾ?" ಎಂದು ಹೆಂಡತಿಗೆ ಸಂಶಯ ಬಾರದಂತೆ ಕೇಳಿದ. ಅವನ ದುರದೃಷ್ಟಕ್ಕೆ ಸಂಜೆ ತಾನೇ ಟೀ ಪುಡಿ ತರಲು ದುಡ್ಡು ಸಾಲದಿದ್ದಾಗ ಡಬ್ಬದಲ್ಲಿ ತಡಕಾಡಿ ಐದು ಪೈಸೆಯನ್ನು ಸೇರಿಸಿ ದೊಡ್ಡ ಮಗಳ ಕೈಲಿ ಶೆಟ್ಟರ ಅಂಗಡಿಗೆ ಕಳುಹಿಸಿದ್ದಳು ಹೆಂಡತಿ. ಹಣ ಎಂದರೆ ಹಣ, ಕಪ್ಪಾದರೇನು, ಬಿಳಿಯಾದರೇನು? ಗುರುವಿಗೆ ಊಟವೇ ಬೇಡವಾಯಿತು. ಬೇಗ ಬೇಗ ಊಟದ ಶಾಸ್ತ್ರ ಮಾಡಿ ಕೈ ತೊಳೆಯುತ್ತಾ, "ಇಲ್ಲೆ ಬರ್ತೀನಿ," ಎಂದು ಹತ್ತಿರದಲ್ಲೇ ಇದ್ದ ಶೆಟ್ಟರ ಅಂಗಡಿಯ ಕಡೆ ಧಾವಿಸಿದ. ಇಷ್ಟು ಹೊತ್ತಿನಲ್ಲಿ, ಇನ್ನೂ ಮಳೆ ಹನಿಯುತ್ತಲೇ ಇರುವಾಗ, ಇವರದೆಂಥ ತಿರುಗಾಟವೋ ಎಂದು ಹೆಂಡತಿ ಗೊಣಗಿದ್ದೂ ಕೇಳಿಸಿತ್ತು. ಆಗಲೇ ಒಂಭತ್ತು ಗಂಟೆಯಾಗುತ್ತಿತ್ತು. ಶೆಟ್ಟರು ಅಂಗಡಿ ಮುಚ್ಚುತ್ತಿದ್ದರು.

ಪ್ರಶ್ನಾರ್ಥಕವಾಗಿ ಇವರ ಕಡೆ ನೋಡಿ ಇವನು ಏನೂ ಹೇಳದಿದ್ದಾಗ ಬೇಗ ಹಾಕುತ್ತಾ, "ಹೊಸದಾಗಿ ಬಂದಿರೋ ಟೀ ಕಳಿಸಿದ್ದೇನೆ—ಸಿಪ್ಪು ಹಾಗು ಕೈಲಿ. ನೋಡಿ ಹೇಗಿದೆಯೋ ಅಂತ," ಎಂದರು. ಲೆಕ್ಕ ಚುಕ್ತಾ ಮಾಡುವ ಬಾಕಿ ಉಳಿಸಿಕೊಳ್ಳದ ಗುರು ಎಂದರೆ ಅವರಿಗೆ ಒಳ್ಳೆಯ ಅಭಿಪ್ರಾಯವಿತ್ತು. ಲೋಕಾಭಿರಾಮವಾಗಿ ಮಾತನಾಡಲು ಶುರು ಮಾಡಿದ ಅವರಿಂದ ತಪ್ಪಿಸಿಕೊಂಡು ಮನೆಗೆ ಬಂದಿದ್ದ ಅವನು. ರಾತ್ರಿಯೆಲ್ಲಾ ವಿಚಿತ್ರ ಕನಸುಗಳು. ಕಣ್ಣು ಮುಚ್ಚಿದರೆ ಆ ಐದು ಪೈಸೆ ಕಾಣುತ್ತಿತ್ತು.

ಸ್ವಲ್ಪ ಹೊತ್ತಾಗಿಯೇ ಎದ್ದು ಕನ್ನಡಿಯಲ್ಲಿ ಮುಖ ನೋಡಿಕೊಂಡಾಗ ಕಣ್ಣೆಲ್ಲಾ ಕೆಂಪಾಗಿ ಊದಿಕೊಂಡಂತೆ ಕಂಡುಬರುತ್ತಿತ್ತು. ಏನಾದರೂ ಸರಿ; ಆ ಐದು ಪೈಸೆಯನ್ನು ತೊಲಗಿಸಬೇಕೆಂದು ನಿರ್ಧರಿಸಿ ಆಫೀಸಿಗೆ ರಜಾಚೀಟಿಯನ್ನು ಬರೆದು ಮನೆಯ ಬಳಿಯೇ ಇದ್ದ ಸಹೋದ್ಯೋಗಿ ಕೇಶವನ ಮನೆಯ ಕಡೆ ಹೊರಟ. ಚೀಟಿ ಕೊಟ್ಟು ಶೆಟ್ಟರ ಅಂಗಡಿಗೆ ಬಂದಾಗ ಅವರು ಇನ್ನೂ ಆಗ ತಾನೇ ಬಾಗಿಲು ತೆರೆದು ಊದುಕಡ್ಡಿ ಹಚ್ಚುತ್ತಿದ್ದರು. ಗುರುವನ್ನು ನೋಡಿ ನೋಡಿ ಒಳಗೆ ಬಂದು ಕೂಡಲು ಕೈಯಲ್ಲೇ ಸನ್ನೆ ಮಾಡಿದರು. ಗುರು ಗಲ್ಲಾಪೆಟ್ಟಿಗೆಯ ಹತ್ತಿರವಿದ್ದ ಮರದ ಬೆಂಚಿನ ಮೇಲೆ ಕುಳಿತ. ದೇವರ ಪಟಕ್ಕೆ ಕಡ್ಡಿ ಬೆಳಗಿ, ಗಲ್ಲಾ ಪೆಟ್ಟಿಗೆಯನ್ನು ತೆರೆದು ಊದು ಕಡ್ಡಿಯನ್ನು ಅಲ್ಲೂ ಆಡಿಸುತ್ತಿದ್ದರು ಶೆಟ್ಟರು. ಎರಡು ಕಣ್ಣುಗಳನ್ನು ಅಗಲಿಸಿ ಅಲ್ಲಿಯೇ ನೋಡುತ್ತಿದ್ದ ಗುರುವಿಗೆ ಆ ಕರಿ ಐದರ ಪೈಸೆ ಚಿಲ್ಲರೆ ಬಟ್ಟಲಿನಲ್ಲಿ ಮೇಲೆ ಇದ್ದದ್ದು ಕಾಣುತ್ತಿತ್ತು. ಗುರು ದೀರ್ಘವಾಗಿ ಉಸಿರು ಬಿಟ್ಟದ್ದು ಶೆಟ್ಟರು ಅವನ ಕಡೆ ತಿರುಗಿ ನೋಡುವಂತೆ ಮಾಡಿತ್ತು. ಸ್ವಲ್ಪ ಒಳಗಾಗಿ ಇದ್ದ ದೇವರ ಪಟದ ಕಡೆ ತಿರುಗಿ ಶೆಟ್ಟರು ಏನೋ ಮೆಲ್ಲನೆ ಪಟಪಟಿಸುತ್ತಿದ್ದರು. ಇದೇ ಸಮಯವೆಂದು ಗುರು ಆ ಐದು ಪೈಸೆಯನ್ನು ತೆಗೆಯಲು ಕೈ ಚಾಚುವುದಕ್ಕೂ ಶೆಟ್ಟರು ಅವನ ಕಡೆ ತಿರುಗುವುದಕ್ಕೂ ಸರಿ ಹೋಯಿತು. "ಹ್ಞೆ ಹ್ಞೆ ಒಂದು ಜಿರಳೆ...ಇಲ್ಲೆ...ಹ್ಞೆ" ಎಂದು ಗುರು ಏನನ್ನೋ ತೆಗೆದು ಬಿಸಾಡುವವನಂತೆ ನಟಿಸಿದ್ದ ಶೆಟ್ಟರಿಗೆ ಇವನ ನಡವಳಿಕೆ ವಿಚಿತ್ರ ಎನಿಸಿ ಊದು ಕಡ್ಡಿ ಕೈಯಲ್ಲಿ ಹಿಡಿದು ಇವನನ್ನೇ ನೋಡುತ್ತಿದ್ದರು. ಹಿಂದಿನಿಂದ, "ಸ್ವಾಮಿ, ತಂದೆ, ಕಣ್ಣಿಲ್ಲ, ದಾನ ಮಾಡಿ," ಎಂದು ಭಿಕ್ಷುಕನೊಬ್ಬ ಕೂಗುವುದು ಕೇಳಿಸಿತು. ಶೆಟ್ಟರ ಕೈ ಗಲ್ಲಾ ಪೆಟ್ಟಿಗೆಗೆ ಹೋಗಿ ಅದೇ ಆ ಕರಿ ಐದು ಪೈಸೆಯನ್ನೇ ತೆಗೆದು ಆ ಭಿಕ್ಷುಕನ ಡಬ್ಬಿಗೆ ಹಾಕಿತ್ತು. ಒಂದು ಕ್ಷಣ ಗುರುವಿಗೆ ಏನಾಯಿತು ಎಂದೇ ತಿಳಿಯಲಿಲ್ಲ.

ಎದೆಯ ಮೇಲೆ ಹೇರಿದ್ದ ಭಾರವೊಂದನ್ನು ಇದ್ದಕ್ಕಿದ್ದಂತೆ ಯಾರೊ ಇಳಿಸಿದಂತೆ ಆಗಿತ್ತು. ಶೆಟ್ಟರು ಊದು ಕಡ್ಡಿಯನ್ನು ಅಕ್ಕಿ ಮೂಟೆಯಲ್ಲಿ ಸಿಕ್ಕಿಸಲು ದೂರ ಸರಿದಾಗ ತನ್ನ ಜೇಬಿನಿಂದ ಐದು ಪೈಸೆಯೊಂದನ್ನು ತೆಗೆದು ಶಬ್ದವಾಗದಂತೆ ಗಲ್ಲಾ ಪೆಟ್ಟಿಗೆಗೆ ಹಾಕಿ ಶೆಟ್ಟರಿಗೆ ಒಂದು ಮಾತೂ ಹೇಳದೆ ಹೊರಬಂದಿದ್ದ. ಇವನು ಹೊರಟದ್ದನ್ನು ನೋಡಿ ಶೆಟ್ಟರೂ ಅಂಗಡಿಯ ಬಾಗಿಲವರೆಗೂ ಬಂದು ಆಶ್ಚರ್ಯದಿಂದ ಇವನನ್ನೇ ನೋಡುತ್ತ ನಿಂತಿದ್ದರು. ಗುರು, ರಜಾ ಚೀಟಿಯನ್ನು ವಾಪಸ್ಸು ಪಡೆಯಲು ಕೇಶವನ ಮನೆಯ ಕಡೆ ಹಗುರವಾದ ಮನಸ್ಸಿನಿಂದ ಹೆಜ್ಜೆ ಹಾಕುತ್ತಿದ್ದ. ಮುಖದಲ್ಲಿ ಏನೋ ಒಂದು ಸಮಾಧಾನ ತೃಪ್ತಿಯ ಕಳೆ ಎದ್ದು ಕಾಣುತ್ತಿತ್ತು. ✡

---

"ನೀವು ಸಿಗಾರ್ ಸೇದೋದಾದ್ರೆ ಉಳಿದ ಪ್ರಯಾಣಿಕರ ಅನುಮತಿ ಪಡೀಬೇಕು." ಎಂದ ಕಂಡಕ್ಟರ್.

"ಹೆಹೆ... ಇಡೀ ಬೋಗಿಯಲ್ಲಿರೋನು ನಾನೊಬ್ನೆ ಅಂದ್ಮೇಲೆ-ಸೇದೋದಕ್ಕೇನು ಅಭ್ಯಂತರ?"

"ಹಾಗಾ! ಹಾಗಾದ್ರೆ ಯಾರಾದ್ರೂ ಬರೋವರೆಗೆ ತಡೀರಿ..."

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. **ಅಮಾನುಷ**
(ಅ) ಅಮಾವಾಸ್ಯೆಯ ರಾತ್ರಿ (ಆ) ಮನುಷ್ಯರಿಗೆ ಸಲ್ಲದ (ಇ) ಮರ್ಯಾದೆ ಇಲ್ಲದ (ಈ) ಒಪ್ಪಲಾರದ

೨. **ಅತಿ ಮಾನುಷ**
(ಅ) ಬಹಳ ದಯೆ (ಆ) ಅಹಂಕಾರಿ (ಇ) ಮನುಷ್ಯನಿಗೆ ಮೀರಿದ (ಈ) ಎಲ್ಲರಿಗೂ ಮಾನ್ಯ

೩. **ಚಿದುಕು**
(ಅ) ಕಲಸು (ಆ) ಚಚ್ಚು (ಇ) ಕೀರಲಾಗಿ ಕೂಗು (ಈ) ಹಿಸುಕು

೪. **ಗೆಯ್ತ**
(ಅ) ದಂಡಿತ (ಆ) ವಿಜಯ (ಇ) ಹಾಡು (ಈ) ಹರಿತ

೫. **ಚಾಲನೆ**
(ಅ) ಉಪಾಯ (ಆ) ಸ್ವಾರ್ಥ (ಇ) ಜಾಳಿಸುವಿಕೆ (ಈ) ಅಲ್ಲಾಡಿಸುವುದು

೬. **ಚಾಲಾಕು**
(ಅ) ಕಿವಿಯ ಆಭರಣ (ಆ) ಸೋದಿಸುವುದು (ಇ) ಚಾತುರ್ಯ (ಈ) ಅಂಗಲಾಚು

೭. **ಬಗರು**
(ಅ) ಅಗಲ ಮಾಡು (ಆ) ಪರಚು (ಇ) ದೋಚು (ಈ) ಪಕ್ಕ

೮. **ಬಂಧಕ**
(ಅ) ಕಟ್ಟುವಂಥಾದ್ದು (ಆ) ಒಂದು ಔಷಧ ಸಸ್ಯ (ಇ) ಸುಂದರ (ಈ) ವ್ಯಭಿಚಾರಿ

೯. **ಗ್ರಾಸ**
(ಅ) ಸ್ವಂತ (ಆ) ಕಸಿದುಕೊಳ್ಳುವುದು (ಇ) ತುತ್ತು (ಈ) ಹುಲ್ಲು

೧೦. **ಠಳಾಯಿಸು**
(ಅ) ಗೊತ್ತುಮಾಡು (ಆ) ಮೋಸ ಮಾಡು (ಇ) ದೂಡು (ಈ) ಅತ್ತಿಂದಿತ್ತ ನಡೆದಾಡು

೧೧. **ಅಭೂತಪೂರ್ವ**
(ಅ) ಹಿಂದೆಂದೂ ಆಗದ್ದು (ಆ) ಇದೀಗ ನಡೆದದ್ದು (ಇ) ಭಯಂಕರ ದೆವ್ವ (ಈ) ಹಳೆಗಾಲದ್ದು

೧೨. **ಮಮಕಾರ**
(ಅ) ದರ್ಪ (ಆ) ತನ್ನದೆಂಬ ಭಾವನೆ (ಇ) ಕಷ್ಟ (ಈ) ಬೇಡ

೧. **ಅಮಾನುಷ** (ಅ) ಮನುಷ್ಯನಿಗೆ ಸಲ್ಲದ, ಅತಿ ದುಷ್ಟ, ಕ್ರೂರ. ಉದಾ:— ಅಮಾನುಷ ಅತ್ಯಾಚಾರ. [ಸಂ. ಅ= ಅಲ್ಲ+ಮಾನುಷ = ಮನುಷ್ಯ ಸಂಬಂಧಿ]

೨. **ಅತಿ ಮಾನುಷ** (ಇ) ಮನುಷ್ಯನಿಗೆ ಮೀರಿದ, ಮನುಷ್ಯನಿಗೆ ಅಸಾಧ್ಯವಾದ. ಉದಾ:— ಅತಿ ಮಾನುಷವಾದ ಧೈರ್ಯ. [ಸಂ. ಅತಿ=ಮೀರಿದ+ಮಾನುಷ]

೩. **ಚಿದುಕು** (ಈ) ಹಿಸುಕು; ಮುಖ್ಯವಾಗಿ ಧಾನ್ಯವನ್ನು ನೀರಲ್ಲಿ ನೆನೆಸಿ ಸಿಪ್ಪೆ ಜಾರುವಂತೆ ಹಿಸುಕು; ಹಾಗೆ ಮಾಡಿದ ಅಕ್ಕಚಿಟ್ಟು. [ಕನ್ನಡ]

೪. **ಗೆಯ್ಮೆ** (ಅ) ದುಡಿತ, ಪರಿಶ್ರಮ. ಉದಾ:— ರೈತರಿಗೆ ಗೆಯ್ಮೆದ ಕೊನೆ ಯೆಂಬುದಿಲ್ಲ. [ದೇಶ್ಯ, ಕೆಯ್, ಗೆಯ್=ಮಾಡು]

೫. **ಚಾಲನೆ** (ಈ) ಅಲ್ಲಾಡಿಸುವುದು, ಮುಂದೆ ತಳ್ಳುವುದು, ಚಲಿಸುವಂತೆ ಮಾಡುವುದು. ಉದಾ:— ಲಾಂಗೂಲ ಚಾಲನೆ; ಮಹತ್ವಾಕಾಂಕ್ಷೆಗೆ ಚಾಲನೆ ಸಿಕ್ಕಿತು. [ಸಂ. ಚಾಲನಂ=ಚಲಿಸು ವಂತೆ ಮಾಡುವುದು]

೬. **ಚಾಲಾಕು** (ಇ) ಚಾತುರ್ಯದ, ಬುದ್ಧಿ ಮಂತಿಕೆಯಿಂದ ಕೂಡಿದ, ಉಪಾಯಬಲ್ಲ, ಚುರುಕಾದ. ಉದಾ:— ಅವನು ಚಾಲಾಕಿನಲ್ಲಿ ಶುದ್ಧ ಸರಿ. [ಹಿಂದೀ, ಚಾಲಾಕ್=ಉಪಾಯಗಾರ]

೭. **ಬಗರು** (ಅ) ಪರಚು, ಉಗುರಿನಿಂದ ಕೆರೆ. ಉದಾ:— ಸಿಟ್ಟಿನಿಂದ ಬಗರಿ ಬಿಟ್ಟಳು. [ದೇಶ್ಯ – ಬಗಿ=ಸೀಳು]

೮. **ಬಂಧಕ** (ಅ) ಕಟ್ಟುವಂಥಾದ್ದು, ತಡೆ, ಅಡ್ಡಿ. ಉದಾ:— ಯಾವ ಶಾಸ್ತ್ರವೂ ಅವನಿಗೆ ಬಂಧಕವಲ್ಲ. [ಸಂ. ಬಂಧಕ= ಕಟ್ಟುವ]

೯. **ಗ್ರಾಸ** (ಇ) ತುತ್ತು, ನುಂಗುವಿಕೆ, ಕಬಳಿಸುವಿಕೆ. ಉದಾ:— ಎಲ್ಲವನ್ನೂ ಏಕಗ್ರಾಸ ಮಾಡಿದ. [ಸಂ. ಗ್ರಸ್= ನುಂಗು – ಇಂದ]

೧೦. **ಠಳಾಯಿಸು** (ಈ) ಅತ್ತಿಂದಿತ್ತ ನಡೆ ದಾಡು. ಸಾವಕಾಶವಾಗಿ ನಡೆದಾಡು. ಉದಾ:— ಮನೆಯ ಮುಂದೆ ಕಳ್ಳ ಠಳಾ ಯಿಸುತ್ತಿದ್ದ. [ಹಿಂದೀ – ಟಹಲ್‌ನಾ]

೧೧. **ಅಭೂತಪೂರ್ವ** (ಅ) ಹಿಂದೆಂದೂ ಆಗದ್ದು, ಆದ್ದರಿಂದ ಅದ್ಭುತ. ಉದಾ:— ಅಭೂತಪೂರ್ವ ಸ್ವಾಗತ. [ಸಂ. ಅ=ಇಲ್ಲ+ಭೂತ=ಆದ+ಪೂರ್ವ= ಮುಂಚೆ]

೧೨. **ಮಮಕಾರ** (ಅ) ತನ್ನದೆಂಬ ಭಾವನೆ, ಆದ್ದರಿಂದ ಸ್ವಾರ್ಥ, ಅಹಂಕಾರ, ಮೋಹ. ಉದಾ:— ಮಮಕಾರ ವೆಂಬುದು ಒಂದು ಗಾಳ. [ಸಂ. ಮಮ=ನನ್ನ+ಕಾರ]

## ನಿಮ್ಮ ಶಬ್ದ ಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿ ತಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿ ನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | | |
|---|---|---|---|
| ೬—೮ ಸರಿಯಿದ್ದರೆ | | ... | ಸಾಧಾರಣ |
| ೯–೧೦ | ,, | ... | ಉತ್ತಮ |
| ೧೧–೧೨ | ,, | ... | ಅತ್ಯುತ್ತಮ |

# ಡೀಮೋಸ್ಥಿನೀಜ್

## ದೇಶಭಕ್ತ ವಾಗ್ವೀರ

ಗೌರೀಶ ಕಾಯ್ಕಿಣಿ

ನಮ್ಮ ಸದ್ಯದ ರಾಷ್ಟ್ರಪತಿಗಳು ಮಣ್ಣಿನ ಮಗ. ಮೂಲತಃ ವಿಶ್ವಕರ್ಮ ಸಮಾಜದ ಕೈಗಾರಿಕೆಯ ಕುಲದ ಹುಡುಗ. ಇಟ್ಟಿಗೆ ಸುಡುವ, ಗೋಡೆ ಕಟ್ಟುವ, ಮರದ, ಲೋಹದ ಸಾಮಾನುಗಳನ್ನು ಸ್ವಂತ ಕೈಯಿಂದ ನಿರ್ಮಿಸುವ ಕೆಲಸಗಾರ. ಖಡ್ಗಗಳನ್ನು ತಯಾರಿಸುತ್ತಿದ್ದವರು ಇದೀಗ ರಾಷ್ಟ್ರದ ಅಧ್ಯಕ್ಷ ಪೀಠದ ಮುಕುಟಕ್ಕೆ ಪಾತ್ರರಾದರು. ಈ ಸಮಾಚಾರವನ್ನು ಓದುತ್ತಿದ್ದಾಗ ನನ್ನ ನೆನಪಿನಲ್ಲಿ ತೇಲಿಬಂದದ್ದು ಪ್ರಾಚೀನ ಗ್ರೀಸಿನ ಒಬ್ಬ ಇತಿಹಾಸ ಪುರುಷನ ಚರಿತ್ರೆ.

ಆತ ಅಲೆಕ್ಝಾಂಡರನ ಕಾಲದಲ್ಲಿ ಆಗಿ ಹೋದ. ಅವನೂ ಕತ್ತಿ ಕಠಾರಿ ತಯಾರಿಸುವ ಕುಲಕಸುಬಿನವ. ಆದರೆ ಕತ್ತಿಗಿಂತ ಹರಿತವಾದ ತನ್ನ ನಾಲಿಗೆಯ ಬಲದಿಂದ ಬುದ್ಧಿಮತ್ತೆ ನೀತಿಮತ್ತೆಗಳ ಸತ್ವದಿಂದ ತನ್ನ ದೇಶಕ್ಕಾಗಿ ದುಡಿದು ಘನತೆಗೇರಿದನು. ಕೃತಜ್ಞರಾದ ಜನತೆ ಅವನ ತಲೆಗೆ ಚಿನ್ನದ ಕಿರೀಟವನ್ನಿಟ್ಟರು. ಆದರೆ ಕೊನೆಗೂ ಆತ ವಿಷ ಹೀರಿ ದೇಹ ಬಿಟ್ಟ. ಗುಲಾಮನಾಗಿ ಬದುಕುವದಕ್ಕಿಂತ ಸಾವು ಲೇಸೆಂದ. (ನಮ್ಮ ರಾಷ್ಟ್ರಪತಿಗಳೋ ಗುಲಾಮಗಿರಿಯ ವಿರುದ್ಧ ದೇಶದ ಹೋರಾಟದಲ್ಲಿ ಅಪಾರ ಕಷ್ಟನಷ್ಟಗಳ ವಿಷವುಂಡು ಜೀರ್ಣಿಸಿಕೊಂಡು ಮೇಲೇರಿ ಬಂದು ಇಂದು ರಾಷ್ಟ್ರಾಧ್ಯಕ್ಷತೆಯ ಕಿರೀಟವನ್ನು ಜನತೆಯ ಆಯ್ಕೆಯಿಂದ ಇಟ್ಟುಕೊಂಡವರು!)

ಈ ಇತಿಹಾಸ ಪುರುಷ ಡೀಮೋಸ್ಥೆನೀಜ್ ಅಥೆನ್ಸ್ ಗಣರಾಜ್ಯದ ಸುಪ್ರಸಿದ್ಧ ವಾಗ್ಮಿ, ಯೋಧ, ದೇಶಭಕ್ತ. ಒಬ್ಬ ಕತ್ತಿ ಮಸೆಯುವ ಕಮ್ಮಾರನ ಮಗ. ನಾಲಿಗೆ ಮಸೆದು ನಾಡನ್ನು ಕಾಪಾಡಿದವ.

"ಕತ್ತಿ–ಕಾರ ಸತ್ತನಂತೆ!" ಅಥೆನ್ಸಿನ ಪೇಟೆಯ ಚೌಕಿನಲ್ಲಿ ಮಂದಿ ಮಾತಾಡಿಕೊಳ್ಳುತ್ತಿದ್ದರು. "ಆದರೆ ಪಾಪ, ಅವನಿಗೆ ಒಬ್ಬನೇ ಮಗ." "ಅವನೂ ೭ ವರ್ಷದ ಹುಡುಗ." "ತಾಯಿಯೂ ಇಲ್ಲ." "ಅಯ್ಯೋ ಯಾರು ಅವರನ್ನು ನೋಡಿಕೊಳ್ಳುವವರು?" "ಅಪ್ಪ ಸಾಯುವ ಮುಂಚೆ ಮಗನಿಗೆ ಯಾರೋ ಪಾಲಕರನ್ನು ಗೊತ್ತುಮಾಡಿದ್ದನಂತೆ. ಮಗನಿಗೆ ವಿದ್ಯೆ ಕಲಿಸಲು ಸಾಕಷ್ಟು ಸೊತ್ತು ಬಿಟ್ಟು ಹೋಗಿದ್ದನಂತೆ ಅವರ ವಶಕ್ಕೆ. ಹಾಗಾದರೆ ಬಿಡಿ, ಚಿಂತೆ ಇಲ್ಲ."

ಆ ಪಾಲಕರಿಗೂ ಆ ತಬ್ಬಲಿ ಹುಡುಗನ ಬಗೆಗೆ ವಿಶೇಷ ಚಿಂತೆ ಇದ್ದಿಲ್ಲ. ಅವರು ಅವನನ್ನು ಒಳ್ಳೆಯ ಶಾಲೆಗೆ ಹಾಕಲಿಲ್ಲ. ಸರಿಯಾಗಿ ನೋಡಿಕೊಳ್ಳಲೂ ಇಲ್ಲ. ಮನೆಯಲ್ಲಿ ಪಾಠ ಹೇಳಿಸಲೂ ಏರ್ಪಾಟು ಮಾಡಲಿಲ್ಲ. ಅವನ ಬಹುಪಾಲು ಸ್ವತ್ತು ಸ್ವಾಹಾ ಮಾಡಿದರು.

ಆದರೆ ಡಿಮೋಸ್ಥೆನೀಜ್ ಛಲವಾದಿ. ಓರಿಗೆಯ ಮಕ್ಕಳಿಗಿಂತ ತಾನು ಕಲಿಯುವದರಲ್ಲಿ ಕೆಳಗೆಂದು ಕಂಡುಕೊಂಡು ತನ್ನ ಉದ್ಧಾರಕ್ಕೆ

ತಾನೇ ಅಣಿಮಾಡಿದ. ಅವನಿಗೆ ಒಂದು ಹಿರಿಯಾಸೆ. ತಾನೊಬ್ಬ ಉತ್ತಮ ಮಾತುಗಾರ, ವಾಗ್ಮಿ ಎನಿಸಿಕೊಳ್ಳಬೇಕು. ಅಂದು ಗ್ರೀಸಿನ ಗಣ ರಾಜ್ಯಗಳಲ್ಲಿ ಮಾತು ಬಲ್ಲವರೇ ಜಗಳವನ್ನೂ ಮಾಣಿಕವನ್ನೂ ತರುತ್ತಿದ್ದರು. ಜನಮನ ಬಹುಮತ ಗೆಲ್ಲುವದು ಮಾತುಗಾರಿಕೆಯಿಂದ. ಆದ್ದರಿಂದ ತಾನೂ ಒಳ್ಳೆಯ ಮಾತುಗಾರ ನಾಗಬೇಕು. "ವಕ್ತಾ ದಶಸಹಸ್ರೇಷು." ೧೦೦೦೦ ಮಂದಿಯಲ್ಲಿ ಒಬ್ಬ ಮಾತುಗಾರ ಹುಟ್ಟುವ ನಂತೆ! ಬಾಯಿ ಇದ್ದವರೆಲ್ಲ ಮಾತುಗಾರರಲ್ಲ.

ಡೆಮೋಸ್ಥೆನೀಜನಿಗಂತೂ ಬಾಯಿಯೂ ಸರಿ ಇದ್ದಿಲ್ಲ. ಹುಡುಗನಿಗೆ ವಿಶ್ವಾಸದ ಬಲವಿದ್ದರೂ ಶ್ವಾಸದ ಬಲವೇ ಇದ್ದಿಲ್ಲ. ಅವನ ಪುಪ್ಪುಸಗಳೇ ದುರ್ಬಲ. ದನಿಯಲ್ಲಿಯೂ ಕಸುವಿಲ್ಲ. ಇದೂ ಅಲ್ಲದೆ, ಅವನ ಬಾಯಿಂದ ಮಾತುಗಳೇ ಸರಿಯಾಗಿ ತಿಳಿಯಾಗಿ ಹೊರಡುತ್ತಿದ್ದಿಲ್ಲ. ರ–ಲ–ಥ ಕಾರಗಳ ಭೇದವೇ ಇದ್ದಿಲ್ಲ. ನಾಲಿಗೆ ಸಲೀಸಾಗಿ ಉರುಳುತ್ತಿದ್ದಿಲ್ಲ. ಅಲ್ಲದೆ ಉಗ್ಗು–ಬಿಕ್ಕಳಿಕೆ ಬೇರೆ. ಆತ ಮಾತಾಡತೊಡಗಿದರೆ ಕೇಳುವವರಿಗೆಲ್ಲ ನಗು! ಇಂಥ ಹುಡುಗನಿಗೆ ವಾಗ್ಮಿಯಾಗುವ ಹೆಬ್ಬಾಸೆ! ಆದೊಂದು ಬಿಸಿಲು–ಗುದುರೆಯ ಸವಾರಿ!

ಆದರೆ ಡೆಮೋಸ್ಥೆನೀಜನ ಸಂಕಲ್ಪಶಕ್ತಿ ಪ್ರಚಂಡ. ತನ್ನ ಮಾತಿನ ನಾಲಿಗೆಯ ತಪ್ಪು–ತೆವಳುಗಳನ್ನು ತಿದ್ದಿಕೊಳ್ಳುವ ಜಿದ್ದಿಗೆ ಬಿದ್ದ. ಅದ ಕ್ಕಾಗಿ ಆತ ಪಟ್ಟ ಪರಿಶ್ರಮ ಅಷ್ಟಿಷ್ಟಲ್ಲ. ಗುಡ್ಡದ ಒಂದು ಗವಿಯ ನೆಲದಡಿಗೆ ಒಂದು ಕೋಣೆ ಮಾಡಿಕೊಂಡು ಅಲ್ಲಿ ಮಾತಾಡುವ ತಾಲೀಮು ಆರಂಭಿಸಿದ. ಹಗಲು ರಾತ್ರಿ ಆ ಕೋಣೆಯಲ್ಲಿಯೇ. ಊಟ – ತಿಂಡಿ – ತೀರ್ಥ ವಿಶ್ರಾಂತಿ ಎಲ್ಲ ಅಲ್ಲಿಯೇ. ದೊಡ್ಡ ದನಿಯಲ್ಲಿ ಪಾಠಗಳನ್ನು ಓದುತ್ತಿದ್ದ. ಗವಿಯ ಹೊರಗೆ ಮಂದಿಯ ನಡುವೆ ಬರಲು ಮನಸ್ಸೇ ಆಗಬಾರ ದೆಂದು ತಲೆಯ ಅರ್ಧ ಭಾಗ ತಾನೇ ಬೋಳಿ ಸಿಕೊಳ್ಳುತ್ತಿದ್ದ!

ಪ್ರತಿಯೊಂದು ಶಬ್ದವನ್ನೂ ಸ್ಪಷ್ಟವಾಗಿ ಸಾವ ಕಾಶವಾಗಿ ಉಚ್ಚರಿಸುವಂತೆ ಪ್ರಯಾಸ ಪಡ ಹತ್ತಿದ. ಅದಕ್ಕಾಗಿ ಬಾಯಿ ತುಂಬ ಹರಳು ತುಂಬಿಕೊಂಡು ದೊಡ್ಡ ದನಿಯಲ್ಲಿ ಓದತೊಡ ಗಿದ. ತುಂಬ ಕಷ್ಟಪಟ್ಟ ನಂತರ ಹರಳೆಲ್ಲ ಉಗಿದಾಗ ಮಾತು ಹೆಚ್ಚು ಸಲೀಸಾಗಿ ಸ್ಪಷ್ಟ ವಾಗಿ ಹೊರಡುತ್ತಿದ್ದವು. ಹಾಗೆಯೇ ಉದ್ದುದ್ದ ಭಾಷಣ ಬರೆದು ಕಂಠಪಾಠ ಮಾಡಿ ಆತ ಗುಡ್ಡದೇರಿಗುಂಟ ಓದುತ್ತಾ ಓಡುತ್ತಾ ಹತ್ತು ತ್ತಿದ್ದ. ಉಬ್ಬಸ ಹತ್ತಿದಾಗ ನಡು ನಡುವೆ ಬಂಡೆಯ ಮೇಲೆ ಕುಳಿತು ನಿದಾನಿಸಿಕೊಂಡು ಮತ್ತೆ ಓದುತ್ತಾ ಏರುತ್ತಿದ್ದ. ಹಾಗೊಮ್ಮೆ ಕಡಲದಂಡೆಗುಂಟ ಗಾಳಿಯೆದ್ದು ತೆರೆಗಳು ಅಪ್ಪಳಿ ಸುತ್ತಿರುವಾಗ, ಜನಸ್ತೋಮದ ಕೋಲಾಹಲದ ನಡುವೆ ನಿಂತಂತೆ ಕೂಗಿ ಕೂಗಿ ಭಾಷಣ ಬಿಗಿ ಯುತ್ತಿದ್ದ! "ದೇಶಬಾಂಧವರೇ, ಎದ್ದೇಳಿರಿ. ಶತ್ರುಗಳ ದಾಳಿ ಹಿಮ್ಮೆಟ್ಟಿರಿ. ನಿಮ್ಮ ದೇವತೆ ಗಳ ಗುಡಿಗಳನ್ನು ಕಾಪಾಡಿರಿ," ಇತ್ಯಾದಿಯಾಗಿ.

ಗವಿಯ ನೆಲಮನೆಯಲ್ಲಿ ಕೆಲ ಸಲ ಕಂಚಿನ ಇಲ್ಲವೆ ಬೆಳ್ಳಿಯ ನುಣ್ಣಗಿನ ತಗಡಿನ ಕನ್ನಡಿ ಯನ್ನಿಟ್ಟುಕೊಂಡು ಅದರ ಇದಿರು ನಿಂತು ಭಾಷಣ ಮಾಡುತ್ತಾ ತನ್ನ ಹಾವಭಾವ, ಮುಖ ಚರ್ಯೆ ಎಲ್ಲ ನೋಡಿ ತಿದ್ದಿಕೊಳ್ಳುತ್ತಿದ್ದ. ಕ್ರಮೇಣ ಅವನ ಮಾತುಗಾರಿಕೆ ತಿದ್ದಿತು. ಕ್ರಮೇಣ ಮಂದಿ ಅವನ ಮಾತಿಗೆ ಕಿವಿಗೊಡಲು, ತಲೆದೂಗಲು ಆರಂಭಿಸಿದರು. ಆತ ಅನೇಕ ಸಲ ರಾತ್ರಿಯೆಲ್ಲ ಎಣ್ಣೆ ದೀಪ ಉರಿಸಿ ತನ್ನ ಭಾಷಣ ಗಳನ್ನು ಬರೆದು ಉರುಹಾಕುತ್ತಿದ್ದ. ಡೆಮೋಸ್ಥೆ ನೀಜನನ್ನು ಅವನ ವಕ್ತೃತ್ವಕ್ಕೆ ಹೊಟ್ಟೆ ಉರಿಸಿ ಕೊಳ್ಳುವ ಕೆಲವು ಮಂದಿ ಮೂದಲಿಸುತ್ತಿದ್ದರು. "ಅಯ್ಯಾ ನಿನ್ನ ಭಾಷಣಕ್ಕೆ ಮಧ್ಯರಾತ್ರಿ ಉರಿ ಸಿದ ಎಣ್ಣೆಯ ಕಂಪು ಬರುತ್ತದೆಯಲ್ಲೋ!"

ಡೆಮೋಸ್ಥೆನೀಜನ ವಾಗ್ಮಿತೆ ಸಾರ್ಥಕವಾಗುವ ಪರ್ವಕಾಲ ಬಂದಿತು. ಗ್ರೀಸಿನ ಮೇಲೆ ಸಂಕಟ ಕವಿಯಿತು – ಉತ್ತರದ ಮೆಸಿಡೋನಿಯಾ ರಾಜ್ಯದ ದೊರೆ ಫಿಲಿಪ್‌ನಿಂದ. ಆತ ಸಮಸ್ತ ಗ್ರೀಸನ್ನು ಗ್ರಾಸ ಮಾಡಿಕೊಳ್ಳಲು ಹೊಂಚು ಹಾಕಿದ್ದನು. ಥೀಬ್ಸ್, ಅಥೆನ್ಸ್, ಸ್ಪಾರ್ಟಾ ಮುಂತಾದ ಗಣರಾಜ್ಯಗಳನ್ನು [illegible]

ಗ್ರೀಸಿನ ಸಮ್ರಾಟನಾಗಿ ಆಳಬೇಕೆಂಬುದು ಫಿಲಿಪ್ ದೊರೆಯ ಮಹತ್ವಾಕಾಂಕ್ಷೆ.

ಅವನ ದಂಡು ಪ್ರಚಂಡ. ಅದರ ದಾಳಿಯ ತಂತ್ರವೇ ಹಾಗೆ, ಅದಕ್ಕೆ "ಫಾಲಾಂಕ್ಸ್" (Phalanx) ವ್ಯೂಹವೆನ್ನುತ್ತಾರೆ. ಹದಿನಾರು ಹದಿನಾರು ಭಟರು ಸಾಲು ಸಾಲಾಗಿ ದಟ್ಟಡಿಯಿಟ್ಟು ನುಗ್ಗುತ್ತಿದ್ದರು. ಪ್ರತಿಯೊಬ್ಬ ಭಟನ ಕೈಯಲ್ಲಿ ೧೮ ಅಡಿ ಉದ್ದದ ಬರ್ಜಿ. ಇದಿರಾಳಿಯ ಎದೆಗೆ ಗುರಿಯಾಗಿ ಅಡ್ಡ ಹಿಡಿದು ಅವರು ನುಗ್ಗುತ್ತಿದ್ದರು. ಈ ಸಶಸ್ತ್ರ ದಂಡಾಳುಗಳ ಗೋಡೆಯನ್ನು ಭೇದಿಸುವದು ಇದಿರಾಳಿಗಳ ಕಾಲಾಳುಗಳಿಗೂ ಕುದುರೆಗಳಿಗೂ ಅತಿ ಕಷ್ಟ. ದೊರೆ ಫಿಲಿಪ್‌ನ ದಾಳಿಯ ಈ ಕತ್ತಿ ಅಥೆನ್ಸಿನ ನೆತ್ತಿಗೆ ಸದಾ ತೂಗುತ್ತಿತ್ತು. (ಈ 'ನೆತ್ತಿಗೆ ತೂಗಿದ ಕತ್ತಿ'ಗೂ ಒಂದು ಕಥೆ ತೂಗಿದೆ. ಅದು ಗೊತ್ತೆ?)

ಅಂಥಲ್ಲಿ ಅಂದಿನ ಗ್ರೀಕ್ ಜನರಲ್ಲಿಯೂ ಹೋರಾಟದ ಹುಮ್ಮಸ ಕಡಿಮೆ ಇತ್ತು. ಸಂಬಳಕ್ಕೆ ಹೊರಗಿನ ದಂಡನ್ನು ತಂದು ಅವರಿಂದ ತಮ್ಮ ರಕ್ಷಣೆ ಮಾಡಿಸಿಕೊಳ್ಳುವ ಚಟ ಅವರಿಗೆ ಅಂಟಿತ್ತು. ಈ ಬಾಡಿಗೆಯ ಬಂಟರು ದೇಶಾಭಿಮಾನಿ ನಾಗರಿಕ ಯೋಧರಂತೆ ಜೀವದ ಹಂಗು ದೊರೆದು ಕಾದುವವರಲ್ಲ. ತನ್ನ ದೇಶಬಾಂಧವರ ಈ ವ್ಯೈಗಳ್ಳ ಸ್ವಾಭಿಮಾನಶೂನ್ಯ ನಡತೆಗೆ ಡೀಮೋಸ್ಥನೀಜ್ ಹೇಸಿ ಹೋಗಿದ್ದನು. ಅತ್ತ ಉತ್ತರದ ಗಡಿಯ ಗ್ರಾಮಗಳನ್ನು ಫಿಲಿಪ್ಪನ ಫಾಲಾಂಕ್ಸ್‌ಗಳು ಗೆಲ್ಲುತ್ತ ಬರುವದನ್ನು ಕೇಳಿ ಮಂಕು ಬಡಿದ ತನ್ನ ಅಥೇನಿಯನ್ ಬಾಂಧವರಲ್ಲಿ ಮಾತುಗಾರಿಕೆಯಿಂದ ಮಂತ್ರವೂದಿ ವೀರಾವೇಶ ತುಂಬಲು ಆತ ಹೋಗಿದ್ದನು. "ಬಾಂಧವರೇ ಎದ್ದೇಳಿ. ಫಿಲಿಪ್ಪನಿಗಿಂತ ನೀವು ಭಾಗ್ಯಶಾಲಿಗಳು. ಆದರೆ ಹೀಗೆ ಕೈಚೆಲ್ಲಿ ಕೂತರೆ ಯಾವ ದೇವರೂ ನಿಮ್ಮ ನೆರವಿಗೆ ಬರುವದಿಲ್ಲ!" ಎಂದೆಲ್ಲ ಚುಚ್ಚಿ ಮಾತಾಡುತ್ತಿದ್ದನು. "ಈ ಫಿಲಿಪ್ಪನನ್ನು ನೋಡಿ, ಮಾತಿಲ್ಲ ಕತೆಯಿಲ್ಲ. ದಂಡಿನಲ್ಲಿ ರಣರಂಗದಲ್ಲಿ ಯಾವಾಗಲೂ ಸಂಚರಿಸುತ್ತಿರುತ್ತಾನೆ. ತನ್ನ ಭಟರನ್ನು ಹುರಿದುಂಬಿಸುತ್ತಿರುತ್ತಾನೆ. ನೀವು ಮಾತ್ರ ಮಾತಿನಲ್ಲಿ ವಾದವಿವಾದದ ವ್ಯಾಜ್ಯಗಳಲ್ಲಿ ಕಾಲ ಕಳೆಯುತ್ತೀರಿ. ಮತದಾನದಿಂದ ಯುದ್ಧ ಗೆಲ್ಲುವದಿಲ್ಲ. ಎಚ್ಚರಾಗಿರಿ ಎದ್ದೇಳಿರಿ," ಎನ್ನುತ್ತಿದ್ದನು.

ದೊರೆ ಫಿಲಿಪ್ಪನ ದಂಡು ಥೀಬ್ಸ್ ನಗರವನ್ನು ಸಮೀಪಿಸಿತು. ಥೀಬ್ಸ್ ಅವನ ಕೈಗೆ ಬಿದ್ದರೆ ಅಥೆನ್ಸಿನ ದಾರಿ ತೆರೆದಂತೆ. ಥೀಬ್ಸ್ ಅಥೆನ್ಸಿನ ಪಕ್ಷಕ್ಕೆ ನಿಲ್ಲಬೇಕು. ಅದರ ಮನವೊಲಿಸಬೇಕು. ಡೀಮೋಸ್ಥನೀಜನ ಈ ಸಲಹೆಯನ್ನು ಸರಕಾರ ಒಪ್ಪಿತು. ಥೀಬ್ಸಿಗೆ ದೂತರನ್ನು ಅಟ್ಟಿದರು. ಅವರಲ್ಲಿ ಡೀಮೋಸ್ಥನೀಜ್ ಮುಖ್ಯ. ಅಲ್ಲಿ ಫಿಲಿಪ್ಪನ ದೂತರ ನಿಯೋಗವೂ ಬಂದಿತ್ತು. ಆದರೆ ಡೀಮೋಸ್ಥನೀಜನ ಮಾತುಗಾರಿಕೆಗೆ ಗೆಲು



# ಕೆಂಗೇರಿಯಲ್ಲಿರುವ ರೈತ ಚಂದ್ರಶೇಖರ್‌ಗೆ ಹತ್ತು ವರ್ಷದ ಸಾಮಾಜಿಕ ಭದ್ರತಾ ಯೋಜನೆ ಒಂದು ವರವಾಗಿ ಪರಿಣಮಿಸಿತು



"ಈ ವರ್ಷ ಒಳ್ಳೆ ಬೆಳೆ ಬಂತು, ಮುಂದಿನ ವರ್ಷ ಹೇಗೋ, ದೇವರಿಗೇ ಗೊತ್ತು. ಅಂದ ಮೇಲೆ ಹೆಚ್ಚಿನ ಹಣವನ್ನು ಸುರಕ್ಷಿತವಾಗಿ ಎಲ್ಲಾದರೂ ತೊಡಗಿಸಬೇಕು. ನನಗೆ ಸರಿಯಾದ ಸುರಕ್ಷಿತ ಯೋಜನೆ, ಹತ್ತು ವರ್ಷದ ಸಾಮಾಜಿಕಭದ್ರತಾ ಯೋಜನೆ. ಹತ್ತು ವರ್ಷದಲ್ಲಿ ನಾನು ತೊಡಗಿಸಿದ ಹಣ ಮೂರರಷ್ಟಾಗುವುದಲ್ಲದೇ, ಜೀವ ವಿಮಾ ಸೌಲಭ್ಯವೂ ಇದೆ. ಹೆಚ್ಚೇನು, ಮೂರು ವರ್ಷದ ನಂತರ ಹಣವನ್ನು ಬೇಕೆಂದಾಗ ವಾಪಸ್ ಪಡೆಯಬಹುದು."

**ನಿಮ್ಮ ಉಳಿತಾಯ ಮೂರರಷ್ಟು**

ಚಂದ್ರಶೇಖರ್ ಹೇಳುತ್ತಿದ್ದ ಹತ್ತು ವರ್ಷದ ಸಾಮಾಜಿಕ ಭದ್ರತಾ ಯೋಜನೆಯ ಬಗ್ಗೆ ಹೆಚ್ಚಿನ ವಿವರಗಳು ಇಲ್ಲಿವೆ:

- **ಜೀವವಿಮಾ ಸೌಲಭ್ಯ**

  ಈ ಯೋಜನೆಯಲ್ಲಿ ಪಾಲ್ಗೊಂಡವರಿಗೆ, ಎರಡು ವರ್ಷದ ನಂತರ ಯಾವುದೇ ಕಾರಣದಿಂದ ಸಾವು ಸಂಭವಿಸಿದಲ್ಲಿ, ಅವರಿಂದ ಹೆಸರಿಸಲ್ಪಟ್ಟವರಿಗೆ ಅಥವಾ ವಾರಸುದಾರರಿಗೆ, ಪೂರ್ಣಾವಧಿಯ ನಂತರ ನೀಡುವಷ್ಟು ಹಣವನ್ನು ತಕ್ಷಣ ಕೊಡಲಾಗುವುದು. ಮೊದಲ ಎರಡು ವರ್ಷಗಳಲ್ಲೂ, ಸಾವು ಆಕಸ್ಮಿಕ ಅಥವಾ ಪ್ರಕೃತಿಯ ವಿಕೋಪದಿಂದ ಉಂಟಾದಲ್ಲಿ, ಮೇಲಿನ ಸೌಲಭ್ಯ ಅನ್ವಯವಾಗುತ್ತದೆ.

- **ಉಳಿತಾಯ, ಮೂರರಷ್ಟು**

  ಸರ್ಟಿಫಿಕೇಟ್‌ನ ಮೌಲ್ಯವು ಹತ್ತು ವರ್ಷದಲ್ಲಿ ಮೂರರಷ್ಟಾಗುತ್ತದೆ. ರೂ. 500 ಅಥವಾ ರೂ. 1000ದ ಸರ್ಟಿಫಿಕೇಟ್, ಹತ್ತು ವರ್ಷದ ನಂತರ ರೂ. 1500 ಅಥವಾ ರೂ. 3000 ನೀಡುತ್ತದೆ. ಅಂದರೆ ಶೇ. 11.3ರಷ್ಟು ಚಕ್ರ ಬಡ್ಡಿ, ಅರ್ಧವರ್ಷಕ್ಕೆ ಲೆಕ್ಕಿಸಿದಂತೆ,ಸೇರಿಸಲಾಗುವುದು. ಅಲ್ಲದೆ, ಮೂರು ವರ್ಷದ ನಂತರ ಸರ್ಟಿಫಿಕೇಟ್‌ನ್ನು ವಾಪಸ್‌ಮಾಡಬಹುದು. ಆಗ, ಸರ್ಟಿಫಿಕೇಟ್‌ನ ಮೌಲ್ಯವನ್ನು ಚಾಲ್ತಿಯಲ್ಲಿರುವ ಅಂಚೆ ಕಛೇರಿ ಉಳಿತಾಯ ಬ್ಯಾಂಕ್‌ನ ಬಡ್ಡಿ ದರದೊಂದಿಗೆ ಕೊಡಲಾಗುವುದು.

- **ತೆರಿಗೆ ರಹಿತ ಬಡ್ಡಿ**

  ಆದಾಯ ತೆರಿಗೆ ನಿಯಮಗಳ ಸೆಕ್ಷನ್ 80-L ರಂತೆ, ಈ ಸರ್ಟಿಫಿಕೇಟ್‌ಗಳ ಮೇಲೆ ನೀಡುವ ಬಡ್ಡಿಯು ತೆರಿಗೆಯಿಂದ ಮುಕ್ತವಾಗಿದೆ.

- **ಗಿರವಿ ಇಡಬಹುದು**

  ಈ ಸರ್ಟಿಫಿಕೇಟ್‌ನ್ನು ಕೆಲವು ಬ್ಯಾಂಕ್‌ಗಳಲ್ಲಿ, ಕಾರ್ಪೊರೇಷನ್‌ನಲ್ಲಿ ಹಾಗೂ ಸ್ಥಳೀಯ ಅಧಿಕಾರಿಗಳಲ್ಲಿ ಗಿರವಿ ಇಡಬಹುದು.

- **ಸರ್ಟಿಫಿಕೇಟ್ ಕೊಳ್ಳಲು ನಿಯಮಗಳು**

  18ರಿಂದ 45 ವರ್ಷ ವಯಸ್ಸಿನಲ್ಲಿರುವವರು ಮಾತ್ರ ಈ ಸರ್ಟಿಫಿಕೇಟ್ ಅನ್ನು ಕೊಳ್ಳಬಹುದು. ಇವರು ತಾವು ಉತ್ತಮ ಆರೋಗ್ಯ ಹೊಂದಿದ್ದೇವೆಂದು ಘೋಷಿಸಬೇಕು.

  ಸರ್ಟಿಫಿಕೇಟ್‌ಗಳು ರೂ.500 ಹಾಗೂ ರೂ.1000 ಮೌಲ್ಯದಲ್ಲಿ ದೊರೆಯುತ್ತವೆ. ಒಬ್ಬರು ರೂ. 5000 ಕ್ಕಿಂತ ಹೆಚ್ಚಿನ ಮೌಲ್ಯದ ಸರ್ಟಿಫಿಕೇಟ್‌ಗಳನ್ನು ಖರೀದಿಸಲಾಗದು. ಈ ಸರ್ಟಿಫಿಕೇಟನ್ನು ಪುರುಷರು ಮತ್ತು ಮಹಿಳೆಯರೂ ಕೊಳ್ಳಬಹುದು.

  ಹತ್ತು ವರ್ಷದ ಸಾಮಾಜಿಕ ಭದ್ರತಾ ಯೋಜನೆಯ ಸರ್ಟಿಫಿಕೇಟ್‌ಗಳು ಎಲ್ಲಾ ಅಂಚೆ ಕಛೇರಿಗಳಲ್ಲಿ ಹಾಗೂ ಅಧಿಕೃತ ಏಜೆಂಟರಲ್ಲೂ ದೊರೆಯುತ್ತವೆ.



**ಸಣ್ಣ ಉಳಿತಾಯಗಳ ನಿರ್ದೇಶನಾಲಯ**

3ನೇ ಹಂತ, ಮಲ್ಟಿ ಸ್ಟೋರಿಡ್ ಬಿಲ್ಡಿಂಗ್
ಡಾ। ಅಂಬೇಡ್ಕರ್ ವೀಧಿ, ಬೆಂಗಳೂರು-560 001

**ಜೀವ ವಿಮಾ ಸೌಲಭ್ಯವುಂಟು**

MCA/DSS/53B/KAN

ವಾಯಿತು. ಥೀಬ್ಸ್ ಅಥೆನ್ಸಿನ ಹೆಗಲಿಗೆ ಹೆಗಲು ಹಚ್ಚಿ ನಿಂತಿತು. ಫಿಲಿಪ್ಪನೊಂದಿಗೆ ಘೋರ ಕದನ. ೧೦೦೦ ಅಥೇನಿಯನ್ ಯೋಧರು ಮಡಿದರು. ೨೦೦೦ ಮಂದಿ ಸೆರೆಯಾಳಾದರು. 'ಗ್ರೀಸಿನ ರಾಜ್ಯಗಳು ಬೇರೆ ಬೇರೆ. ಆದರೆ ನಾವೆಲ್ಲ ಒಂದು. ನಮ್ಮ ಭಾಷೆ ಒಂದು, ನಮ್ಮ ದೇವ ದೇವತೆಗಳು ಬಾಳು–ಬದುಕು ಒಂದು.' ಎಂದೆಲ್ಲ ಡೀಮೋಸ್ಥೀನೀಜ್ ಒಕ್ಕಟ್ಟಿನ ಪ್ರೇರಣೆ ಕೊಟ್ಟು ಕಟ್ಟಿದ ಈ ಸಂಯುಕ್ತ ಸೇನೆ ಫಿಲಿಪ್ಪನ ಶಕ್ತಿಯ ಇದಿರು ತಡೆಯಲಿಲ್ಲ.

ಡೀಮೋಸ್ಥೀನೀಜ್ ಬರೇ ಮಾತಿನವನಲ್ಲ. ಹೋರಾಡಬಲ್ಲವನೂ ಆಗಿದ್ದ. ಯುದ್ಧದಲ್ಲಿ ಶತ್ರುಗಳೊಡನೆ ಹೊಯ್‌ಕೈ ಕಾದಾಡಿದ. ಆದರೆ ಸೋತವರೊಂದಿಗೆ ಪಲಾಯನ ಮಾಡಿದ, ಏಕೆ? ಮತ್ತೆ ಅಥೆನ್ಸ್ ನಾಗರಿಕರನ್ನು ಹೋರಾಟಕ್ಕೆ ಸಜ್ಜುಗೊಳಿಸಲಿಕ್ಕೆ. ತನ್ನ ಹಣ ವೆಚ್ಚಮಾಡಿ ಈ ನಗರದ ಕೋಟೆ ಬಲಪಡಿಸಿದ. ಪಿರಮ್ರಗಳನ್ನು ಕಡಿದು ಹಗೆಯ ಹಾದಿಯಲ್ಲಿ ಅಡ್ಡ ತಡೆ ರಚಿಸಲಾಯಿತು. ಅಥೆನ್ಸ್ ನೌಕಾದಳ ಮತ್ತೆ ಸನ್ನಾಹಗೊಂಡಿತು.

ಆದರೆ ಫಿಲಿಪ್ ಚಾಣಾಕ್ಷ. ಅವನಿಗೆ ಗೊತ್ತು, ಅಥೆನ್ಸ್ ಮುರಿದೀತು, ಆದರೆ ಮಣಿಯಲಾರದು. ಆತ ಒಪ್ಪಂದ ಮಾಡಿಕೊಂಡ. ಸೆರೆಹಿಡಿದ ೨೦೦೦ ಭಟರನ್ನು ಬಿಟ್ಟುಕೊಟ್ಟ. ಆದರೆ ಒಂದು ಶರ್ತು ಹಾಕಿದ. ಅಥೆನ್ಸಿನ ಪ್ರಜೆ ಸಮಗ್ರ ಗ್ರೀಸಿಗೆ ದೊರೆ ಫಿಲಿಪ್ಪನೇ ರಾಜ್ಯಪ್ರಮುಖನೆಂದು ಒಪ್ಪಬೇಕು. ಹಾಗೆಯೇ ಆಯಿತು. ಇತ್ತ ನಗರವನ್ನು ಸಂಕಟದಿಂದ ಪಾರು ಮಾಡಿದ ಮಾಗ್ರ ಡೀಮೋಸ್ಥೀನೀಜನಿಗೆ ನಾಗರಿಕರೆಲ್ಲ ಕೃತಜ್ಞತೆಯಿಂದ ಚಿನ್ನದ ಕಿರೀಟ ಮಾಡಿ ತಲೆಗಿಟ್ಟರು.

ಆದರೆ ಫಿಲಿಪ್ಪನ ನಂತರ ಅವನ ಮಗ ಜಗಜ್ಜೇತನೆಂದು ಖ್ಯಾತನಾದ. ಅಲೆಕ್ಸಾಂಡರ್ ಮೆಸಿಡೋನಿಯಾಕ್ಕೆ ದೊರೆಯಾದ. ಆತನಿಗೆ ಗೊತ್ತು ವಾಗ್ಮಿಯಾದ ಡೀಮೋಸ್ಥೀನೀಜ್ ಎಷ್ಟು ಅಪಾಯಕಾರಿ ಎಂದು. ಅವನ ಆಳ್ವಿಕೆಯಲ್ಲಿ ಡಿಮೋಸ್ಥೀನೀಜ್ ದೇಶಭ್ರಷ್ಟನಾದ. ಅದೂ ಲಂಚ ತೆಗೆದುಕೊಂಡನೆಂಬ ಆಪಾದನೆಯ ಮೇಲೆ ! ಆದರೆ ಅಲೆಗ್ಸಾಂಡರನ ನಿಧನಾನಂತರ ಅವನು ತಾಯ್ನಾಡಿಗೆ ಮರಳಿ ಬಂದ. ಅವನನ್ನು ಹೊತ್ತು ತಂದ ಹಡಗವನ್ನು ಅಥೆನ್ಸಿನ ಜನ ಹಿರಿ ಹರ್ಷದಿಂದ ಸ್ವಾಗತಿಸಿದರು. ಆದರೆ ಈ ಹರ್ಷ ಬಹುಕಾಲ ಉಳಿಯಲಿಲ್ಲ.

ಡಿಮೋಸ್ಥೀನೀಜ್ ಅಥೆನ್ಸಿಗೆ ಮರಳಿಬಂದ ಸುದ್ದಿ ಮೆಸಿಡೋನಿಯಾಕ್ಕೆ ಮುಟ್ಟಿತು. ಈಗ ಅಲ್ಲಿ ಸೇನಾಪತಿಗಳ ಆಳ್ವಿಕೆ. ಕೂಡಲೆ ಈ ದೇಶ-ಭಕ್ತ ವಾಗ್ಮಿಯನ್ನು ಸೆರೆಹಿಡಿದು ತರಲು ಅವರು ದಂಡಾಳುಗಳನ್ನು ಕಳುಹಿಸಿದರು. ಡಿಮೋಸ್ಥೀನೀಜನ ನಾಲಿಗೆಗೆ ಸೇನಾಪತಿಗಳು ಅಷ್ಟು ಹೆದರಿದ್ದರು.

ತನ್ನನ್ನು ಹಿಡಿದೊಯ್ಯಲು ಮೆಸಿಡೋ-ನಿಯಾದಿಂದ ಪಡೆ ಬರುವದೆಂದು ಕೇಳಿದೊಡನೆ ಡೀಮೋಸ್ಥೀನೀಜ್ ದೂರದ ಒಂದು ನಿರ್ಜನ ನಡುಗಡ್ಡೆಗೆ ಓಡಿ ಹೋಗಿ ಅಲ್ಲಿಯ ಸಮುದ್ರ ದೇವತೆಯ ಗುಡಿಯಲ್ಲಿ ಅವಿತುಕೊಂಡನು. ಆದರೆ ದಂಡಾಳುಗಳು ಅಲ್ಲಿಗೂ ಅವನನ್ನು ಬೆನ್ನಟ್ಟಿ ಹುಡುಕಿಕೊಂಡು ಹೋದರು. ದೋಣಿಗಳಲ್ಲಿ ಬಂದು ಅವರು ಈ ಗುಡಿಗೆ ಮುತ್ತಿಗೆ ಹಾಕಿದ್ದು ಡೀಮೋಸ್ಥೀನೀಜನಿಗೆ ಗೊತ್ತಾಯಿತು. "ಶರಣು ಬಂದರೆ ನಿಮ್ಮನ್ನು ಜೀವಂತ ಬಿಡುತ್ತೇವೆ," ಎಂದರು ಹಗೆಯ ಭಟರು. ಡೀಮೋಸ್ಥೀನೀಜ್ ಕೂಡಲೆ ಒಪ್ಪಿಕೊಂಡ. "ತುಸು ತಾಳಿ; ನನ್ನ ಜನಕ್ಕೆ ಒಂದು ಸಂದೇಶ ಬರೆದುಕೊಂಡು ಬರುತ್ತೇನೆ" ಎಂದು ಗುಡಿಯೊಳಗಿನ ಒಂದು ಕೋಣೆಯನ್ನು ಹೊಕ್ಕ. ಅಲ್ಲಿ ಲೆಕ್ಕಣಿಕೆ ಬಾಯಿಂದ ಏನನ್ನೋ ಬರೆಯುತ್ತಿದ್ದಾನೆ. ಆಲೋಚಿಸುತ್ತಿರುವಂತೆ ಲೆಕ್ಕಣಿಕೆಯ ತುದಿಯನ್ನು ಕಚ್ಚುತ್ತ ಆಲೋಚಿಸುತ್ತಿದ್ದ. ಪತ್ರ ಬರೆದು ಮುಗಿಸಿ ಕೋಣೆಯಿಂದ ಹೊರಬಿದ್ದ. ಆದರೆ ಅಲ್ಲಿಯೇ ದೇವರ ವಿಗ್ರಹದ ಪೀಠದಬಳಿಗೆ ಕುಸಿದು ಬಿದ್ದ. ಅವನು ಸದಾ ಇಟ್ಟಿದ್ದ ಆ ಲೆಕ್ಕಣಿಕೆಯ ತುದಿಯಲ್ಲಿ ತುಂಬಿಕೊಂಡಿದ್ದ ವಿಷವನ್ನು ಆತ ಹೀರಿ ಪ್ರಾಣ ಬಿಟ್ಟಿದ್ದ. ✡



# ಬದಲಾದ ಭೂಗೋಳ

ವೆಂಕಟಾಚಲ ಮಾನಾಚಿ

ಪ್ರಪಂಚ ಬದಲಾಗುತ್ತಿದೆ. ದೇಶ ದೇಶಗಳ ನಕ್ಷೆ ಬದಲಾಗುತ್ತಲೇ ಇವೆ. ಗಿರಿ, ಗುಡ್ಡ, ನದಿ, ಊರುಗಳು ತಮ್ಮ ಹೆಸರನ್ನು ಬದಲಾಯಿಸಿಕೊಳ್ಳುತ್ತಿವೆ. ಹೀಗಾಗಿ ಭೂಗೋಳ ಒಂದು ದೊಡ್ಡ ಶಾಸ್ತ್ರವಾಗಿದೆ. ಇದಕ್ಕೆ ಇತಿಹಾಸವಿದೆ, ವರ್ತಮಾನವಿದೆ ಹಾಗೂ ಭವಿಷ್ಯವೂ ಇರುವುದು. ಆದರೆ ಯಾವುದೂ ಸ್ಥಿರವಲ್ಲ.

ಬಹು ದೂರದ ಮಾತೇಕೆ? ನಮ್ಮ ದೇಶದ ಭೂಗೋಳವೇ ನಮಗೆ ಗೊತ್ತಿಲ್ಲ. ನಾಲ್ಕೈದು ಸಾವಿರ ವರ್ಷದ ಪೂರ್ವದಲ್ಲಿ ಭಾರತದ ಯಾವ ಭಾಗಕ್ಕೆ ಏನು ಅನ್ನುತ್ತಿದ್ದರು? ಯಾವ ಬೆಟ್ಟಕ್ಕೆ ಏನು ಹೆಸರು? ಯಾವ ನದಿಯನ್ನು ಏನೆಂದು ಕರೆಯುತ್ತಿದ್ದರು? ಎಂಬುದನ್ನು ತಿಳಿಯಲು ಕುತೂಹಲವಾಗುತ್ತದೆ.

## ಕುಲಗಿರಿಗಳು:

ಭರತಖಂಡದಲ್ಲಿ ಏಳು ಕುಲಗಿರಿಗಳಿವೆ. ಕುಲಗಿರಿಗಳೆಂದರೆ ಒಂದು ಖಂಡವನ್ನು ಪ್ರಾದೇಶಿಕವಾಗಿ ವಿಂಗಡಿಸುವ ಬೆಟ್ಟದ ಸಾಲು. ಇವುಗಳಿಗೆ ಉಪಪರ್ವತ ಎಂಬ ಪರಿಭಾಷೆಯೂ ಇದೆ.

ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ ಹಾಗೂ ಪಾರಿಯಾತ್ರಗಳೇ ಭಾರತದ ಕುಲಗಿರಿಗಳು. ಕುಲವು "ಯೂನಿಟ್" ಎನ್ನುವ ಅರ್ಥದಲ್ಲಿ ಬಳಸಲ್ಪಡುತ್ತಿತ್ತು. ಒಡಿಸ್ಸಾದಿಂದ ದಕ್ಷಿಣದ ಕಡೆಗೆ ಆರಂಭವಾಗಿ ಹಬ್ಬಿದ ಪರ್ವತಾವಳಿಯು ಮಹೇಂದ್ರವೆಂಬ ಹೆಸರಿನಿಂದ ಕರೆಸಿಕೊಳ್ಳಲ್ಪಡುತ್ತಿತ್ತು. ಇಂದಿಗೂ 'ಪೂರ್ವಘಟ್ಟ' ಎಂದು ಕರೆಯುವ ಪರ್ವತ ಶ್ರೇಣಿಯಿದು. ಗಂಜಾಮ್ ಜಿಲ್ಲೆಯ ಸಮೀಪದಲ್ಲಿರುವ ಪರ್ವತಭಾಗವನ್ನು ಇಂದಿಗೂ "ಮಹೇಂದ್ರಮಲೈ" ಎಂದು ಕರೆಯಲಾಗುತ್ತಿದೆ. ಆನ್ನಾಮಲೈ, ನಲ್ಲಮಲೈ ಹಾಗೂ ಏಲಾಮಲೈಗಳನ್ನೆಲ್ಲ ಈ ಮಹೇಂದ್ರಗಿರಿ ಒಳಗೊಂಡಿದೆ.

ಸಹ್ಯಾದ್ರಿಯು ಇಂದಿನ ಮಹಾರಾಷ್ಟ್ರ ಹಾಗೂ ಕರ್ನಾಟಕಗಳಲ್ಲಿ ಇದೇ ಹೆಸರಿನ ಪರ್ವತವಾಗಿದೆ.

ಶುಕ್ತಿಮಾನ್ ಪರ್ವತವು ಪಶ್ಚಿಮ ಘಟ್ಟವಾದ ಸಹ್ಯಾದ್ರಿಯಿಂದ ಉತ್ತರಕ್ಕೆ ಇದೆ. ಒಡಿಸಾದಲ್ಲಿ ಹರಿಯುವ ಬ್ರಾಹ್ಮಣಿ ಹಾಗೂ ವೈತರಣಿ ನದಿಗಳು ಋಕ್ಷಗಿರಿಯಲ್ಲೇ ಹುಟ್ಟುವುದೆಂದು ಹೇಳಲಾಗಿದ್ದು ನಿಜವಾಗುತ್ತದೆ. ಇದರಿಂದ ಛೋಟಾನಾಗಪುರದಿಂದ ರಾಂಚಿಯವರೆಗೂ ಹಬ್ಬಿದ ಕಾನನ ಪ್ರದೇಶವು ಈ ಪರ್ವತ ಭಾಗದಲ್ಲಿ ಸೇರುತ್ತದೆ.

ಋಕ್ಷ ಪರ್ವತದ ಪೂರ್ವದ ತುದಿಯಿಂದ ಉತ್ತರದ ಅಂಚಿನವರೆಗೆ ತಿರುಗಿ ಬರುವ ನರ್ಮದೆಯ ಉತ್ತರ ಭಾಗದ ಬೆಟ್ಟವನ್ನು ವಿಂಧ್ಯ ಎಂದು ಕರೆಯುವರು. ಇದರಿಂದ ಶೋಣ, ನರ್ಮದಾ, ಮಹಾನದಿ, ಮಧ್ಯ ಭಾರತದ ತಮಸಾ,

ದಶಾರ್ಣಾ ಮತ್ತು ಈಗಿನ ದಸಾನ ನದಿಗಳು ಉಗಮಿಸುತ್ತವೆ.

ಭೂಪಾಲದಿಂದ ಪಶ್ಚಿಮ, ವಿಂಧ್ಯಾಚಲದ ಭಾಗದಿಂದ ರಾಜಪುತಾನದ ಅರಾವಲೀ ಬೆಟ್ಟಗಳ ವರೆಗೆ ಹಬ್ಬಿದ ಶ್ರೇಣಿಯು ಪಾರಿಯಾತ್ರ ವಾಗಿರಬೇಕು. ಇದರಿಂದ ಹುಟ್ಟುವ ನದಿಗಳಿಂದ ಈ ಮಾತು ನಿಷ್ಕರ್ಷೆಗೆ ಬರುತ್ತದೆ. ಇದರಲ್ಲಿ ಪರ್ಣಾಶಾ, (ಇಂದಿನ ಬನಾಸ್), ವೇತ್ರವತಿ (ಬೇತವಾ), ಚರ್ಮಣ್ವತೀ (ಚಂಬಳಾ), ಮಹಿಲಿ, ಪಾರ್ವತೀ ನದಿಗಳು ಮುಖ್ಯವಾಗಿವೆ. ಇದರಿಂದ ಪಾರಿಯಾತ್ರವನ್ನು 'ಅರಾವಲಿ' ಎಂದು ಗುರುತಿಸಲು ಸಾಧ್ಯ.

## ನದೀ ಸೂಚಿಕೆ:

ಉತ್ತರ, ಪಶ್ಚಿಮದಲ್ಲಿ ಹರಿಯುವ ಸಿಂಧೂವೇ ಎಲ್ಲಕ್ಕಿಂತ ದೊಡ್ಡ ನದಿ. ಈ ನದಿಗೆ ಐದು ಶಾಖಾ ನದಿಗಳಿವೆ. ವಿತಸ್ತಾ (ಝೇಲಮ್), ಇರಾವತಿ (ರಾವಿ), ಚಂದ್ರಭಾಗಾ (ಚಿನಾಬ), ವಿಪಾಶತಿ (ವ್ಯಾಸ) ಹಾಗೂ ಶತದ್ರು (ಸತಲಜ)ಗಳೇ ಆ ಉಪನದಿಗಳು.

ನದೀ ಸೂಚಿಯಲ್ಲಿ ಗಂಗಾ, ಯಮುನಾ ತಟಾಕದ ಹೆಸರು ಎಲ್ಲಕ್ಕಿಂತ ಹೆಚ್ಚಾಗಿ ಬರುತ್ತದೆ. ಯಮುನೆ, ಗಂಗೆಯ ಮುಖ್ಯ ಸಹಾಯಕ ನದಿಯಾಗಿದೆ. ಮಹಾಭಾರತದ ವನಪರ್ವದಲ್ಲಿ ಗಂಗೆಯ ಉಗಮ ಗಂಧಮಾನ ಹಾಗೂ ಬದರಿಗಳ ಹತ್ತಿರ ಇರುವುದಾಗಿ ಉಲ್ಲೇಖವಿದೆ.

ಹಿಮಾಲಯದಲ್ಲಿ ಅಲಕನಂದಾ, ಮಂದಾಕಿನಿ, ಜಾಹ್ನವಿ, ಭಾಗೀರಥಿ— ಈ ನಾಲ್ಕು ಬೇರೆ ಬೇರೆ ಧಾರೆಯಾಗಿರುವುದು ಕಂಡುಬರುತ್ತದೆ. ಮುಂದೆ ಒಂದು ವಿಸ್ತೃತ ಕ್ಷೇತ್ರದಲ್ಲಿ ಈ ಧಾರೆ ಸಂಗಮಿಸಿ ಗಂಗೆಯಾಗಿದೆ. ದೇವ ಪ್ರಯಾಗದಿಂದ ಮುಂದೆ ಸಾಗಿ ಹರಿಯುವ ಪ್ರವಾಹ ಪರಂಪರೆಗೆ ಗಂಗೆ ಎಂಬ ಹೆಸರಿದೆ.

ಬ್ರಹ್ಮಪುತ್ರವೂ ನದಿಗಳಲ್ಲಿ ಒಂದು. ಇದರ ಶಾಖಾನದಿ ಲೋಹಿತ. ದಕ್ಷಿಣದಿಂದ ಗಂಗೆಗೆ ಕೂಡುವ ದೊಡ್ಡ ನದಿಗಳಲ್ಲಿ ಶೋಣ ಮಹತ್ವದ್ದು. ಇದರ ಶಾಖಾ ನದಿ ಜ್ಯೋತಿರಥಾ (ಜೋಹಿಲಾ) ಎಂದು ಪ್ರಸಿದ್ಧವಾಗಿದೆ.

ವಿಂಧ್ಯದ ದೊಡ್ಡ ನದಿಯಲ್ಲಿ ನರ್ಮದೆಯ ಹೆಸರು ಮುಖ್ಯ. ಅಮರ ಕಂಟಕದಿಂದ ಇದು ಹೊರಡುತ್ತಿದ್ದರೂ ಇದರ ಆರಂಭದ ಧಾರೆಗೆ 'ಕಪಿಲಾ' ಎಂದು ಹೆಸರು ಬಂದಿದೆ. ಎರಡನೆಯದಾಗಿ, ಪಯೋಷ್ಣಿ, ಇಂದು ತಾಪಿ, ತಾಪ್ತಿ— ಎಂದು ಗುರುತಿಸಲ್ಪಡುವ ನದಿಯಾಗಿದೆ. ಏಕೆಂದರೆ ತಾಪ್ತಿನದಿ ಈ ಮೂಲ ಸೂಚಿಯಲ್ಲಿಲ್ಲ. ಕೆಲವರು ಪಯೋಷ್ಣಿಯನ್ನು ಗೋದಾವರಿಯ ಉಪನದಿಯಾದ 'ವನಗಂಗೆ' ಎನ್ನುವವರಿದ್ದಾರೆ. ಆದರೆ ಕೆಲ ಪುರಾಣಗಳಲ್ಲಿ ಪಯೋಷ್ಣಿ, ತಾಪ್ತಿ ಎಂಬೆರಡು ನದಿಗಳ ಉಲ್ಲೇಖವಿದೆ.

ಮಹಾನದಿಯು ಓಡಿಸಾದ ಮುಖ್ಯ ನದಿ. ಉಳಿದ ನದಿಗಳಲ್ಲಿ ವೈತರಣಿ, ಬ್ರಾಹ್ಮಣಿ, ಋಷಿಕುಲ್ಯಾಗಳಿವೆ. ಮಹೇಂದ್ರ ಪರ್ವತದಿಂದ ಹರಿಯುವ ಮಹೇಂದ್ರ ತನಯಾ ಕಲಿಂಗದ ವಂಶಧಾರಾ ನದಿಗಳು ಉಪನದಿಗಳಾಗಿವೆ.

ಗೋದಾವರಿಯು ದಕ್ಷಿಣದ ಪ್ರಸಿದ್ಧ ನದಿ. ಇದು ನಾಸಿಕದ ತ್ರ್ಯಂಬಕೇಶ್ವರದಿಂದ ಹುಟ್ಟುತ್ತದೆ. ಇದಲ್ಲದೆ ಈ ಭಾಗದ ವೇಣ್ಣಾ (ವೇನಗಂಗಾ), ಮಂಜಲಾ (ಮಂಜೀರಾ), ಪ್ರವರಾ (ಅಹಮದ್ ನಗರದ ಜಿಲ್ಲೆಯ ನದಿ)ಗಳಿವೆ. ಬಡೋದೆ ಜಿಲ್ಲೆಯ ವಿಶ್ವಾಮಿತ್ರಾ ನದಿಯೂ ಒಂದು. ಗೋದಾವರಿಯ ದಕ್ಷಿಣದ ನದಿಗಳಲ್ಲಿ ಕೃಷ್ಣಾ, ಭೀಮರಥಿ, ತುಂಗಭದ್ರಾ ಇವೆ. ಇವುಗಳಲ್ಲಿ ಕೃಷ್ಣಾ ದೊಡ್ಡದು. ✡

[ಸಾಧಾರ]

"ಈ ಊರಿನಲ್ಲಿ ಹಿಂದೆ ಯಾರಾದರೂ ದೊಡ್ಡ ಮನುಷ್ಯರು ಹುಟ್ಟಿದ್ದರೆ!"

"ಉಹುಂ. ನನಗೆ ಗೊತ್ತಿರುವ ಮಟ್ಟಿಗೆ ಯಾರೂ ಇಲ್ಲ. ಇಲ್ಲಿ ಈ ವರೆಗೆ ಹುಟ್ಟಿದವೆಲ್ಲಾ ಬರೀ ಕೂಸುಗಳೇ."

# ಇಂದ್ರಜಾಲ ಕಾಮಿಕ್ಸ್

ಪ್ರತಿ ವಾರವೂ ನಿಮ್ಮನ್ನೊಂದು ಕೌತುಕಪೂರ್ಣ,
ಸಾಹಸಮಯ ಜಗತ್ತಿಗೆ ಕೊಂಡೊಯ್ಯುತ್ತದೆ.



ಇಂದ್ರಜಾಲ ಕಾಮಿಕ್ಸ್ ಕೌತುಕಪೂರ್ಣ ಕಥೆಗಳ ಮುಖಾಂತರ ಪ್ರತಿವಾರವೂ ರೋಮಾಂಚಕಾರಿ ಸಾಹಸದ ಸವಿಯುಣಿಸುತ್ತದೆ. ಪುಟ ತಿರುಗಿಸಿದಂತೆ, ಉಸಿರು ಕಟ್ಟಿಸುವ ಮತ್ತು ಮೈ ನಿಮಿರೇಳಿಸುವ ಕೌತುಕಗಳು ನಿಜವಾಗಿ ನಡೆದಂತೆ ಕಣ್ಮುಂದೆ ಬಿಂಬಿಸುತ್ತವೆ. ಪ್ರತಿ ಸಂಚಿಕೆಯಲ್ಲೂ ಇಂದ್ರಜಾಲ ಕಾಮಿಕ್ಸ್ ನಿಮಗಾಗಿ ತರುತ್ತಿದ್ದಾರೆ ಒಬ್ಬನಲ್ಲ ಒಬ್ಬ ನಿಮ್ಮ ನೆಚ್ಚಿನ ನಾಯಕನನ್ನು.

ದಟ್ಟಡವಿಯ ಒಡೆಯ, ಶಾಂತಿ ರಕ್ಷಕ ಫ್ಯಾಂಟಮ್; ವಶೀಕರಣ ಜಾಲ ಬೀಸಿ ಶತ್ರುಗಳು ಶರಣಾಗುವಂತೆ ಮಾಡುವ ಮಹಾ ಯಕ್ಷಿಣೀಗಾರ ಮೊಂಡ್ರೇಕ್— ತನ್ನ ಸಂಗಾತಿಗಳಾದ ನಾರ್ದಾ ಮತ್ತು ಲೋಥರ್‌ರೊಂದಿಗೆ; ಮತ್ತು ಬಾಹ್ಯಾಕಾಶದಲ್ಲಿ ಶಾಂತಿಗಾಗಿ ಹೋರಾಡುವ ಬಾಹ್ಯಾಕಾಶ ಸಂಚಾರಿ ವೀರ ಫ್ಲಾಶ್ ಗಾರ್ಡನ್. ಇವರೆಲ್ಲರೂ ಈಗಾಗಲೇ ಮನೆಮನೆಗಳಲ್ಲಿ ಸುಪರಿಚಿತರಾಗಿದ್ದಾರೆ. ಧೈರ್ಯಶಾಲಿ ಧೀರ ಬಹಾದೂರ್; ಮಹಾ ಶ್ರೀಮಂತನಿರಲಿ, ಕಡು ಬಡವನಿರಲಿ, ಎಲ್ಲರನ್ನೂ ಒಂದೇ ತಕ್ಕಡಿಯಲ್ಲಿ ತೂಗುವ ಮಹಾನುಭಾವ ಬುಜ್ ಸಾಯರ್—ಸಮಸ್ಯಾ ನಿವಾರಕರ ಸಂಘದ ಅಧ್ಯಕ್ಷ; ವಂಚಿತರಿಗೆ ನ್ಯಾಯ ದೊರಕಿಸಿಕೊಡಲು ಸಪ್ತ ಸಮುದ್ರದಾಚೆ ಸಾಗಲೂ ಸಿದ್ಧನಿರುವ ಸಾಹಸಿ ಮೈಕ್ ನೋಮ್ಯಾಡ್; ನ್ಯಾಯಕ್ಕಾಗಿ ಹೋರಾಡಿ ಅಸಾಧ್ಯವನ್ನು ಸಾಧ್ಯವಾಗಿಸಬಲ್ಲ ಪರಾಕ್ರಮಿ ಗಾರ್ಥ್; ಸಂತ್ರಸ್ತರಿಗೆ ಸದಾ ಸಹಾಯ ಹಸ್ತವನ್ನೊಡ್ಡುವ ಪೋಲೀಸ್ ಅಧಿಕಾರಿ ಕೆರಿ ಡ್ರೇಕ್; ಮತ್ತು ಜಟಿಲ ಸಮಸ್ಯೆಗಳನ್ನು ಚಿಟಿಕೆ ಮಾತ್ರದಲ್ಲಿ ಬಗೆಹರಿಸಬಲ್ಲ ಮೇಧಾವಿ ಪತ್ತೆದಾರ ರಿಪ್ ಕಿರ್ಬಿ...ಎಲ್ಲರೂ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವ ವೀರಾಧಿ ವೀರರು.. ವಾರದಿಂದ ವಾರಕ್ಕೆ ಮನೆ ಮಂದಿಗೆಲ್ಲ ನವರಸಗಳ ರಸದೂಟವನ್ನು ಉಣಿಸಲು ಇಂದ್ರಜಾಲದ ಪುಟಗಳಲ್ಲಿ ಜೀವ ತಳೆದಿದ್ದಾರೆ.

ಇಂದ್ರಜಾಲ ಕಾಮಿಕ್ಸ್‌ನ ಪ್ರತಿಗಳಿಗಾಗಿ ಇಂದೇ ನಿಮ್ಮ ಸಮೀಪದ ವರ್ತಮಾನ ಪತ್ರಿಕಾ ಮಾರಾಟಗಾರರನ್ನು ಸಂಪರ್ಕಿಸಿರಿ ಅಥವಾ ನಿಮ್ಮ ಚಂದಾವನ್ನು – ದಿ ಮ್ಯಾನೇಜರ್, ದಿ ಟೈಮ್ಸ್ ಆಫ್ ಇಂಡಿಯಾ, 63, [illegible], ಎಗ್ಮೋರ್, ಮದ್ರಾಸು-600 008—ಈ ವಿಳಾಸಕ್ಕೆ ಕಳುಹಿಸಿರಿ. ಅಥವಾ ಬೊಂಬಾಯಿ, ದಿಲ್ಲಿ, ಕಲ್ಕತ್ತ ಮತ್ತು ಅಹಮದಾಬಾದುಗಳಲ್ಲಿರುವ ನಮ್ಮ [illegible] ಸರ್ಕ್ಯುಲೇಶನ್ ವಿಭಾಗಕ್ಕೂ ಬರೆಯಬಹುದು.

# ಸಮಯ ಸಿಗುತ್ತಿಲ್ಲವೆ?

ವಿ. ಎ. ಜೋಶಿ

"ನನಗೆ ಎಳ್ಳಷ್ಟೂ ಸಮಯವಿಲ್ಲ,"

"ದಿವಸಕ್ಕೆ ೪೮ ತಾಸುಗಳಿದ್ದರೆ ಒಳಿತಾಗುತ್ತಿತ್ತು,"

"ಓಹ್, ನನ್ನ ಕೆಲಸಗಳೇ ಮುಗಿಯುವದಿಲ್ಲ!"– ಹೀಗೆ ಹಲವರು ಹೇಳುತ್ತಿರುವುದನ್ನು ನಾವು ಅನುದಿನ ಕೇಳುತ್ತೇವೆ. ಉದ್ದಿಮೆದಾರರು, ಖಾಸಗಿ ಕಂಪನಿಗಳ ಮುಖ್ಯಸ್ಥರು, ಉನ್ನತ ಸರಕಾರಿ ಅಧಿಕಾರಿಗಳು, ಗುರುತರ ಹೊಣೆ ಹೊತ್ತವರು ಸಮಯ ಸಿಕ್ಕುತ್ತಿಲ್ಲ ಎಂದು ಗೊಣಗುವುದು ಸಹಜ.

ಆದರೆ ಈ ವಿಚಾರ ಸರಣಿ ಸರಿಯಾದುದಲ್ಲ ಎಂದು ಗಮನಿಸಬೇಕು. ಹೆನ್ರಿ ಫೋರ್ಡ್ ಹೇಳಿದರು– "ಸದಾ ಕಾರ್ಯಮಗ್ನನಿಗೆ ಎಲ್ಲ ಕೆಲಸಗಳನ್ನು ಮಾಡಲು ಸಮಯ ಸಿಕ್ಕೇಸಿಗುತ್ತದೆ." ನಿಜ ಹೇಳಬೇಕೆಂದರೆ, 'ಅವಿಶ್ರಾಂತವಾಗಿ ದುಡಿಯುವವರು ಮಾತ್ರ ಹಲವಾರು ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಬಲ್ಲರು. ಸಮಯದ ಒತ್ತಡದಲ್ಲಿಯೆ ಅವರು ಬಹಳಷ್ಟು ಕೆಲಸ ಕೈಕೊಳ್ಳುವುದುಂಟು. ಸಮಯದ ಸದುಪಯೋಗ ಮಾಡಿಕೊಳ್ಳುವುದು ಹೇಗೆ? ಮೊದಲು ಸಮಯ ಪ್ರಜ್ಞೆಯನ್ನು ಹದವಾಗಿ ಬಿತ್ತಿ ಬೆಳೆಯುವುದು ಅವಶ್ಯ. ನಮ್ಮ ಪರಿಸರದಲ್ಲಿ ಈ ಪ್ರಜ್ಞೆ ಔಷಧಕ್ಕೂ ಸಿಕ್ಕುವುದಿಲ್ಲ. ವೇಳೆಯ ಬೆಲೆಯನ್ನು ನಾವು ಅರಿತುಕೊಂಡಿಲ್ಲ.

ಸಮಯವನ್ನು 'ಏಕ ಮುಖಿ' ಎಂದು ಕರೆಯುವರು. ಹೊತ್ತು ಹೋದರೆ ಮರಳಿ ಬಾರದಷ್ಟೇ? ಅಂತೆಯೆ ಮುತ್ತಿಗಿಂತ ಹೊತ್ತು ಉತ್ತಮ ಎಂದು ಹಿರಿಯರು ಹೇಳುವುದು. ಹಣ ಹಾಗೂ ಸಾಮಗ್ರಿಗಳನ್ನು ಜನರು ಕಾಳಜಿಯಿಂದ ಕಾಪಾಡುವರು. ಆದರೆ ಸಮಯವೂ ಪೋಲು ಮಾಡಬಾರದ ಸಂಪತ್ತು ಎಂದು ಜನ ಅರಿತಿಲ್ಲ. ಅದು ತಮ್ಮೆದುರು ಧಾರಾಳವಾಗಿ ಬಿದ್ದುಕೊಂಡಿದೆ ಎಂದು ಅವರು ತಿಳಿದುಕೊಂಡಿರುವುದರಿಂದ ಅದಕ್ಕೆ ವಿಶೇಷ ಮಹತ್ವ ಸಿಗುತ್ತಿಲ್ಲ. ಖ್ಯಾತ ಶೋಧಕ ಚಾರ್ಲ್ಸ್ ಕೆಟರಿಂಗ್ ಅವರ ಉಕ್ತಿಯೊಂದು ಮೆಲುಕು ಹಾಕುವಂತಿದೆ–"ಭವಿಷ್ಯತ್ತಿನಲ್ಲಿ ನನ್ನ ಆಸಕ್ತಿ ಹುದುಗಿದೆ. ಏಕೆಂದರೆ ನಾನು ನನ್ನ ಜೀವನದ ಮುಂದಿನ ಬಹುಭಾಗವನ್ನು ಅಲ್ಲಿ ಕಳೆಯಬೇಕಿದೆ."

ನೀವು ಕೈಕೊಳ್ಳಬೇಕಾದ ಮಹತ್ವದ ಕಾರ್ಯಗಳ ವಾರ್ಷಿಕ ವೇಳಾ ಪಟ್ಟಿಯೊಂದನ್ನು ಮೊದಲು ರೂಪಿಸಿಕೊಳ್ಳಬೇಕು. ಅದರ ಆಧಾರದಿಂದ ತ್ರೈಮಾಸಿಕ, ಮಾಸಿಕ ಹಾಗೂ ಸಾಪ್ತಾಹಿಕ ಕಾರ್ಯ ಯೋಜನೆಗಳನ್ನು ವಿವರವಾಗಿ ಹಮ್ಮಿಕೊಳ್ಳಬಹುದು. ಪ್ರತಿದಿನ ಬೆಳಗಿನಲ್ಲಿ ಅಂದು ಕೈಗೆತ್ತಿಕೊಳ್ಳಬೇಕಾದ ಕೆಲಸಗಳ ಬಗ್ಗೆ ಐದಾರು ನಿಮಿಷ ರೂಪರೇಷೆ ತಯಾರಿಸಿಕೊಳ್ಳುವುದು ಒಳಿತು. ವೇಳೆಯ ಸುಸಂಬದ್ಧ ವಿಂಗಡಣೆ ಈ ಯೋಜನೆಯ ತಳಹದಿಯಾಗಿರಬೇಕು. ಮಹಾತ್ಮಾ ಗಾಂಧೀಜಿ ತಮ್ಮ ಕಾರ್ಯಬಾಹುಳ್ಯದ ಬದುಕಿನಲ್ಲಿಯೆ ಪ್ರಾರ್ಥನೆಗಾಗಿ ಸಮಯ ಕಾಯ್ದಿಡುತ್ತಿದ್ದ ರೀತಿಯನ್ನು ಇಲ್ಲಿ ನೆನೆಯಬೇಕು. ಅವರು ಆಶ್ರಮದಲ್ಲಿರಲಿ, ಪ್ರವಾಸದಲ್ಲಿರಲಿ ದಿನವೂ ಪ್ರಾರ್ಥನೆ ಸಲ್ಲಿಸುತ್ತಿದ್ದರು. ಮುಂಜಾನೆ ಮತ್ತು ಸಂಜೆ–ತಪ್ಪದೆ ಪ್ರಾರ್ಥನೆ ಮಾಡುತ್ತಿದ್ದರು. ಬೆಳಿಗ್ಗೆ–೪–೨೦ಕ್ಕೆ ಹಾಗೂ ಸಂಜೆ ೭ ಗಂಟೆಗೆ. ಒಮ್ಮೆ ಗಾಂಧೀಜಿ ಲಂಡನ್ನಿಗೆ ಹೋಗಿದ್ದಾಗ ಬ್ರಿಟಿಶ್ ಸಚಿವರು

ಗುಂಪು ಅವರ ದರ್ಶನಕ್ಕಾಗಿ ಸಂಜೆ ಏಳು ಗಂಟೆಗೆ ಬರುವುದಾಗಿ ಗೊತ್ತು ಮಾಡಿದ್ದರು. ದೀನ ಬಂಧು ಆಂಡ್ರೂಸರು ಈ ಸಂದರ್ಶನವನ್ನು ಏರ್ಪಡಿಸಿದ್ದರು. ಅಂದಿನ ಸಂಜೆಯ ತಮ್ಮ ಪ್ರಾರ್ಥನೆಯನ್ನು ಗಾಂಧೀಜಿ ದಾರಿಯಲ್ಲಿ ಮೋಟಾರಿನಲ್ಲಿಯೇ ನಡೆಸಿದರು!

ಕೈಗೆತ್ತಿಕೊಂಡ ಕೆಲಸದಲ್ಲಿಯ ತನ್ಮಯತೆ ಸಾಫಲ್ಯಕ್ಕೆ ದಾರಿ ಮಾಡಿಕೊಡುತ್ತದೆ. ಬದುಕಿನಲ್ಲಿ ಬಹಳಷ್ಟು ಮಹತ್ತರವಾದುದನ್ನು ಸಾಧಿಸಿದ ನೆಪೋಲಿಯನ್ ಏಕಕಾಲಕ್ಕೆ ಹಲವಾರು ಕಾರ್ಯಗಳನ್ನು ಸಮರ್ಥವಾಗಿ ನಿರ್ವಹಿಸಬಲ್ಲವನಾಗಿದ್ದ. ಕಾರ್ಯದರ್ಶಿಗೆ ಪತ್ರವೊಂದನ್ನು ಹೇಳಿ ಬರೆಸುತ್ತಲೆ ಆತ ವರದಿ ಕೇಳುತ್ತಿದ್ದ, ಓದುತ್ತಿದ್ದ, ಸ್ವತಃ ಬರೆಯುತ್ತಿದ್ದ. ಅಂಥದ 'ಶತಾವಧಾನಿ'ಗಳು ಇಂಥ ಇನ್ನೊಂದು ಮಾದರಿಯಾಗಿದ್ದಾರೆ. ನೆರೆದ ಭಕ್ತರು ನೂರಾರು ಪ್ರಶ್ನೆಗಳನ್ನು ಶತಾವಧಾನಿಗೆ ಕೇಳುವರು. ಅವುಗಳಿಗೆ ಮನಸ್ಸಿನಲ್ಲಿಯೇ ಉತ್ತರ ಕಲ್ಪಿಸಿಕೊಳ್ಳುವ ಅವರು ಒಂದೊಂದಾಗಿ ಪರಿಹಾರಗಳನ್ನು ನೀಡುತ್ತ ಹೋಗುವುದು ಬೆರಗು ಹುಟ್ಟಿಸುತ್ತದೆ.

ಸಮಯದ ಸರಿಯಾದ ವಿಭಜನೆ ಮಾಡುವುದು ಅವಶ್ಯ. ನೈತಿಕ ಅಗತ್ಯಗಳನ್ನು ಪೂರೈಸಲು ದಿನದ ಕೆಲ ಭಾಗ ಕಾದಿರಿಸಬೇಕಾಗುತ್ತದೆ. ನಿದ್ರೆ, ವಿಶ್ರಾಂತಿ, ಆಹಾರ, ವಿಹಾರಗಳು ದಿನದ ಬಹುಭಾಗವನ್ನು ಕಬಳಿಸುವುದುಂಟು. "ನಾನು ಕಡಿಮೆ ಮಲಗಿದರೆ ಸಮಯದ ಉಳಿತಾಯ ಆಗಲಿಕ್ಕಿಲ್ಲವೆ? ನಾನು ವಿಶ್ರಾಂತಿಯ ವೇಳೆಯಲ್ಲಿ ಕಡಿತ ಮಾಡಿ ಸಮಯ ಉಳಿಸಬಹುದಲ್ಲ"— ಎಂಬುದು ಸರಿಯಾದ ವಿಚಾರವಲ್ಲ. ನಿದ್ರೆ ಹಾಗೂ ವಿಶ್ರಾಂತಿ ಕಡಿಮೆ ಮಾಡಿದರೆ, ದಣಿವು ಹೆಚ್ಚಿ ಕಾರ್ಯದಕ್ಷತೆ ಕುಂಠಿತಗೊಳ್ಳುವುದು. ಆದ್ದರಿಂದ ಇಲ್ಲಿ ಸಮಯದ ಉಳಿತಾಯ ಸಾಧಿಸಿದರೂ ಅದು ಯಾವುದೇ ರೀತಿಯಲ್ಲಿ ನೆರವಾಗಲಾರದು. ಬೆಳಗಿನ ಜಾವ ಬೇಗ ಏಳುವುದರಿಂದ ಬಹಳಷ್ಟು ಪ್ರಯೋಜನಗಳಿವೆ. ಆಗ ಮನಸ್ಸು ಪ್ರಫುಲ್ಲಿತವಾಗಿರುವುದರಿಂದ ಮಹತ್ವದ ಕೆಲಸಗಳನ್ನು ತೀವ್ರವಾಗಿ ಸಮರ್ಪಕವಾಗಿ ಮುಗಿಸಬಹುದು. ಮುಂಜಾನೆ ಸುತ್ತಲಿನ ವಾತಾವರಣವೂ ಶಾಂತವಾಗಿದ್ದು ಕೆಲಸಕ್ಕೆ ಉತ್ತೇಜನ ನೀಡುವುದು. ಕೆಲವರಿಗೆ ಬೆಳಗಿನ ಜಾವ ಬೇಗ ಏಳಲು ಆಗುವುದಿಲ್ಲ. ಅಂಥವರು ರಾತ್ರಿ ಹೆಚ್ಚು ಹೊತ್ತು ಕುಳಿತುಕೊಳ್ಳಬಹುದು. ಖ್ಯಾತ ಮುತ್ಸದ್ದಿ ಸರ್ ವಿನ್ಸ್ಟನ್ ಚರ್ಚಿಲ್ ಮಧ್ಯ ರಾತ್ರಿಯ ನಂತರವೂ ರಾಜಕಾರ್ಯ ಪ್ರವೃತ್ತರಾಗಿರುತ್ತಿದ್ದರು. ಹೊಟ್ಟೆ ಪೂರ್ಣ ತುಂಬಿದಾಗ ಮಹತ್ವದ ಕೆಲಸಗಳನ್ನು ಕೈಗೆತ್ತಿಕೊಳ್ಳಲಿಕ್ಕೆ ಆಗದು. ರಾತ್ರಿಯ ಔತಣ ಕೂಟಗಳಿಗೆ ಹೋಗುವುದಿದ್ದಾಗ, ಅದರ ನಂತರ ಯಾವ ಮಹತ್ವದ ಕೆಲಸವನ್ನೂ ಇಟ್ಟುಕೊಳ್ಳದಿರುವುದೇ ಒಳ್ಳೆಯದು.

ಸಶಕ್ತರಾಗಿ ಉಳಿದರೆ ಮಾತ್ರ ಸೃಜನಾತ್ಮಕ ಕಾರ್ಯಗಳನ್ನು ಕೈಕೊಳ್ಳಲು ಸಾಧ್ಯ. ಆದ್ದರಿಂದ ದಿನದ ಕೆಲ ಭಾಗವನ್ನು ಶರೀರಕ್ಕೆ ಹೊಂದಿಕೆಯಾಗುವ ವ್ಯಾಯಾಮದಲ್ಲಿ ತೊಡಗಿಸಬೇಕು. ಆಟದಲ್ಲಿ ಆಸಕ್ತಿ ತೋರುವುದು ಒಳಿತು. ಈಜುವುದು, ವಾಯು ವಿಹಾರ ಇವೂ ಒಳ್ಳೆಯವೆ. ಇತ್ತೀಚೆ ಯೋಗಾಭ್ಯಾಸ ತುಂಬ ಜನಪ್ರಿಯವಾಗುತ್ತಿದೆ. ಸಶಕ್ತ ಶರೀರ ಸಬಲ ಮನಸ್ಸನ್ನು ಹೊಂದಿರುವುದರಿಂದ 'ಬಿಳಿಯ ಕಾಲರಿನ' ಕೆಲಸದವರು ಹಾಗೂ ಬುದ್ಧಿಜೀವಿಗಳು ಆರೋಗ್ಯದ ಕಡೆಗೆ ಗಮನ ಹರಿಸುವುದು ಅಗತ್ಯ. ಎಲ್ಲ ದಿನಗಳನ್ನು ಏಕ ಪ್ರಕಾರವಾಗಿ ತಿಳಿಯಬೇಕು. ಕೆಲ ದಿನಗಳನ್ನು ಬಿಡುವಿನವೆಂದು ಭಾವಿಸಿದರೆ ದೈನಂದಿನ ಕಾರ್ಯ ಚಕ್ರಕ್ಕೆ ಅಷ್ಟು ಮಟ್ಟಿಗೆ ವ್ಯತ್ಯಯ ಉಂಟಾಗುತ್ತದೆ. ಇದು ಕೆಲಸದ ಒಟ್ಟು ಸಾಫಲ್ಯದ ಮೇಲೆ ಸ್ವಲ್ಪದರೂ ಪರಿಣಾಮ ಬೀರುತ್ತದೆ. ಕೆಲವು ದಿನನಿತ್ಯದ ಚಟುವಟಿಕೆಗಳಲ್ಲಿ ಅಲ್ಪ ಸಮಯ ಉಳಿಸಲು ಸಾಧ್ಯ. ಸ್ನಾನ,ಶೇವಿಂಗುಗಳಲ್ಲಿ ಪ್ರತಿನಿತ್ಯ ಐದು ನಿಮಿಷ ಉಳಿಸಿದರೆ, ವರ್ಷಕ್ಕೆ ಮೂವತ್ತು ತಾಸುಗಳ ಉಳಿತಾಯವಾಗುತ್ತದೆ ! ದೈನಂದಿನ ಜೀವನವನ್ನು ಯಂತ್ರದಂತೆ ನಿಯಂತ್ರಿಸುವುದು ಹಿತ. ಅನಿಯಂತ್ರಿತ ಜೀವನ ಅರ್ಥಹೀನ. ಸಂತ ತಿರುವಳ್ಳುವಾರ್ ಹೇಳಿದ ಮಾತೊಂದು

ಸ್ಮರಣೀಯ– "ವ್ಯಕ್ತಿ ಹಲವು ದರ್ಶನ ಶಾಸ್ತ್ರಗಳನ್ನು ಅಭ್ಯಸಿಸಬಹುದು, ಅರಗಿಸಿಕೊಳ್ಳಬಹುದು. ಆದರೆ ನಿಯಂತ್ರಣವಿಲ್ಲದ ಜೀವನದಿಂದ ಏನನ್ನೂ ಸಾಧಿಸಲಾಗದು."

ಶರೀರ ದಣಿದಾಗ ಇಲ್ಲವೆ ಅಸ್ವಸ್ಥಗೊಂಡಾಗ ಯಾವ ಕೆಲಸವನ್ನೂ ದಕ್ಷತೆಯಿಂದ ನಿರ್ವಹಿಸಲು ಆಗುವುದಿಲ್ಲ. ಇಂತಹ ಪ್ರಸಂಗಗಳಲ್ಲಿ ಪೂರ್ಣ ವಿಶ್ರಾಂತಿ ಪಡೆದು ಚೇತರಿಸಿಕೊಳ್ಳುವುದು ಒಳಿತು. ಒಂದೇ ಪ್ರಕಾರದ ಕೆಲಸ ಮಾಡಿ ಮನಸ್ಸು ದಣಿದಾಗ ಬೇರೆ ಪ್ರಕಾರದ ಕೆಲಸ ಕೈಗೆತ್ತಿಕೊಳ್ಳುವುದರಿಂದ ಬೇಸರ ನೀಗಿಸಬಹುದು. ದಿನನಿತ್ಯ ಬೇಕಾಗುವ ಸಲಕರಣೆಗಳನ್ನು ವ್ಯವಸ್ಥಿತವಾಗಿ ಜೋಡಿಸಿ ಇಟ್ಟುಕೊಳ್ಳುವುದರಿಂದ ವ್ಯರ್ಥ ಹುಡುಕಾಟದಲ್ಲಿ ಸಮಯ ಕಳೆದು ಹೋಗದು. ತನ್ಮಯತೆಯಿಂದ ಕೆಲಸ ನಿರ್ವಹಿಸಲು ಅನುಕೂಲವಾಗುವುದು. ಸಂದರ್ಶಕರು ಕೆಲವೊಮ್ಮೆ ಬಹಳಷ್ಟು ವೇಳೆ ತೆಗೆದುಕೊಳ್ಳುವುದುಂಟು. ಗೆಳೆಯರು, ಬಂಧು–ಬಾಂಧವರು ಕಚೇರಿಗೆ ಬರುವುದನ್ನು ತಡೆಗಟ್ಟುವುದು ಒಳ್ಳೆಯದು. ನೀವು ನಿಮ್ಮ ಕಚೇರಿಯ ವೇಳೆಯಲ್ಲಿ ಇಂಥ ಭೆಟ್ಟಿಗಳನ್ನು ಬಯಸುವುದಿಲ್ಲ ಎಂದು ಅವರಿಗೇ ಮನವರಿಕೆಯಾಗಬೇಕು. ಅಂದಾಗ ಇಂತಹ ಭೆಟ್ಟಿಗಳು ತಂತಾನೇ ಕಡಿಮೆಯಾಗುತ್ತವೆ.

ಉನ್ನತ ಹುದ್ದೆಗಳಲ್ಲಿರುವವರು ತಮ್ಮ ಕುಟುಂಬಕ್ಕಾಗಿ ಅಷ್ಟು ಸಮಯವನ್ನೂ ವ್ಯಯಿಸುವ ಸ್ಥಿತಿಯಲ್ಲಿ ಇರುವುದಿಲ್ಲ. ಕೌಟುಂಬಿಕ ಸ್ವಾಸ್ಥ್ಯದ ದೃಷ್ಟಿಯಿಂದ ಇದು ಒಳ್ಳೆಯದಲ್ಲ ಎಂದು ಬೇರೆ ಹೇಳಬೇಕಿಲ್ಲ. ಹೆಂಡತಿ ಹಾಗೂ ಮಕ್ಕಳು ಕುಟುಂಬದ ಹಿರಿಯನ ಸಂಗ ಸುಖಕ್ಕಾಗಿ ಹಾತೊರೆಯುತ್ತಿರುವುದುಂಟು. ಸಂಜೆ ಇಲ್ಲವೆ ರಾತ್ರಿಯ ಒಂದೆರಡು ತಾಸುಗಳನ್ನು ಮನೆಯ ಜನರೊಡನೆ ಕಳೆಯುವುದನ್ನು ರೂಢಿಸಿಕೊಳ್ಳಬೇಕು. ರಾತ್ರಿಯ ಊಟವನ್ನು ಜೊತೆಯಾಗಿ ವಿರಾಮದಲ್ಲಿ ಮಾಡಲು ಸಾಧ್ಯ. ತುಂಬ ಚಟುವಟಿಕೆಯ ಬದುಕು ನಡೆಸುತ್ತಿರುವವರು ಇನ್ನೊಂದು ಸಮಸ್ಯೆಯನ್ನು ಅನುದಿನ ಎದುರಿಸುತ್ತಿರುವರು. ಅವರಿಗೆ ವಿಚಾರ ಮಾಡಲು ವೇಳೆ ಸಿಗುವುದಿಲ್ಲ. ಸಾಕಷ್ಟು ವಿಚಾರವಿಲ್ಲದೆ ಕೆಲವೊಂದು ಕಾರ್ಯ ಕೈಗೆತ್ತಿಕೊಳ್ಳಲು ಆಗುವುದಿಲ್ಲ. ಬೆಳಗಿನ ವಾಯು ವಿಹಾರದ ವೇಳೆ ವಿಚಾರಕ್ಕೆ ತಕ್ಕುದು. ಹೊಣೆಗಾರಿಕೆಯನ್ನು ಸಹೋದ್ಯೋಗಿಗಳೊಡನೆ ಹಂಚಿಕೊಳ್ಳುವುದರಿಂದ ಕೆಲಸದ ಒತ್ತಡವನ್ನು ಕಡಿಮೆ ಮಾಡಬಹುದು. ಚೀನದ ಮಾವೋತ್ಸೆ ತುಂಗ ಅವರ ಕಾರ್ಯ ವಿಧಾನ ಈ ದೃಷ್ಟಿಯಿಂದ ಅನುಕರಣೀಯ. ಅವರು ಪ್ರಮುಖ ಅತಿಥಿಗಳನ್ನು ಮಾತ್ರ ಭೆಟ್ಟಿಯಾಗುತ್ತಿದ್ದರಲ್ಲದೆ, ಅತಿ ಮುಖ್ಯ ವಿಷಯಗಳ ಕಡೆಗೆ ಮಾತ್ರ ಗಮನಹರಿಸುತ್ತಿದ್ದರು.

ಅವಿಶ್ರಾಂತ ಹಾಗೂ ಕಾರ್ಯಮಗ್ನ ಜೀವನ ನಡೆಸುತ್ತಿರುವವರಿಗೆ ಪತ್ರಿಕೆಗಳನ್ನು ಓದಲೂ ವೇಳೆ ಸಿಗದಿರುವುದು ಸಹಜ. ಅಂಥವರು




"ನಿಮಗ್ಯಾಕ್ರೀ ಕಷ್ಟ. ಕೋಟನ್ನ ನಾನೇ ತೆಗೀತೀನಿ ಬಿಡಿ."

ಪತ್ತಾರು ಪತ್ರಿಕೆಗಳನ್ನು ತರಿಸುವುದಕ್ಕಿಂತ ತಮ್ಮ ಅಭಿರುಚಿಯ ಒಂದೆರಡು ಪತ್ರಿಕೆಗಳನ್ನು ನಿಯಮಿತವಾಗಿ ಓದುವುದನ್ನು ರೂಢಿಸಿಕೊಂಡರೆ ಸಾಕು. ಪುಸ್ತಕಗಳ ಆಯ್ಕೆಯಲ್ಲಿಯೂ ಇದೇ ಕ್ರಮ ಅನುಸರಿಸಬಹುದು. ತೀವ್ರ ಓದುವ ವಿಧಾನವನ್ನು ಅವರು ಅಳವಡಿಸಿಕೊಳ್ಳಬೇಕು. ಅಂದರೆ ಅವರಿಗೆ ಸಿಗುವ ಅಲ್ಪ ವೇಳೆಯಲ್ಲಿ ಸ್ವಲ್ಪವಾದರೂ, ಓದಲು ಸಾಧ್ಯವಾಗುವುದು. ಹೊಣೆಗಾರಿಕೆಯ ಸ್ಥಾನಗಳಲ್ಲಿ ಇರುವವರು ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ವಿದ್ಯಮಾನಗಳ ಪರಿಚಯ ಹೊಂದಿರಬೇಕಾಗುತ್ತದೆ. ಇಲ್ಲದಿದ್ದರೆ ಅವರು ಸಂಭಾಷಣೆ–ಚರ್ಚೆಗಳಲ್ಲಿ ಹಿಂದೇಟು ಹಾಕುವುದುಂಟು. ಇದು ಅಪರೋಕ್ಷವಾಗಿ ಅವರ ವ್ಯಕ್ತಿತ್ವದ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ.

ಸಮಯದ ಮೇಲೆ ನಿಯಂತ್ರಣವನ್ನು ಸಾಧಿಸುವುದು ಕಷ್ಟಸಾಧ್ಯ. ಆದರೆ ಈ ದಿಶೆಯಲ್ಲಿ ಪ್ರಾಮಾಣಿಕ ಯತ್ನ ಕೈಕೊಳ್ಳಬೇಕಷ್ಟೆ. ಸುಸಂಬದ್ಧ ಹಾಗೂ ವ್ಯಾವಹಾರಿಕ ಯೋಜನೆಗಳನ್ನು ಹಮ್ಮಿಕೊಂಡು ಮುನ್ನಡೆಯುವುದು ಅಗತ್ಯ. ಜೊತೆಗೆ, ದಿನನಿತ್ಯ ಮಾಡಬೇಕಾದ ಕಾರ್ಯಗಳ ತುರ್ತು ಯೋಜನೆಯೊಂದು ಯಾವತ್ತೂ ಕೈಯಲ್ಲಿರಬೇಕು. ಪ್ರತಿ ರಾತ್ರಿ, ದಿನದ ಕೆಲಸದ ಕೊನೆಯಲ್ಲಿ, ಅಂದಿನ ದಿನಚರಿಯ ವಿವೇಚನೆಗೆ ಐದು ನಿಮಿಷಗಳನ್ನು ಮೀಸಲಾಗಿರಿಸಿ. ಇದರಿಂದ 'ನಾಳೆ'ಗಳನ್ನು ಹೆಚ್ಚು ಅರ್ಥಪೂರ್ಣವಾಗಿ ಯೋಜಿಸಲು ಹಾಗೂ ವಿನಿಯೋಗಿಸಲು ಅನುಕೂಲವಾಗುವುದು. ✡

( ಸಾಧಾರ )



## ಸಂಶೋಧನೆಯಿಂದ ಅನಾಹುತ ?

೧೯೧೧ ರ ಅಕ್ಟೋಬರ್ ೪ ರಂದು ಲಂಡನ್ನಿನ ಅರ್ಲ್ಸ್ ಕೋರ್ಟಿನ ಅಂಡರ್ ಗ್ರ್ಯಾಂಡ್ ರೇಲ್ವೆ ಸ್ಟೇಶನ್ನಿನಲ್ಲಿ ಮೊತ್ತಮೊದಲ ಬಾರಿಗೆ ಎಸ್ಕಲೇಟರ್ ಬಳಕೆಗೆ ಬಂದಿತ್ತು.

ಮೊದಮೊದಲಿಗೆ ಬಹಳ ಜನ ಅದನ್ನು ಬಹು ಅನುಮಾನದಿಂದಲೆ ನೋಡುತ್ತಿದ್ದರು. ಹಾಗಾಗಿ ಅದು ಎಷ್ಟು ಸುರಕ್ಷಿತವಾಗಿದೆಯೆಂಬುದನ್ನು ಜನಸಾಮಾನ್ಯರಿಗೆ ಬಿಂಬಿಸಲು ರೇಲ್ವೆ ಅಧಿಕಾರ ವರ್ಗ; ಮರದ ಕಾಲಿದ್ದ ಒಬ್ಬನನ್ನು ನೇಮಿಸಿದರು. ಪ್ರತಿದಿನ ಅದರ ಮೇಲೆ ಕೆಳಗೆ ಓಡಾಡುವುದು ಆತನ ಕೆಲಸ.

ಇದಾದ ಒಂದೆರಡೇ ದಿನಗಳಲ್ಲಿ ಓರ್ವ ಹೆಂಗಸು ತನ್ನ ಪುಟಾಣಿ ಮಗನಿಗೆ, ಎಸ್ಕಲೇಟರನ್ನು ತೋರಿಸುತ್ತಾ, "ನೋಡಿದೆಯಾ? ಇಂಥಾ ವಿಚಿತ್ರ ಸಂಶೋಧನೆಗಳನ್ನು ಬಳಸುವುದರಿಂದ ಜನರಿಗೆ ಎಂಥಾ ಅನಾಹುತವಾಗುತ್ತದೆ ಎಂಬುದನ್ನು?" ಎಂದು ಆ ಮರಗಾಲ ಮನುಷ್ಯನನ್ನು ತೋರಿಸುತ್ತಾ ಹೇಳಿದಳು. ಈ ಮಾತುಗಳನ್ನು ಕೇಳಿಸಿಕೊಂಡ ರೇಲ್ವೆ ಅಧಿಕಾರಿಗಳು ಆ ಮರಗಾಲ ಮನುಷ್ಯನನ್ನು ಅಂದಿನಿಂದಲೇ ನಿವೃತ್ತಿಗೊಳಿಸಿದರೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಸಂಗ್ರಹ: ಎಸ್. ವಿಶ್ವನಾಥ

ಅನುದಿನ ಭಾವ
ಹಲವು;
ನಲಿವು,
ಒಲವು, ಗೆಲವು...

ಅಭಿವ್ಯಕ್ತಿಗೆ
# ಮಫತ್‌ಲಾಲ್ ಉಡುಪು
## ದಿನದ ಸಂತಸವನ್ನು ಹೆಚ್ಚಿಸಲು ಮುಡುಪು

ಮೈ-ಮನಗಳನ್ನು ಆಕರ್ಷಿಸುವ
ಮೃದುವಾದ ಬಟ್ಟೆ. ಪೋಲಿಯೆಸ್ಟರ್,
ಪೋಲಿಯೆಸ್ಟರ್-ಬ್ಲೆಂಡ್ ಹಾಗೂ ಕಾಟನ್
ಬಟ್ಟೆಗಳಲ್ಲಿ ನವೀನ ಆವಿಷ್ಕಾರ.
ಬಣ್ಣದ ಬೆಡಗು, ನೆಯ್ಗೆಯ ನಯ,
ಮತ್ತು ವಿನ್ಯಾಸದ ಅಂದ
ನಿಮ್ಮ ಚೆಲುವನ್ನು ಹೆಚ್ಚಿಸುತ್ತವೆ...
ಬೆಳಗಿನಿಂದ ಬೈಗಿನವರೆಗೆ.

**ಮಫತ್‌ಲಾಲ್ ಫ್ಯಾಬ್ರಿಕ್ಸ್**



# ಕುಷ್ಠ ರೋಗ

## ಒಂದು ಪ್ರಗತಿ ವರದಿ

ಗೋಪಾಲಕೃಷ್ಣ ಎಡನೀರು

ಕೊಳೆತು ಕರಗಿದ ಕೈಕಾಲುಗಳು. ಅಸಹ್ಯ ಶರೀರ, ವಿಕಾರವಾದ ಮುಖ, ಹೇಸಿಗೆ ತರಿಸುವಂತಹ ನಡವಳಿಕೆಗಳು. ಅದನ್ನು ಕಂಡಾಗ ಉಗಿಯುವವರೇ ಹೆಚ್ಚು. ಕೆಲವರು ಅದನ್ನು ಮುಚ್ಚುವ ಪ್ರಯತ್ನ ಮಾಡುತ್ತಾರೆ. ಕೆಲವರು ಅದನ್ನೇ ಪ್ರದರ್ಶಿಸಿ ಬದುಕಿನ ಹಾದಿಯನ್ನು ಕಂಡುಕೊಳ್ಳುತ್ತಾರೆ. ಅದು ವಾಸಿಯಾಗುವಂತಹ ರೋಗವಲ್ಲ ಎಂದು ಎಲ್ಲರ ನಂಬಿಕೆ. ಪೂರ್ವ ಜನ್ಮದ ಪಾಪದ ಫಲ ಎಂದು ಮೂಗುಮುರಿಯುತ್ತಾರೆ ಇನ್ನು ಕೆಲವರು. ಆದರೆ ಅದು ವಾಸಿಯಾಗದ ಗಂಡಾಂತರವೇನಲ್ಲ. ಪೂರ್ವ ಜನ್ಮದ ಪಾಪವನ್ನು ಅನುಭವಿಸುವುದೂ ಅಲ್ಲ. ನಿಧಾನವಾಗಿ ತನ್ನ ವಂಶವನ್ನು ಬೆಳೆಸುವಂತಹ ಒಂದು ತರದ ಬ್ಯಾಕ್ಟೀರಿಯಗಳಿಂದ ಉಂಟಾಗುವ, ಕ್ರಮೇಣವಾಗಿ ಗುಣವಾಗಬಲ್ಲ ರೋಗ ಅದು.

ಮಾನವಕುಲವನ್ನು ಬಹಳ ಕಾಲದ ಹಿಂದಿನಿಂದಲೂ ಬೆಂಬಿಡದ ಭೂತದಂತೆ ಹಿಂಬಾಲಿಸಿಕೊಂಡು ಬಂದ ಒಂದು ಉಷ್ಣರೋಗ

ಏಷ್ಯಾ, ಆಫ್ರಿಕ ಮುಂತಾದ ಉಷ್ಣಾಧಿಕ್ಯ ಖಂಡಗಳಲ್ಲೂ ಉಷ್ಣವಲಯದೊಳಗಿರುವ ರಾಷ್ಟ್ರಗಳಲ್ಲೂ ಸಾಮಾನ್ಯವಾಗಿ ಈ ರೋಗವನ್ನು ಕಾಣಬಹುದು. ಈಗ ಪ್ರಪಂಚದಲ್ಲಿ ಸಾಧಾರಣ ಒಂದು ಕೋಟಿ ಹತ್ತು ಲಕ್ಷ ಕುಷ್ಠರೋಗಿಗಳಿರಬಹುದು ಎಂದು ಅಂದಾಜಿಸಲಾಗಿದೆ. ಈ ರೋಗದ ಆಕ್ರಮಣದಿಂದ ಮನುಷ್ಯ ದೈಹಿಕವಾಗಿ ನಾಶವಾಗುತ್ತಾನೆ. ರೋಗ ಆವರಿಸಿದ ಅಂಗಾಂಗಗಳೆಲ್ಲ ಕೊಳೆತು ಕರಗುತ್ತಾ ಕಡೆಗೊಮ್ಮೆ ಇಲ್ಲದಾಗುತ್ತವೆ. ಸಾಧಾರಣವಾಗಿ ಈ ಅಂಗವೈಕಲ್ಯ ಕಾಲು ಕೈ ಮತ್ತು ಮುಖದ ಮೇಲಾಗುತ್ತದೆ. ಕುಷ್ಠರೋಗ ಬಾಧೆಗೊಳಗಾದವರಲ್ಲಿ ಅರ್ಧಕ್ಕಿಂತಲೂ ಹೆಚ್ಚಿನವರು ಅಂಗವಿಕಲರಾಗುತ್ತಾರೆ.

೧೯೬೦ ರಿಂದಲೇ ಕುಷ್ಠರೋಗ ನಿಯಂತ್ರಣ ಕ್ರಮಗಳನ್ನು ಪ್ರಾಪಂಚಿಕ ಮಟ್ಟದಲ್ಲಿ ನಡೆಸಿಕೊಂಡು ಬರಲಾಗಿದೆ. ಆದರೂ ರೋಗಿಗಳ ಸಂಖ್ಯೆ ಗಣನೀಯವಾಗಿ ಇಳಿಯಲಿಲ್ಲ. ಕಳೆದ ೩೦ ವರ್ಷಗಳಿಂದಲೂ ಉಪಯೋಗಿಸಿಕೊಂಡಿದ್ದುದು ಡಾಪ್ಸೋನ್ ಎಂಬ ಔಷಧಿಯನ್ನು. ಇದು ಬಹಳ ಕಡಿಮೆ ಬೆಲೆಯ ಹಾಗೂ ಉಪಪರಿಣಾಮಗಳಿಂದ ಮುಕ್ತವಾದ ಔಷಧಿ. ಆದರೆ ಇದರ ಪ್ರಯೋಗದಿಂದುಂಟಾಗುವ ಪರಿಣಾಮಗಳು ಕಂಡುಬರುವುದು ತೀರಾ ಮಂದಗತಿಯಲ್ಲಿ. ದೀರ್ಘಕಾಲದ ತನಕ ಇದನ್ನು ಉಪಯೋಗಿಸಿಕೊಂಡಿದ್ದರೆ ಮಾತ್ರ ಏನಾದರೂ ಗಮನಾರ್ಹ ಫಲಿತಾಂಶಗಳನ್ನು ನಿರೀಕ್ಷಿಸಬಹುದು. ಕೆಲವೊಮ್ಮೆ ರೋಗಿ ಸಂಪೂರ್ಣ ಆಯುಸ್ಸನ್ನೇ ಡಾಪ್ಸೋನಿನ ಸಹಾಯದಿಂದ ಕಳೆಯಬೇಕಾಗಿ ಬರಬಹುದು. ಈ ಕಾರಣಗಳಿಂದಾಗಿ ಈ ಔಷಧಿ ಹೆಚ್ಚಿನವರನ್ನು ಆಕರ್ಷಿಸಲಿಲ್ಲವಾದರೂ ಅಲ್ಲಲ್ಲಿ ಕೆಲವರು ಚಿಕಿತ್ಸೆ ನಡೆಸಿದ್ದರು.

ಆದರೆ ಪರಿಸ್ಥಿತಿಗೆ ತಕ್ಕಂತೆ ಜೀವಿಸುವ ಉಪಾಯವನ್ನು ಕುಷ್ಠ ರೋಗಾಣುಗಳು ಕರಗತ ಮಾಡಿಕೊಂಡಿದ್ದುವು. ಡಾಪ್ಸೋನಿನ ಆಕ್ರಮಣವನ್ನು ಎದುರಿಸಿ ಬದುಕಲು ಅವುಗಳು ತಮ್ಮದೇ ಆದ ಒಂದು ಪ್ರತಿರೋಧಕ ಶಕ್ತಿಯನ್ನು ಸೃಷ್ಟಿಸುತ್ತವೆ ಎಂದು ತಿಳಿದುಬಂದುದರಿಂದ ವಿಜ್ಞಾನಿಗಳು ಡಾಪ್ಸೋನಿನ ಜತೆಗೆ ಬೇರೆ

ಎರಡು ಔಷಧಿಗಳನ್ನು ಚುಚ್ಚುವ ಉಪಾಯ ಕಂಡುಹಿಡಿದರು. ಅವುಗಳೇ ರಿಫಾಂಪ್ಸಿನ್ ಮತ್ತು ಕ್ಲೋರಾಸಿಫಿನ್. ದುರದೃಷ್ಟವಶಾತ್ ಇವುಗಳೂ ನಿರೀಕ್ಷಿತ ಪ್ರತಿಫಲವನ್ನು ಕೊಡಲಿಲ್ಲ. ಅತ್ಯಂತ ಬೆಲೆ ಬಾಳುವ ಹಾಗೂ ಉಪಪರಿಣಾಮಗಳನ್ನುಂಟುಮಾಡುವ ಇವುಗಳು ರೋಗಿಗಳನ್ನು ಸಂತೈಸಲು ಶಕ್ಯವಾಗಲಿಲ್ಲ.

ಈ ಅನಾನುಕೂಲಗಳನ್ನು ಪರಿಹರಿಸುವದಕ್ಕಾಗಿ ವಿಶ್ವ ಆರೋಗ್ಯ ಸಂಸ್ಥೆ ಜಾಗತಿಕ ಬ್ಯಾಂಕು ಮತ್ತು ವಿಶ್ವಸಂಸ್ಥೆಯ ಅಭಿವೃದ್ಧಿ ನಿಗಮ ಇವುಗಳ ಸಂಶೋಧನೆ ನಡೆಸಲು ಒಂದು ಪದ್ಧತಿಯನ್ನು ಆವಿಷ್ಕರಿಸಿದರು. ಕುಷ್ಠರೋಗ ದೇಹವನ್ನು ಬಾಧಿಸಿದ್ದು ವ್ಯಕ್ತವಾಗಿ ತಿಳಿಯುವುದಕ್ಕಿಂತಲೂ ಮೊದಲೇ ಚರ್ಮವನ್ನು ಪರಿಶೋಧಿಸಿ ರೋಗ ಬಾಧೆಯ ಲಕ್ಷಣವನ್ನು ಅರಿತುಕೊಳ್ಳುವ ಒಂದು ವ್ಯವಸ್ಥೆಯನ್ನು ನಿರ್ಮಿಸುವುದು ಈ ಪ್ರತ್ಯೇಕ ಪದ್ಧತಿಯ ಮೊದಲ ಭಾಗವಾಗಿತ್ತು.




"ಸಾಕು ಬಾರೋ ತಿಂದಿದ್ದು ... ಅಲ್ಲಿರೋದೇ ೨೫% ಕಡಿತ ಮಾತ್ರ ..."

ಈ ರೋಗದ ಸಂಪೂರ್ಣ ನಿವಾರಣೆಗೆ ಉಪಯೋಗಿಸಬಹುದಾದ ವ್ಯಾಕ್ಸಿನನ್ನು ತಯಾರಿಸಲು ಪ್ರಪಂಚದ ಹಲವು ಪ್ರಯೋಗಾಲಯಗಳಲ್ಲಿ ಕೆಲಸಗಳು ನಡೆಯುತ್ತಿವೆ. ಇತ್ತೀಚೆಗೆ ಅಂತಹ ಒಂದು ವ್ಯಾಕ್ಸಿನನ್ನು ಕಂಡುಹಿಡಿದಿದ್ದರೂ ಅದನ್ನು ಪ್ರಯೋಗಶಾಲೆಯಿಂತ ಹೊರಗೆ ಉಪಯೋಗಿಸಿ ನೋಡುವ ಮಟ್ಟಕ್ಕೆ ಸಂಶೋಧಕರು ತಲುಪಲಿಲ್ಲ. ಸಾಮಾಜಿಕ ರಂಗದಲ್ಲಿ ಅದನ್ನು ಚಿಕಿತ್ಸೆಗಾಗಿ ಬಳಸಬೇಕಾದರೆ ಇನ್ನೂ ಐದೋ ಹತ್ತೋ ವರ್ಷಗಳು ಕಳೆಯಬೇಕು. ಇದಕ್ಕೆ ಕಾರಣ ಕುಷ್ಠರೋಗಾಣುಗಳು ಬೆಳೆಯುವುದು ತೀರಾ ನಿಧಾನವಾಗಿ ಹಾಗೂ ಅವುಗಳ ಮೇಲುಂಟಾಗುವ ಪರಿಣಾಮಗಳ ಫಲ ಅರಿವಾಗುವುದು ಅಷ್ಟೇ ನಿಧಾನವಾಗಿ.

ಆದರೂ ವಿಜ್ಞಾನಿಗಳು ಉತ್ಸಾಹಭರಿತರು. ವಿಶ್ವ ಆರೋಗ್ಯ ಸಂಸ್ಥೆಯ ಒಂದು ಅಧ್ಯಯನ ಸಂಘದ ಅಧ್ಯಕ್ಷರಾದ ಡಾ. ಟೋರೆ ಗೋಡಲ್ ಹೇಳುತ್ತಾರೆ, "ನಾವು ಕುಷ್ಠರೋಗ ನಿವಾರಣಾ ಶಕ್ತಿಯುಳ್ಳ ವ್ಯಾಕ್ಸಿನನ್ನು ಕಂಡುಹಿಡಿಯುವ ಕೆಲಸದಲ್ಲಿ ಅರ್ಧ ವಿಜಯ ಗಳಿಸಿದ್ದೇವೆ. ಅದನ್ನು ವ್ಯಾಪಕವಾಗಿ ಬಳಸುವದಕ್ಕಿಂತ ಮೊದಲು ನಡೆಸಬೇಕಾದ ಹಲವು ಪರೀಕ್ಷೆಗಳು ಬಾಕಿಯಿದ್ದು ಬಹಳ ಬೇಗನೆ ಅವನ್ನು ಮಾಡಿ ಮುಗಿಸುತ್ತೇವೆ."

ಆದರೆ ಮಾನವ ಶರೀರದೊಳಗೆ ಯಾವ ಪ್ರಮಾಣದಲ್ಲಿ ಪ್ರಯೋಗಿಸಬೇಕೆಂಬುದು ಇನ್ನೂ ನಿಶ್ಚಿತವಾಗಿಲ್ಲ. ಮನುಷ್ಯನ ಶಾರೀರಿಕ ಸ್ವಭಾವಕ್ಕನುಗುಣವಾದ ಮೃಗಗಳ ಮೇಲೆ ನಡೆಸಿದ ಪ್ರಾರಂಭಿಕ ಪರೀಕ್ಷೆಗಳ ಆಧಾರದ ಮೇಲೆ ಈ ವ್ಯಾಕ್ಸಿನ್ ಅಪಾಯಕಾರಿ ಸ್ವಭಾವವಿಲ್ಲದ್ದು ಎಂಬುದನ್ನು ತಿಳಿಯಲು ಸಾಧ್ಯವಾಗಿದೆ. ವಿಶಿಷ್ಟ ರೀತಿಯ ಒಂದು ಹಂದಿಯನ್ನು ಈ ಸಂಶೋಧನೆಗೆ ಬಳಸಿಕೊಳ್ಳಲಾಗಿತ್ತು. ಈ ಹಂದಿ ಒಂದಡಿ ಉದ್ದವಿದ್ದು ತಗಡಿನಾಕಾರದ ಕವಚವಿರುವ ಒಂದು ಸ್ತನಿಯಾಗಿದೆ. ಇದರ ಮೈ ಮೇಲೆ ಮೂರರಿಂದ ಒಂಭತ್ತರ ತನಕ ಪಟ್ಟಿಗಳಿರುತ್ತವೆ. ಲ್ಯಾಟಿನ್ ಅಮೇರಿಕದಲ್ಲೂ ದಕ್ಷಿಣ ಅಮೇರಿಕದಲ್ಲೂ ಇವು ಹೆಚ್ಚಾಗಿ ಕಂಡುಬರುತ್ತವೆ. ಅವುಗಳ ಮೇಲೆ

ಮತ್ತು ಇಲಿಗಳ ಮೇಲೆ ಈ ವ್ಯಾಕ್ಸಿನನ್ನು ಪರೀಕ್ಷಾರ್ಥವಾಗಿ ಪ್ರಯೋಗಿಸಿದಾಗ ಅದು ಫಲಪ್ರದವಾಗಿ ಕಂಡುಬಂದಿತ್ತು.

ಕುಷ್ಠರೋಗವನ್ನು ಪ್ರತಿರೋಧಿಸುವ ಚುಚ್ಚು ಮದ್ದನ್ನು ತಯಾರಿಸುವುದಕ್ಕಾಗಿ ನಿಜವಾದ ಶ್ರಮ ನಡೆದದ್ದು ೧೯೭೧ ರಲ್ಲಿ. ಅಮೇರಿಕದ ಲೂಷಿಯಾನಾದ ವಿಜ್ಞಾನಿಗಳು ೧೯೭೧ ರಲ್ಲಿ ಎಂ. ಲೆಪ್ರಾಯ್ ಎಂಬ ಔಷಧಿಯನ್ನು ಈ ಹಂದಿಯ ಶರೀರದೊಳಗೆ ಚುಚ್ಚಿನೋಡಿದ್ದರು. ಹೀಗೆ ಚುಚ್ಚಲ್ಪಟ್ಟ ಹೆಚ್ಚಿನ ಎಲ್ಲಾ ಹಂದಿಯ ಶರೀರದಲ್ಲಿಯೂ ರೋಗದ ಲಕ್ಷಣ ಕಂಡುಬಂದಿತ್ತು. ಅವುಗಳಲ್ಲಿ ಕೆಲವಕ್ಕಂತೂ ತೀವ್ರವಾದ ಕುಷ್ಠ ಕಾಣಿಸಿಕೊಂಡಿತ್ತು. ರೋಗಕ್ಕೆ ಕಾರಣವಾದ ಅಣುಗಳು ಅಗತ್ಯಕ್ಕನುಸಾರವಾಗಿ ಸಿಗುವುದು ಲಸಿಕೆ ಹಾಗೂ ಔಷಧಿಗಳ ಉತ್ಪಾದನೆಗೆ ಅಗತ್ಯ. ಅರೆಜೀವಾವಸ್ಥೆಗೊಳಪಡಿಸಿದ ರೋಗಾಣುಗಳನ್ನು ಮನುಷ್ಯ ಶರೀರಕ್ಕೆ ಚುಚ್ಚುವುದರಿಂದ ರಕ್ತಕಣಗಳು ಪ್ರತಿರೋಧಕ ಬೆಳೆಸಿಕೊಳ್ಳಲು ಅನುವಾಗುತ್ತವೆ.

೧೯೮೦ ರಲ್ಲಿ ಒಂಭತ್ತು ಪ್ರಯೋಗಶಾಲೆಗಳಲ್ಲಿ ೩೦೦ ಕ್ಕೂ ಹೆಚ್ಚು ಹಂದಿಗಳ ಮೇಲೆ ಇಂತಹ ಪರೀಕ್ಷೆಗಳನ್ನು ನಡೆಸಿದುದರ ಫಲವಾಗಿ ಲೋಕದ ಎಲ್ಲಾ ವಿಜ್ಞಾನಿಗಳಿಗೆ ಬೇಕಾದಷ್ಟು ರೋಗಾಣುಗಳು ಲಭ್ಯವಾದುವು. ಆದರಿಂದ ರೋಗ ನಿವಾರಣೆಯಾಗುವ ಚುಚ್ಚು ಮದ್ದುಗಳನ್ನು ಕಂಡುಹಿಡಿಯುವ ಪ್ರಯತ್ನ ತ್ವರಿತಗತಿಯಲ್ಲಿ ಮುಂದುವರಿಯಿತು. ಲಂಡನ್ನಿನಲ್ಲಿರುವ ವೈದ್ಯಕೀಯ ಸಂಶೋಧನಾ ಸಂಸ್ಥೆಯೊಂದು ಎಂ. ಲೆಪ್ರಾಯ್ ಬ್ಯಾಂಕನ್ನೇ ಸ್ಥಾಪಿಸಿತ್ತು.

ಈ ರೋಗಾಣುವನ್ನು ೧೮೭೩ರಲ್ಲಿ ಅರ್ಮರ್ ಹ್ಯಾನಸನ್ ಎಂಬೊಬ್ಬ ನಾರ್ವೇಜಿಯನ್ ಡಾಕ್ಟರ್ ಕಂಡುಹಿಡಿದಿದ್ದ. ಕ್ಷಯರೋಗಾಣುಗಳಂತೇ ಇರುವ ಈ ರೋಗಾಣುಗಳ ಹೊರಗೆ ಒಂದು ತರದ ಅಂಟಿನಂತಹ ಆವರಣವಿರುತ್ತದೆ. ಇವುಗಳ ವಂಶಾಭಿವೃದ್ಧಿ ಬಹಳ ನಿಧಾನವಾಗಿ ನಡೆಯುವುದು. ಅಂದರೆ ರೋಗ ಲಕ್ಷಣಗಳು ಕಂಡುಬರಲು ಹಲವು ವರ್ಷಗಳೇ ಬೇಕಾಗಬಹುದು.

ಕುಷ್ಠರೋಗ ನಿಯಂತ್ರಣ ಕಾರ್ಯ ವಿಧಾನಗಳಲ್ಲಿ ನಿರೀಕ್ಷಿಸಿದಷ್ಟು ಬೇಗ ಫಲ ದೊರೆಯದಿರುವುದಕ್ಕೆ ಕಾರಣವೂ ಅದೇ. ಮೂರು ವರ್ಷದಿಂದ ಹತ್ತು ವರ್ಷಗಳ ತನಕ ಬೆಳವಣಿಗೆ ಮುಂದುವರಿಯುತ್ತದೆ. ಕುಷ್ಠ ಬಾಧೆಯ ಮೊದಲ ಘಟ್ಟವನ್ನು ಅರಿತುಕೊಳ್ಳುವುದು ತುಂಬಾ ಕಷ್ಟಕರ. ಹೆಚ್ಚಿನ ಸಲವೂ ರೋಗ ಉಲ್ಬಣಾ–



ವಸ್ಥೆಗೆ ತಲುಪಿದ ಮೇಲಷ್ಟೇ ರೋಗ ಬಾಧಿಸಿದ ಬಗ್ಗೆ ಅರಿವಾಗುವುದು.

ಲೆಪ್ರೊಮೆಟಸ್ ಲೆಪ್ರಸಿ ಬಾಧೆಗೊಳಗಾದವರಿಂದ ಈ ರೋಗ ಇತರರಿಗೆ ಹರಡುತ್ತದೆ. ಇದೊಂದು ಅತ್ಯಂತ ಪ್ರಬಲವಾದ ಕುಷ್ಠವಾಗಿದೆ. ಇದು ಶರೀರದ ಮೇಲ್ಭಾಗದಲ್ಲಿರುವ ನರಗಳನ್ನೂ ಕಣ್ಣುಗಳನ್ನೂ ಬಾಧಿಸುತ್ತದೆ. ಟ್ಯೂಬರ್‌ಕಲ್ಯೋಡ್ ಲೆಪ್ರಸಿ ಹರಡುವ ಕುಷ್ಠರೋಗವಲ್ಲ. ಇವೆರಡರ ಸಾಮರಸ್ಯ ಹೊಂದಿರುವ ಇನ್ನು ಹಲವು ಬಗೆಯ ಕುಷ್ಠರೋಗಗಳಿವೆ.

ಕಳೆದ ಹಲವು ವರ್ಷಗಳಿಂದ 'ನಡೆದುಬರುತ್ತಿರುವ ಈ ಸಂಶೋಧನೆಯ ಪ್ರಯತ್ನಗಳಲ್ಲಿ ಗಮನಾರ್ಹವಾದಂತಹ ಪುರೋಗತಿ ಕಂಡು ಬಂದಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಕುಷ್ಠ ರೋಗಾಣುಗಳ ಬೆಳವಣಿಗೆ ಹಾಗೂ ಸಂತಾನೋತ್ಪತ್ತಿ ಅತಿ ನಿಧಾನವಾಗಿ ನಡೆಯುವುದರಿಂದ ಈ ಔಷಧಿಯ ಸ್ವರಕ್ಷಣಾ ಸಾಮರ್ಥ್ಯ ಎಷ್ಟರ ಮಟ್ಟಿಗೆ ಇರಬಹುದು ಎಂಬುದನ್ನು ಲೆಕ್ಕ ಹಾಕುವುದು ಪ್ರಯಾಸಕರ. ಚುಚ್ಚುಮದ್ದು ಚಿಕಿತ್ಸೆ ಪ್ರಾರಂಭಿಸಿದ ಅನಂತರ ಹತ್ತೋ ಅದಕ್ಕಿಂತ ಹೆಚ್ಚೋ ವರ್ಷಗಳು ಕಳೆಯುವ ತನಕ ಫಲಿತಾಂಶಗಳನ್ನು ಊಹಿಸಲು ಸಾಧ್ಯವಿಲ್ಲ. ಯಾವ ಮುಗ್ಗಟ್ಟೂ ಇಲ್ಲದೆ ಸಂಶೋಧನೆಗಳು ಮುಂದುವರಿದಲ್ಲಿ ಇನ್ನು ನಾಲ್ಕೈದು ವರ್ಷಗಳೊಳಗೆ ಸಮಾರ್ಥ ವ್ಯಾಕ್ಸಿನನ್ನು ವ್ಯಾಪಕವಾಗಿ ಬಳಸಬಹುದು ಎಂದು ವಿಶ್ವ ಆರೋಗ್ಯ ಸಂಸ್ಥೆಯ ಅಧಿಕಾರಿಗಳ ಅಭಿಪ್ರಾಯ. ಕುಷ್ಠರೋಗದ ಅಡಿಪಾಯ ಬಹಳ ಕಠಿಣವಾದುದರಿಂದ ವರ್ಷಗಟ್ಟಲೆ ಕಾದು ಹಂತ ಹಂತವಾಗಿ ಪರೀಕ್ಷೆ ನಡೆ. ತಾಳಿ ನೋಡುವದು ಅತಿ ಅಗತ್ಯವಾಗಿದೆ.

ನಮ್ಮ ಸಂಬಂಧಿಯಾಗಿದ್ದರೂ ಕುಷ್ಠರೋಗವಾದರೆ ಆತನನ್ನು ಮನೆಯಿಂದ ಹೊರಗಟ್ಟಲು ನಾವು ಹಿಂಜರಿಯುವುದಿಲ್ಲ. ಅದಕ್ಕೆ ಹಲವು ಮೂಢ ನಂಬಿಕೆಗಳೂ ಪ್ರೇರಕವಾಗಿವೆ. ಇಂದು ಕುಷ್ಠ ರೋಗಿಗಳದ್ದೇ ಆದ ಒಂದು ಪ್ರತ್ಯೇಕ ಸಮಾಜವನ್ನು ನಾವು ನಿರ್ಮಿಸಬೇಕಾಗಿಲ್ಲ: ಅದು ವಾಸಿಯಾಗದ ರೋಗ ಎಂದು ಕಂಗೆಡಬೇಕಾಗಿಲ್ಲ. ಕುಷ್ಠರೋಗ ನಿವಾರಣೆಗೆ ಪ್ರತಿ ಗ್ರಾಮದಲ್ಲೂ ಪ್ರಯತ್ನ ನಡೆಯುತ್ತಿದೆ. ಇನ್ನೊಬ್ಬರಿಗೆ ಅಪಾಯವಾಗದಂತೆ ನಮ್ಮ ಸಮೂಹದೊಳಗೇ ರೋಗಿಗಳನ್ನು ಇರಿಸಿಕೊಳ್ಳುವ ವಿಶಾಲ ಮನೋಭಾವವೇ ರೋಗ ನಿವಾರಣೆಗೆ ಅಗತ್ಯವಾಗಿರುವ ಇನ್ನೊಂದು ಔಷಧಿ. ✡



## ನವ ಪದಾರ್ಥ

ಸವತಿ— ಸವೆಯುವ ಹೆಣ್ಣು
ತಾಯಿ— ಜೀವಂತ ತಾಯಿತ
ತಂದೆ— 'ಏನು ತಂದೆ ?' ಎಂಬ ಪ್ರಶ್ನೆಗೀಡಾಗುವವ
ಮದುವೆ— ಮದದ ವಧೆಗೆ ರಹದಾರಿ
ಗುರು-- ಸದಾ 'ಗುರ್' ಎನ್ನುತ್ತಿರುವವ
ಮಂತ್ರಿ— ಮೂರು ಮನಸ್ಸುಳ್ಳವ
ಜಾರಿಣಿ— ಜಾರುವ ಜಿಂಕೆ



# ಡಾ. ಪಾಂಡುರಂಗ

## ಲೂನಾ ಮೊಪೆಡ್ ತಯಾರಿಸಿದ ತರುಣ ಕನ್ನಡಿಗ

ವಸಂತ ಗುಮಾಸ್ತೆ

ಇದು ಜೆಟ್ ಯುಗ, ಸೂಪರ್‌ಸಾನಿಕ್ ಯುಗ. ಇಲೆಕ್ಟ್ರಾನಿಕ್ಸ್ ಯುಗ ಎಂದು ಹೇಳುತ್ತಾರೆ, ಆದರೆ ಭಾರತದ ಮಟ್ಟಿಗೆ ಹೇಳುವದಾದರೆ ಈಗ ಮೊಪೆಡ್* ಯುಗ. ಇಂದು ಭಾರತದ ಪ್ರತಿಯೊಂದು ಹಳ್ಳಿಯಲ್ಲೂ ಪಟ್ಟಣದಲ್ಲೂ ಮೊಪೆಡ್‌ಗಳು ಓಡಾಡುತ್ತಿವೆ. ವಾಹನದ ಕಡಿಮೆ ಬೆಲೆ ಹಾಗೂ ತೈಲದ ಮಿತ ಬಳಕೆಗಳಿಂದ ಮೊಪೆಡ್ ಬಹು ಜನಪ್ರಿಯ ವಾಹನವಾಗಿದೆ. ೧೯೭೦ರಲ್ಲಿ ಅವುಗಳ ಉತ್ಪಾದನೆ ಕೇವಲ ಒಂದು ಸಾವಿರವಿದ್ದುದು ಕಳೆದ ವರ್ಷ ಒಂದೂಕಾಲು ಲಕ್ಷಕ್ಕೂ ಮಿಕ್ಕಿ ಮೊಪೆಡ್‌ಗಳು ಭಾರತದಲ್ಲಿ ಉತ್ಪಾದಿಸಲ್ಪಟ್ಟವು. ಅಂದರೆ ೧೦ ವರ್ಷಗಳ ಅವಧಿಯಲ್ಲಿ ಮೊಪೆಡ್‌ಗಳ ಉತ್ಪಾದನೆ ೧೨೫ ಪಟ್ಟಿಗಿಂತ ಹೆಚ್ಚಾಯಿತು.



ಯಂತ್ರಚಾಲಿತ ಸಾಯಕಲ್ ರಿಕ್ಷಾ

ಮೊಪೆಡ್‌ಗಳಲ್ಲಿ ಇಂದು ತುಂಬ ಜನಪ್ರಿಯವಾಗಿರುವ ವಾಹನ 'ಲೂನಾ.' ಅದನ್ನು ಈ ಯಶಸ್ಸಿನ ಶಿಖರಕ್ಕೆ ಏರಿಸಿದವರು ಕನ್ನಡ ತರುಣ ಇಂಜಿನಿಯರ್ ಡಾ. ಪಾಂಡುರಂಗ. ಲೂನಾ ಅಲ್ಲದೆ ಸಾಯಕಲ್ ರಿಕ್ಷಾಗಳಿಗೆ ಯೋಗ್ಯವಾದ ಯಂತ್ರ ಹಾಗೂ ಇದೀಗ ಭಾರತದ ರೈತರಿಗೆ ಉಪಯುಕ್ತವಾಗುವ ಟ್ರ್ಯಾಕ್ಟರುಗಳನ್ನು ಕೂಡಾ ಡಾ. ಪಾಂಡುರಂಗ ಅವರು ನಿರ್ಮಿಸಿದ್ದಾರೆ.

ಡಾ. ವಿ. ಪಾಂಡುರಂಗ ಅವರಿಗೀಗ ೪೦ ವರ್ಷ ವಯಸ್ಸು. ಹಾಸನ ಜಿಲ್ಲೆಯ ಹೊಳೆನರಸೀಪುರದವರು. ಬಹುಪಾಲು ಶಿಕ್ಷಣವೆಲ್ಲ ನಾವು ಗರಿಯಲ್ಲಿ ಪೂರೈಸಿತು. ತಂದೆ ವೆಂಕಟಸುಬ್ಬಯ್ಯನವರು ವೃತ್ತಿಯಿಂದ ವಕೀಲರು. ೧೯೬೩ ರಲ್ಲಿ ಮೆಕ್ಯಾನಿಕಲ್ ಇಂಜಿನಿಯರಿಂಗಿನಲ್ಲಿ ಬಿ.ಇ. ಪದವಿ ಪಡೆದಾದ ನಂತರ ಬೆಂಗಳೂರಿನ ಅಭಿಯಾಂತ್ರಿಕ ಶಿಕ್ಷಣದಲ್ಲಿ ಪ್ರತಿಷ್ಠಿತ ಸಂಸ್ಥೆಯಾದ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸಾಯಿನ್ಸಿನಲ್ಲಿ ಅವರು ಮುಂದಿನ ಶಿಕ್ಷಣಕ್ಕೆ ಪ್ರವೇಶ ಪಡೆದರು. ೧೯೬೫ರಲ್ಲಿ ಎಮ್.ಇ. (ಆಟೋಮೊಬಾಯಿಲ್ಸ್) ಪದವಿ ಅವರಿಗೆ ಸುಲಭವಾಗಿ ದೊರಕಿತು. ಮರುವರ್ಷ ದುರ್ಗಾಪುರದಲ್ಲಿಯ ಸೆಂಟ್ರಲ್ ಮೆಕ್ಯಾನಿಕಲ್ ಇಂಜಿನಿಯರಿಂಗ್ ರಿಸರ್ಚ್ ಇನ್ಸ್ಟಿಟ್ಯೂಟನಲ್ಲಿ ಅವರು ವಿಜ್ಞಾನಿ ಎಂದು ಕೆಲಸಕ್ಕೆ ಸೇರಿದರು.

ದುರ್ಗಾಪುರದಲ್ಲಿರುವಾಗ 'ಸ್ವರಾಜ್' ಎಂಬ ಅಪ್ಪಟ ಭಾರತೀಯ ಟ್ರ್ಯಾಕ್ಟರಿನ ತಂತ್ರಜ್ಞಾನ ನಿರ್ಮಿತಿಯಲ್ಲಿ ಡಾ. ಪಾಂಡುರಂಗ ಭಾಗಿಯಾದರು. ಅದೇ ಕಾಲದಲ್ಲಿ ಸೇನ್ ಅ್ಯಂಡ್ ಪಂಡಿತ ಎಂಬ ಕಂಪನಿಗೆ ಮೊಪೆಡ್ ನಿರ್ಮಿತಿಯ [illegible]

*ಮೋಪೆಡ'– 'ಮೋಟರಾಸ್ಡ್ ಪೆಡಲ್ಡ್ ಸೈಕಲ್'' ಎಂಬುದರ ಸಂಕ್ಷಿಪ್ತ ನಾಮ. ಸಾಧಾರಣ ಹಾಗೂ ಯಂತ್ರಚಾಲಿತ ಸೈಕಲ'ಗಳ ಮಿಶ್ರ ರೂಪ. ಹಿಂದಿನ ಪ್ರಧಾನಿ ಜವಾಹರಲಾಲ ನೆಹರು, ಭಾರತ ಸೈಕಲ್ ಯುಗದಲ್ಲಿದೆಯೆಂದು ಮೇಲಿಂದ ಮೇಲೆ ಹೇಳುತ್ತಿದ್ದುದನ್ನಿಲ್ಲಿ ಸ್ಮರಿಸಬಹುದು.

ಜ್ಞಾನವನ್ನು ಕೂಡ ಅವರು ರೂಢಿಸಿಕೊಟ್ಟರು. ೧೯೬೭ರಲ್ಲಿ ಶಿಷ್ಯವೇತನವನ್ನು ಪಡೆದು ಪಿಎಚ್. ಡಿ. ಅಭ್ಯಾಸಕ್ಕಾಗಿ ಜರ್ಮನಿಗೆ ತೆರಳಿದರು. ವಾಯು ಪ್ರವಾಹದ ವಿಷಯದಲ್ಲಿ ಡಾಕ್ಟರೇಟ್ ಪಡೆದಾದ ನಂತರ ಜರ್ಮನಿಯ ಸುಪ್ರಸಿದ್ಧ 'ಫೋಕ್ಸ್‌ವಾಗನ್' * ಕಂಪನಿಯಲ್ಲಿ ಕೆಲ ಕಾಲ ಕೆಲಸ ಮಾಡಿದರು. (ಅವಧಿಗೆ ಮುನ್ನ ಪಿಎಚ್. ಡಿ. ಅಭ್ಯಾಸ ಪೂರ್ಣ ಮಾಡಿದ್ದರಿಂದ ಜರ್ಮನಿಯಲ್ಲಿ ಇನ್ನೂ ಕೆಲ ಕಾಲ ಉಳಿಯುವದು ಅನಿವಾರ್ಯವಾಗಿತ್ತಾದ್ದರಿಂದ) ಪಾಶ್ಚಿಮಾತ್ಯ ದೇಶಗಳಲ್ಲಿ ಕೆಲಸದ ರೀತಿ-ನೀತಿಗಳು ಸಂಶೋಧನೆ ಹಾಗೂ ಅಭಿವೃದ್ಧಿಯ ವೈಶಿಷ್ಟ್ಯಗಳನ್ನು ಅವರು ಅರಗಿಸಿಕೊಂಡರು.

೧೯೭೦ರ ಕೊನೆಯಲ್ಲಿ ಭಾರತಕ್ಕೆ ಮರಳಿ ದುರ್ಗಾಪುರದಲ್ಲಿಯ ಮೊದಲಿನ ತಮ್ಮ ಸಂಸ್ಥೆಯನ್ನು ಮತ್ತೆ ಸೇರಿದರು. ೧೯೭೨ರಲ್ಲಿ ಭಾರತ ಸರಕಾರ ಸ್ಕೂಟರ್ ಉತ್ಪಾದನೆಗಾಗಿ ಲಖನೌದಲ್ಲಿ 'ಸ್ಕೂಟರ್ಸ್ ಇಂಡಿಯಾ ಲಿಮಿಟೆಡ್ ಕಂಪನಿ' ಸ್ಥಾಪಿಸಿದಾಗ ಕಂಪನಿಗೆ ಡಾ. ಪಾಂಡುರಂಗರ ಸೇವೆಯು ಅವಶ್ಯವೆನಿಸಿತು. ಎಂತಲೇ ಅವರನ್ನು ಸ್ಕೂಟರ್ ಇಂಡಿಯಾಕ್ಕೆ ಆಮಂತ್ರಿಸಿತು. ಸ್ವತ-ಶ್ಚಲಿವಾಹನಗಳಲ್ಲಿ ಹೊಸ ಉಪಯುಕ್ತ ಯಂತ್ರವೊಂದನ್ನು ಕಂಡುಹಿಡಿಯುವುದು ಈ ಎಲ್ಲ ಕಾಲದಲ್ಲಿಯೂ ಡಾ. ಪಾಂಡುರಂಗರ ಧ್ಯೇಯವಾಗಿತ್ತು.

## ಬಡವರಿಗಾಗಿ ತಂತ್ರಜ್ಞಾನ

ಭಾರತದ ಸುಮಾರು ಎಲ್ಲ ಊರುಗಳಲ್ಲಿ ಸಾಯಿಕಲ್ ರಿಕ್ಷಾಗಳು ಕಾಣಸಿಗುತ್ತವೆ. ಇಬ್ಬರು-ಮೂವರು ಜನರನ್ನೂ ಒಜ್ಜೆಗಳನ್ನೂ ಎಳೆದೊಯ್ಯುವ ಕೃಶಕಾಯದ ಕೃಷ್ಣ ವರ್ಣದ ರಿಕ್ಷಾವಾಲರು ಏರು ರಸ್ತೆಗಳಲ್ಲಿ ರಿಕ್ಷಾ ಎಳೆದೊಯ್ಯುವದನ್ನು ನೋಡಿದರೆ ಹೃದಯ ಮಿಡಿಯುತ್ತದೆ. ಭಾರತದಲ್ಲಿ ಸುಮಾರು ೫೦ ಲಕ್ಷ ರಿಕ್ಷಾ ನಡೆಯಿಸುವವರು ಇರುವರು. ದಿನಕ್ಕೆ ೧೦–೧೨ ತಾಸುಗಳಷ್ಟು ಕಷ್ಟಪಟ್ಟರೂ ಅವರಿಗೆ ಸಲ್ಲುವ ಆದಾಯ ಆರೇಳು ರೂಪಾಯಿಗಳು ಮಾತ್ರ. ಈ ಅಲ್ಪ ಆದಾಯದಲ್ಲಿ ಅವರಿಗೆ ತಮ್ಮ ಕುಟುಂಬಗಳ ಚಕ್ರಗಳನ್ನು ಜಗ್ಗುವುದು ತಮ್ಮ ರಿಕ್ಷಾ ನಡೆಯಿಸುವಷ್ಟೇ ಕಠಿಣವಾಗುತ್ತಿರಲು ಸಾಕು. ಎಂತಲೇ ಪೌಷ್ಟಿಕ ಆಹಾರವಂತೂ ಸರಿ, ಹೊಟ್ಟೆ ತುಂಬ ಊಟ ಕೂಡ ಅವರಿಗೆ ದೊರೆಯುವದಿಲ್ಲ. ಈ ಕಾರಣದಿಂದ ರಿಕ್ಷಾವಾಲರ ದುಡಿಮೆ ತೀರ ಹೆಚ್ಚೆಂದರೆ ೧೦ ವರ್ಷಗಳು. ಅಷ್ಟರಲ್ಲಿ ಅವರು ಮೃತ್ಯುವಿನ ದವಡೆಗೆ ಸಮೀಪವಾಗಿರುತ್ತಾರೆ.

ಈ ಜನರ ಕಠೋರ ಕಷ್ಟದ ಬಾಳಿಗೆ ಪರಿಹಾರವೇನು? ಅವರ ಮುಂದಿರುವ ಸಮಸ್ಯೆಗಳು ಎರಡು: ಒಂದು, ಕಠಿಣ ಪರಿಶ್ರಮ, ಎರಡನೆಯದು "ಅಲ್ಪ ಆದಾಯ. ಡಾ. ಪಾಂಡುರಂಗ ಅವರು ಇವೆರಡೂ ಸಮಸ್ಯೆಗಳನ್ನು ಮುಂದಿಟ್ಟುಕೊಂಡು ಅವುಗಳಿಗೆ ಪರಿಹಾರ ಒದಗಿಸುವ ಕೆಲಸಕ್ಕೆ ಉದ್ಯುಕ್ತರಾದರು. ಈ ಜನರಿಗೆ ನಿಲುಕುವಂತೆ ಯಾಂತ್ರಿಕ . ಉಪಕರಣಗಳನ್ನು ನಿರ್ಮಿಸುವುದು ಅವರ ಗುರಿಯಾಗಿತ್ತು. ಆಗಿನ ಉತ್ತರ ಪ್ರದೇಶದ ರಾಜ್ಯಪಾಲ ಶ್ರೀ ಅಕಬರ ಅಲಿಖಾನ್ ಅವರು ಡಾ. ಪಾಂಡುರಂಗರ ಈ ಉಪಕ್ರಮದಲ್ಲಿ ವಿಶೇಷ ಆಸ್ಥೆವಹಿಸಿ ಈ ಕೆಲಸದಲ್ಲಿ ಅವರಿಗೆ ಪ್ರೋತ್ಸಾಹ ಇತ್ತರು. ಈ ಕೆಲಸವನ್ನು ಡಾ. ಪಾಂಡುರಂಗರು ದುರ್ಗಾಪುರದಲ್ಲಿರುವಾಗಲೇ ಪ್ರಾರಂಭಿಸಿದ್ದರಾದರೂ ಅದಕ್ಕೆ ಮೂರ್ತ ಸ್ವರೂಪ ಬಂದುದು ೧೯೭೪ರಲ್ಲಿ. ಅವರ ಸಂಶೋಧನೆಯ ಫಲವೇ ಸೈಕಲ್ ರಿಕ್ಷಾಗಳಿಗೆ ಕೂಡಿಸಬಹುದಾದ ಪೆಟ್ರೋಲಿನಿಂದ ನಡೆಯುವ ಚಿಕ್ಕ ಯಂತ್ರ. ಅದರ ಬೆಲೆ ಕೇವಲ ೧೮೦೦ ರೂಪಾಯಿಗಳು. ಆಟೋ ರಿಕ್ಷಾಗಳ ಬೆಲೆ ಸುಮಾರು ೧೮,೦೦೦ ರೂಪಾಯಿಗಳೆಂದರೆ ಡಾ. ಪಾಂಡುರಂಗರು ನಿರ್ಮಿಸಿದ ಯಂತ್ರ 'ಬಡವರಿಗೆ ಕೈಗೆಟುಕುವಂಥದೆಂಬುದರ ಕಲ್ಪನೆ ಬಂದೀತು.** ಈ ಯಂತ್ರ

---

*'ಫೋಕ್ಸ್‌ವಾಗನ್' ಯುರೋಪಿನ ಪ್ರಖ್ಯಾತ ಕಾರುಗಳ ಉತ್ಪಾದಕ ಸಂಸ್ಥೆ. ಅದರ 'ಬೀಟಲ್' ಎಂಬ ಚಿಕ್ಕ ಕಾರು ಇಂದಿಗೂ ಜಗತ್ತಿನ ಅತ್ಯಂತ ಜನಪ್ರಿಯ ವಾಹನ.

**ಮೂಲ ಸೈಕಲ್ ರಿಕ್ಷಾದಲ್ಲಿ ಎಳ್ಳಷ್ಟೂ ಬದಲಾವಣೆ ಮಾಡದೆ ಈ ಯಂತ್ರವನ್ನು ರಿಕ್ಷಾಕ್ಕೆ ಜೋಡಿಸಬಹುದು.

ಚಾಲಿತ ಸೈಕಲ್ ರಿಕ್ಷಾ ಲೀಟರ್ ಒಂದಕ್ಕೆ ೩೦ ಕಿಲೋಮೀಟರ್ ಅಂತರ ಕ್ರಮಿಸುವ, ಮೊದಲಿಗಿಂತ ಹೆಚ್ಚು ಒಜ್ಜೆ ಹಾಗೂ ಜನರನ್ನು ಒಯ್ಯುವ (ಸುಮಾರು ೨೦೦ ಕೆ.ಜಿ) ಕ್ಷಮತೆಯುಳ್ಳದ್ದಾಗಿದೆ. ಈ ಯಂತ್ರ ಸಿಜಕ್ಕೂ ಬಡ ರಿಕ್ಷಾವಾಲರಿಗೆ ಒಂದು ವರ. ಈ ಯಂತ್ರ ಜೋಡಿಸಿದ ರಿಕ್ಷಾಗಳನ್ನು ನಡೆಯಿಸುವವರ ಆದಾಯ ಇಮ್ಮಡಿಗಿಂತಲೂ ಹೆಚ್ಚು. ೧೯೭೮ರ ಗಾಂಧೀಜಿಯ ಪುಣ್ಯತಿಥಿಯಂದು ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರು ಡಾ. ಪಾಂಡುರಂಗ ಅವರು ನಿರ್ಮಿಸಿದ ಯಂತ್ರವುಳ್ಳ ರಿಕ್ಷಾವನ್ನು ರಾಷ್ಟ್ರಕ್ಕೆ ಸಮರ್ಪಿಸಿದರು.

ಡಾ. ಪಾಂಡುರಂಗರ ಈ ಅವಿರತ ಸಂಶೋಧನಾತ್ಮಕ ಪ್ರಯತ್ನಗಳನ್ನು ಗುರುತಿಸಿ ಸಂಯುಕ್ತ ರಾಷ್ಟ್ರ ಸಂಘದ ಔದ್ಯೋಗಿಕ ಅಭಿವೃದ್ಧಿ ಸಂಸ್ಥೆ (UNIDO)ಯು ೧೯೭೭ರ ಫೆಬ್ರುವರಿಯಲ್ಲಿ ಆಸ್ಟ್ರೇಲಿಯದ ಮೆಲ್‌ಬೋರ್ನಿನಲ್ಲಿ ನಡೆದ ಸಮ್ಮೇಳನವೊಂದಕ್ಕೆ ಅವರನ್ನು ಆಮಂತ್ರಿಸಿತು. ಅಭಿವೃದ್ಧಿಶೀಲ ದೇಶಗಳಲ್ಲಿ ಅಲ್ಪ ವೆಚ್ಚದ ವಾಹನಗಳ ಉತ್ಪಾದನೆ ಎಂಬುದು ಆ ಸಮ್ಮೇಳನದ ವಿಷಯವಾಗಿತ್ತು. ಡಾ. ಪಾಂಡುರಂಗರು ಈ ಸಮ್ಮೇಳನದ ತಜ್ಞರ ತಂಡದ ಸದಸ್ಯರೆಂದು ಕಾರ್ಯ ನಿರ್ವಹಿಸಿದರು. ಭಾರತಕ್ಕೆ ಮರಳಿ ಬರುವಾಗ ಆಗ್ನೇಯ ಏಶಿಯದ ದೇಶಗಳಿಗೆ ಭೇಟಿ ಇತ್ತು, ಅಲ್ಲಿ ದ್ವಿಚಕ್ರವಾಹನಗಳ ಬೇಡಿಕೆಯನ್ನು ಅಭ್ಯಸಿಸಿದರು.

## ಲೂನಾದ ಕಥೆ

ಭಾರತಕ್ಕೆ ಮರಳಿ ಬಂದ ನಂತರ ಪುಣೆಯ ಕೈನೆಟಿಕ್ ಇಂಜನಿಯರಿಂಗ್ ಕಂಪನಿಯಲ್ಲಿ ಡಾ. ಪಾಂಡುರಂಗರು ಚೀಫ್ ಇಂಜಿನಿಯರ್ ಆದರು. ಆ ಕಂಪನಿ ಆಗ ಇನ್ನೂ ಶೈಶವಾವಸ್ಥೆಯಲ್ಲಿತ್ತು. ಮೊಪೆಡ್‌ಗಳಿಗೆ ರಭಸದ ಬೇಡಿಕೆ ಇತ್ತೆಂದು ಈ ಕಂಪನಿ ಮೊಪೆಡ್‌ಗಳ ಉತ್ಪಾದನೆ ಮಾಡುತ್ತಿತ್ತು. ಇಟಲಿಯ ಅಂತಹದೇ ಒಂದು ವಾಹನದ ನಕಲು ಮಾಡಿ ಈ ಕಂಪನಿ ಲೂನಾ ಮೊಪೆಡ್ ತಯಾರಿಸುತ್ತಿತ್ತು. ಆದರೆ ಆಗಿನ ಲೂನಾದಲ್ಲಿ ಅನೇಕ ಕುಂದುಗಳಿದ್ದು ಕಂಪನಿಯು ಮುಚ್ಚಿಹೋಗುವುದರಿಂದ ಹೇಗೋ ಬದುಕಿ ಉಳಿದುಕೊಂಡಿತ್ತಷ್ಟೇ. ಹಳೆಯ ಲೂನಾದಲ್ಲಿ ಇಂಧನದ ದುಂದು ಹಾಗೂ ಯಾಂತ್ರಿಕ ಕುಂದುಗಳಿಂದ ಗ್ರಾಹಕರ ತಕರಾರುಗಳು ದಿನಂಪ್ರತಿ ಹೆಚ್ಚುತ್ತಿದ್ದವು. ಪ್ರತಿ ತಿಂಗಳ ಉತ್ಪಾದನೆ ಕೇವಲ ೯೦೦-೧೦೦೦ದ ಹತ್ತಿರ. ಅದರಲ್ಲೂ ನೂರಿನ್ನೂರು ಮಾರಾಟವಾಗದೆ ಬಿದ್ದುಕೊಂಡಿರುತ್ತಿದ್ದವು. ಹೀಗಾಗಿ ಈ ಕಂಪನಿಗೆ ತಂತ್ರಜ್ಞಾನದ ಅಮೃತ ಸಿಂಚನದ ಅವಶ್ಯಕತೆಯಿತ್ತು.

ಆಗ ೩೫ ವರ್ಷದವರಿದ್ದ ಡಾ. ಪಾಂಡುರಂಗ ಲೂನಾವನ್ನು ಚೇತರಿಸುವ ಆಹ್ವಾನವನ್ನು ಸ್ವೀಕರಿಸಿದರು. ಪ್ರತಿ ಲೀಟರಿಗೆ ಹೆಚ್ಚು ಕಿಲೋಮೀಟರುಗಳ ಓಟ, ಚಿತ್ತಾಕರ್ಷಕ ನೋಟ ಹಾಗೂ ಯಾಂತ್ರಿಕ ಕುಂದುಗಳಿಂದ ಬಿಡುಗಡೆ ಇವುಗಳಿಂದ ಕೂಡಿದ ಹೊಸ ಲೂನಾವನ್ನು ತಯಾ



ಸುವ ಕೆಲಸಕ್ಕೆ ಡಾ. ಪಾಂಡುರಂಗ ಕೈಹಾಕಿದರು. ಎಂಟು ತಿಂಗಳುಗಳ ಶೋಧನೆಯ ನಂತರ ಡಾ. ಪಾಂಡುರಂಗರ ಬುದ್ಧಿ, ಅನುಭವ, ನೈಪುಣ್ಯಗಳ ದ್ಯೋತಕವಾಗಿ ಹೊಸ ಲೂನಾ. ಹೊರಬಂದಿತು. ಹಾಗೂ ಹಾ ಹಾ ಎನ್ನುವಷ್ಟರಲ್ಲಿ ಹೊಸ ಲೂನಾ ಜನಪ್ರಿಯ ವಾಹನವಾಯಿತು. ತಿಂಗಳೊಂದಕ್ಕೆ ಸಾವಿರಕ್ಕೂ ಕಡಿಮೆ ಉತ್ಪಾದನೆಯಿಂದ ೬೦೦೦ಕ್ಕೆ ಏರಿತು.

ಹೊಸ ಲೂನಾದಲ್ಲಿಯ ಗುಣಗಳು ಹಾಗೂ ಅದನ್ನು ನಿರ್ಮಿಸುವದರ ಹಿಂದಿನ ಸುದೀರ್ಘ ಪ್ರಯೋಗಗಳು ಅರಿವಾಗುವಂತಿವೆ. ಅರ್ಧ ಅಶ್ವ ಶಕ್ತಿಯ ಈ ವಾಹನ ಪ್ರತಿ ಲೀಟರಿಗೆ ೬೦-೬೫ ಕಿಲೋಮೀಟರ್. ಅಂತರ ಕ್ರಮಿಸುತ್ತದೆ. ಅದರ ನೋಟ ಕೂಡ ಆಕರ್ಷಕವಾಗಿದೆ. ಭಾರತೀಯ ಚಾಲಕರನ್ನು ಲಕ್ಷ್ಯದಲ್ಲಿಟ್ಟುಕೊಂಡು ಈ ವಾಹನವನ್ನು ನಿರ್ಮಿಸಲಾಗಿದೆ. ಬಿಳಿಯ ದೇಶದ ಜನರಿಗಿಂತ ನಾವು ಕೊಂಚ ಕುಳ್ಳರು. ಕಾರಣ ಲೂನಾದ ಎತ್ತರವನ್ನು ಆ ಪ್ರಕಾರ ಕುಗ್ಗಿಸಲಾಗಿದೆ. ಇದಲ್ಲದೆ ಮುಂದಿನ ಚಾಲಕ ಮತ್ತು ಹಿಂಬದಿಯ ಯಾತ್ರಿಗಳಿಗೆ ಸುಖಾಸೀನರಾಗಿ ಕೂಡುವ ವ್ಯವಸ್ಥೆ ಮಾಡಲಾಗಿದೆ. ವಾಹನಗಳ ನಿರ್ಮಾಣದಲ್ಲಿ ಪ್ರಯೋಗಶಾಲೆಗಳೆಂದರೆ ದೇಶದುದ್ದಕ್ಕೂ ಹಬ್ಬಿದ ವಿವಿಧ ತೆರನ ರಸ್ತೆಗಳು. ಲೂನಾ ಮಾರುಕಟ್ಟೆಗೆ ಬರುವದಕ್ಕೆ ಮೊದಲು ೬೦,೦೦೦ ಕಿಲೋಮೀಟರುಗಳ ವಿವಿಧ ತೆರನ ರಸ್ತೆಗಳಲ್ಲಿಯ ಓಟವನ್ನು ಕೂಲಂಕಷವಾಗಿ ಪರೀಕ್ಷಿಸಲಾಯಿತು. ಎಂತಲೇ ಲೂನಾ ದೋಷ ವಾಹನ ಆಗಿದೆ.

## ಕೃಷಿ ಉಪಕರಣಗಳತ್ತ

ಲೂನಾ ನಿರ್ಮಿಸಿದ ನಂತರ ಡಾ. ಪಾಂಡುರಂಗರ ಲಕ್ಷ್ಯ ಭಾರತೀಯ ರೈತರ ಸಮಸ್ಯೆಗಳತ್ತ ಹೊರಳಿತು. ಭಾರತೀಯ ರೈತನ ಸರಾಸರಿ ಹಿಡುವಳಿ ಪ್ರಗತಿಶೀಲ ದೇಶಗಳಾದ ಅಮೇರಿಕ-ರಶಿಯಾಗಳಿಗಿಂತ ತೀರ ಚಿಕ್ಕದು. ಅದಲ್ಲದೆ ನಮ್ಮಲ್ಲಿ ನೀರಾವರಿಯ ನೆಲ ಅಷ್ಟೊಂದಿಲ್ಲ. ಇವೆಲ್ಲಕ್ಕೂ ಮಿಗಿಲಾಗಿ ಭಾರತೀಯ ರೈತ ವಿದೇಶೀ ಒಕ್ಕಲಿಗರಿಗಿಂತ ಕಡಿಮೆ ಇದ್ದುಳ್ಳವ. ಎಂತಲೇ ವಿದೇಶೀ ಕೃಷಿ ಯಂತ್ರಗಳು ನಮ್ಮ ನೆಲ ಹಾಗೂ ರೈತರಿಗೆ ಅಷ್ಟೊಂದು ಸರಿ ಹೋಗುವದಿಲ್ಲ. ಕಾರಣ ನಮ್ಮ ಪರಿಸ್ಥಿತಿಯನ್ನು ಎದುರಿಗಿಟ್ಟುಕೊಂಡು ಕೃಷಿಯಂತ್ರಗಳನ್ನೂ ಉಪಕರಣಗಳನ್ನೂ ನಿರ್ಮಿಸುವುದು ಅವಶ್ಯ. ಡಾ. ಪಾಂಡುರಂಗರು ದುರ್ಗಾಪುರದ ಸೆಂಟ್ರಲ್ ಮೆಕ್ಯಾನಿಕಲ್ ಇಂಜಿನಿಯರಿಂಗ್ ರಿಸರ್ಚ್ ಸಂಸ್ಥೆಯಲ್ಲಿದ್ದಾಗಲೇ ಅಪ್ಪಟ ಭಾರತೀಯ ತಂತ್ರಜ್ಞಾನದ ಟ್ರ್ಯಾಕ್ಟರ್ ನಿರ್ಮಿಸುವದರಲ್ಲಿ ಆಸ್ಥೆ ವಹಿಸಿದ್ದರೆಂದು ಈ ಮೇಲೆ ಹೇಳಲಾಗಿದೆ. ಅದನ್ನು ಮುಂದುವರಿಸಿ ಹೊಸ ಯಂತ್ರಗಳನ್ನು ಹುಡುಕಲು ೧೯೭೭ರಲ್ಲಿ ಅವರು ಮದ್ರಾಸಿನ ಖ್ಯಾತ ಟ್ರ್ಯಾಕ್ಟರ್ ಕಂಪನಿಯಾದ ಟ್ರ್ಯಾಕ್ಟರ್ಸ್ ಆ್ಯಂಡ್ ಫಾರ್ಮ್ ಇಕ್ವಿಪ್‌ಮೆಂಟ್ ಕಂಪನಿ ಸೇರಿದರು. ತೈಲ ಮಿತವ್ಯಯದ ಟ್ರ್ಯಾಕ್ಟರನ್ನು ಈ ಕಂಪನಿಯು ಹೊರತರುವಲ್ಲಿ ಡಾ. ಪಾಂಡುರಂಗರ ಕೈ ಇತ್ತು. ಇದೀಗ ಎಂಟು ಗತಿಯ ಗಿರಿಯರ್ ಬಾಕ್ಸ್ ಉಳ್ಳ ಟ್ರ್ಯಾಕ್ಟರರನ್ನು ನಿರ್ಮಿಸುವುದರಲ್ಲಿ ಅವರು ನಿರತರಾಗಿದ್ದಾರೆ. ಈ ಹೊಸ ಟ್ರ್ಯಾಕ್ಟರ್ ವಿವಿಧ ಉದ್ದೇಶಗಳಿಗೆ ಬಳಸಲ್ಪಡುವಂಥದಾಗಲಿದೆ.

## ಯಾರಿಗೂ ಕಡಿಮೆಯವರಲ್ಲ

ಸಾಧಾರಣವಾಗಿ ಭಾರತೀಯರಲ್ಲಿ ವಿದೇಶೀ ವಸ್ತುಗಳ ಬಗ್ಗೆ ತಂತ್ರಜ್ಞಾನದ ಬಗ್ಗೆ ಒಂದು ಹುಚ್ಚು ಒಲವು ಇದೆ. ಇದರ ಪರಿಣಾಮವಾಗಿ ಭಾರತೀಯ ವಸ್ತುಗಳೂ ತಂತ್ರಜ್ಞಾನವೂ ಕೀಳು ಎಂಬ ಭಾವನೆ ನಮ್ಮಲ್ಲಿ ಬೆಳೆದು ಬಂದಿದೆ. ಕಾರಣ ಭಾರತದಲ್ಲಿಯ ಪ್ರತಿಯೊಬ್ಬ ಉದ್ದಿಮೆದಾರನೂ ವಿದೇಶೀ ಸಹಯೋಗಕ್ಕಾಗಿ ಹಂಬಲಿಸುತ್ತಾನೆ. ಡಾ. ಪಾಂಡುರಂಗರು ಇದು ಸರಿಯಲ್ಲ ಎನ್ನುತ್ತಾರೆ. ನಾವು ಭಾರತೀಯರು, ಯಾರಿಗೂ ಕಡಿಮೆಯವರಲ್ಲ. ಆದರೆ ನಮ್ಮಲ್ಲಿರುವ ಒಂದು ಅವಗುಣವೆಂದರೆ ನಮಗಿರುವ ನೈಚ್ಯಾನುಸಂಧಾನ. ಆತ್ಮನಿಂದೆ ಆತ್ಮಹತ್ಯೆಗಿಂತಲೂ ಘಾತುಕವಾದುದು. 'ನಮ್ಮ

ದೇಶದ ಅಭಿವೃದ್ಧಿಗಾಗಿ ಸ್ವಾವಲಂಬನೆ ಒಂದು ಘೋಷಣೆಯಾಗಿ ಉಳಿಯದೆ, ಅದನ್ನು ವಸ್ತುಸ್ಥಿತಿಯಾಗಿ ಮಾರ್ಪಡಿಸಬೇಕು. ನಮ್ಮ ತಂತ್ರಜ್ಞಾನ ಇಂದು ಹಿಂದುಳಿದದ್ದಾದ್ದರಿಂದ ವಿದೇಶೀ ತಂತ್ರಜ್ಞಾನವನ್ನು ಕೊಳ್ಳಬೇಕು ಎಂಬ ವಾದವನ್ನು ಅವರು ಅಲ್ಲಗಳೆಯುತ್ತಾರೆ. ವಿದೇಶದಿಂದ ತಂದ ತಂತ್ರಜ್ಞಾನ ಇನ್ನು ೧೦ ವರ್ಷಗಳ ನಂತರ ಮತ್ತೆ ಹಳೆಯ ದಾಗುತ್ತದೆ. ಆಗ ನಾವು ಮತ್ತೆ ವಿದೇಶಗಳಿಗೆ ಕೈಯೊಡ್ಡಬೇಕಾಗುತ್ತದಲ್ಲವೆ? ಈ ವಿಷಚಕ್ರಕ್ಕೆ ಅಂತ್ಯವಿಲ್ಲ. ಕಾರಣ ನಮಗೆ ಬೇಕಿರುವ ತಂತ್ರ ಜ್ಞಾನವನ್ನು ನಾವೇ ನಿರ್ಮಿಸಿಕೊಳ್ಳದಿದ್ದರೆ ಅಥವಾ ಕನಿಷ್ಠ ಪಕ್ಷ ಆ ದಿಶೆಯಲ್ಲಿ ಹೆಜ್ಜೆ ಹಾಕದಿದ್ದರೆ ನಾವು ಕೊನೆಯವರೆಗೂ ಹಿಂದು-ಳಿಯುವೆವು.

ಇದಲ್ಲದೆ ವಿದೇಶೀ ತಂತ್ರಜ್ಞಾನದ ಬೆಲೆ, ಗತ್ತು, ಕರಾರುಗಳು ಕೂಡ ನಮ್ಮ ದೇಶಕ್ಕೆ ತೀರ ಮಾರಕವಾಗಿರುತ್ತವೆ. ಉದಾಹರಣೆಗಾಗಿ ಜಾಗರ್ ಯುದ್ಧ ವಿಮಾನದ ಪ್ರಕರಣವನ್ನೇ ತೆಗೆದು ಕೊಳ್ಳಿ. ಅಂತಹ ೪೦ ವಿಮಾನಗಳನ್ನು ಕೊಳ್ಳಲು ನಮ್ಮ ದೇಶ ೨೦೦೦ ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದೆ. ಅಂದರೆ ಪ್ರತಿಯೊಂದು ವಿಮಾ-ನಕ್ಕೆ ೫೦ ಕೋಟಿ ರೂಪಾಯಿ ಬೆಲೆ ಎಂದಾಯಿತು. ಡಾ. ಪಾಂಡುರಂಗರು ದೇಶದ ಈ ದುಂದು ವೆಚ್ಚ ವನ್ನು ಅರ್ಥಶಾಸ್ತ್ರದ ದೃಷ್ಟಿಯಿಂದ ಪ್ರಶ್ನಿಸುವು ದಿಲ್ಲ. ಆದರೆ ತಂತ್ರಜ್ಞಾನದ ಬೆಳವಣಿಗೆಯ ದೃಷ್ಟಿಯಿಂದ ಪ್ರಶ್ನಿಸುತ್ತಾರೆ. ಕೇವಲ ೪೦-೫೦ ಕೋಟಿ ರೂಪಾಯಿ ವೆಚ್ಚ ಮಾಡಿ ನಮ್ಮ ದೇಶ ದಲ್ಲಿಯೇ ಈ ವಿಮಾನ ನಿರ್ಮಿಸುವ ತಂತ್ರ ಜ್ಞಾನವನ್ನು ನಾವು ಸುಲಭವಾಗಿ ರೂಪಿಸಿಕೊಳ್ಳು ವುದು ಸಾಧ್ಯವಿದೆ ಎಂದು ಅವರು ಹೇಳು-ತ್ತಾರೆ. ತಾವು ಸೇರಿದ ಎಲ್ಲ ಕಂಪನಿ ಗಳಲ್ಲಿಯ ಅಧಿಕಾರಿಗಳಿಗೆ ವಿದೇಶೀ ತಂತ್ರ ಜ್ಞಾನದ ಬಗ್ಗೆ ಇರುವ ಹುಚ್ಚನ್ನು ಅಳಿಸಲು ಅವರು ಪ್ರಯತ್ನಿಸಿ ಯಶಸ್ವಿಯೂ ಆಗಿದ್ದಾರೆ. ತೀರ ಈಚೆಗಿನ ಒಂದು ಉದಾಹರಣೆ ಕೊಡುವು ದಾದರೆ, ಅವರ ಕಂಪನಿಯು ಟ್ರ್ಯಾಕ್ಟರಿಗೆ ಒಂದು ಬಿಡಿ ಭಾಗ ಬೇಕಿತ್ತು. ಅದರ ವಿದೇಶಿ ಕಂಪನಿಯ ಬೆಲೆ ೬,೦೦೦ ಪೌಂಡುಗಳು (ಸುಮಾರು ಒಂದೂವರೆ ಲಕ್ಷ ರೂಪಾಯಿ). ಆದರೆ ಡಾ. ಪಾಂಡುರಂಗರು ದೇಶಾದ್ಯಂತ ಎಲ್ಲ ಉತ್ಪಾದಕ ರಲ್ಲಿ ತನಿಖೆ ಮಾಡಲಾಗಿ ಬೆಂಗಳೂರಿನ ಒಂದು ಚಿಕ್ಕ ಕಂಪನಿಯು ಆ ಬಿಡಿ ಭಾಗವನ್ನು ಕೇವಲ ೧೪,೦೦೦ ರೂಪಾಯಿಗಳಿಗೆ ಉತ್ಪಾದಿಸಿ ಮಾರಲು ಸಿದ್ಧವಿತ್ತೆಂದು ಕಂಡುಬಂತು. ಈ ಬಿಡಿ ಭಾಗ ವಿದೇಶಿ ಬಿಡಿಭಾಗಕ್ಕಿಂತಲೂ ಶ್ರೇಷ್ಠವಾಗಿತ್ತು.

ಡಾ. ಪಾಂಡುರಂಗ ಅವರ ಪ್ರಕಾರ ನಾವು ಇಂದು ಹಿಂದುಳಿದವರಿರಬಹುದು. ಎಂತಲೇ ಅನೇಕ ಕುಂದು-ಕೊರತೆಗಳೂ ತಪ್ಪುಗಳೂ ನಮ್ಮಲ್ಲಿರಬಹುದು. ಆದರೂ ನಾವು ಸ್ವಾವ ಲಂಬನೆಯತ್ತ ಹೆಜ್ಜೆ ಹಾಕಲೇಬೇಕು.

## ನಾಳಿನ ಭಾರತ

ಆತ್ಮವಿಶ್ವಾಸದ ಭಾರತವನ್ನು ನಿರ್ಮಿಸುವುದು ಹೇಗೆ? ಡಾ. ಪಾಂಡುರಂಗ ಅವರು ಇಂದಿನ ಭಾರತ ವನ್ನು ಸ್ವಲ್ಪ ಅಲಕ್ಷ್ಯ ಮಾಡಿ ನಮ್ಮ ಮಕ್ಕ ಳತ್ತ ಬೊಟ್ಟು ಮಾಡುತ್ತಾರೆ. ನಮ್ಮ ಮಕ್ಕಳಿಗೆ ಬರೀ ಅಕ್ಷರಜ್ಞಾನದ ಪಾಠ ಹೇಳಿ ಕೊಡದೆ ಅವರಿಗೆ ಪ್ರತಿಕೂಲ ಪರಿಸ್ಥಿತಿಯನ್ನು ಹಿಮ್ಮೆ ಟ್ಟುವ ಆತ್ಮವಿಶ್ವಾಸವನ್ನು ಕಲಿಸಿಕೊಡಬೇಕು. ಪ್ರತಿಭೆಯೂ ಅಸಾಮಾನ್ಯ ಬುದ್ಧಿವಂತಿಕೆಯೂ ಕೇವಲ ದೈವದತ್ತವೆಂದು ಭಾವಿಸುವುದು ತಪ್ಪೆಂದು ಅವರು ಹೇಳುತ್ತಾರೆ. ಬಾಲ್ಯದಿಂದಲೇ ಸರಿಯಾದ ಶಿಕ್ಷಣ, ತರಬೇತಿ ನೀಡಿ ಅಂಥವರನ್ನು ನಿರ್ಮಿಸಲು ಸಾಧ್ಯವೆಂದು ಅವರು ಖಂಡಿತ ನಂಬುತ್ತಾರೆ.

## ಸನ್ಮಾನ ! ಯಾರಿಗೆ?

ಡಾ. ಪಾಂಡುರಂಗರಂತಹ ಎಲೆ ಮರೆಯ ಹೂಗಳು ನಮ್ಮ ಭಾರತದಲ್ಲಿ ಸಾಕಷ್ಟಿವೆ. ಅವರನ್ನು ಗುರುತಿಸಿ ಅವರ ಕೊಡುಗೆಯ, ಅವರ ಬುದ್ಧಿಯ ಸನ್ಮಾನವಾಗುವುದು ಅಪರೂಪ. ನಮ್ಮ ದೇಶದಲ್ಲಿ, ಅಂತೆಯೇ ನಮ್ಮ ರಾಜ್ಯದಲ್ಲಿ ಕೂಡ, ಮಾನ ಸನ್ಮಾನಗಳು **ಯಾರಿಗೆ** ಎಂಬ ಪ್ರಶ್ನೆಗೆ ಉತ್ತರ ಸುಲಭವಲ್ಲ. ಪತ್ರಾರು.

ನೂರಾರು ಬಗೆಯ ಸಮೀಕರಣಗಳು ಅಲ್ಲಿ ಕೆಲಸ ಮಾಡುತ್ತವೆ. ಅಲ್ಲಿ ಯಾವುದೇ ಕ್ಷೇತ್ರದಲ್ಲಿನ ಯೋಗ್ಯನೊಬ್ಬನಿಗೆ ಗೌರವ ಸಂದರೆ ಅದು ಅಂತೂ ಇಂತೂ ಕುಂತೀ ಮಕ್ಕಳಿಗೆ ದೊರೆತ ರಾಜ್ಯದಂತಿರುತ್ತದೆ. ಆದರೆ ಡಾ. ಪಾಂಡುರಂಗರಂತಹ ಇಂಜಿನಿಯರರು, ಕಾರ್ಮಿಕರು, ಕಸಬುದಾರರು ದೇಶವನ್ನು ಕಟ್ಟುವ ಜನರು. ವಿವಿಧ ಯಂತ್ರಗಳನ್ನು ನಿರ್ಮಿಸಿ ಕಷ್ಟಗಳುಗಳ, ದಿನ ದಲಿತರ ಶ್ರಮವನ್ನು ಹಗುರಮಾಡುವ ಹಾಗೂ ಅವರ ಆದಾಯ ಹೆಚ್ಚಿಸುವ, ಮಿತವ್ಯಯದ ಸಾಧನಗಳನ್ನು ನಿರ್ಮಿಸಿ, ವಿದೇಶೀ ವಿನಿಮಯವನ್ನು ಉಳಿಸುವ ಕಾರ್ಯ ನಿರ್ವಹಿಸುವ ಡಾ. ಪಾಂಡುರಂಗರಂತಹ ಇಂಜಿನಿಯರರಿಗೆ ನಮ್ಮ ಸಮಾಜ ಹಾಗೂ ಸರಕಾರ ಕೊಡುವುದು ತಿಂಗಳ ಕೊನೆಗೆ ಸಂಬಳವಷ್ಟೆ. ಇದು ಸರಿಯೆ? ಪ್ರಸಿದ್ಧ ಫ್ರೆಂಚ್ ಅರ್ಥಶಾಸ್ತ್ರಜ್ಞ ಪ್ರೌಧಾನನ್ ಒಂದು ನೀತಿಕಥೆ ಈ ಸಂದರ್ಭದಲ್ಲಿ ಉಲ್ಲೇಖಿಸುವಂತಿದೆ: "ಒಂದು ರಾತ್ರಿ ಒಂದು ದೇಶದಲ್ಲಿಯ ಎಲ್ಲ ಕವಿಪುಂಗವರು, ನಾಟ್ಯಶಿಖಾಮಣಿಗಳು, ಕಾದಂಬರೀಸಾರ್ವಭೌಮರು, ನಟಸಮ್ರಾಟರು, ತಥಾಕಥಿತ ಮುಂದಾಳುಗಳು ಇತ್ಯಾದಿಗಳೆಲ್ಲ ಸತ್ತರೆಂದು ತಿಳಿಯಿರಿ. ಮಾರುದಿನ ಬೆಳಿಗ್ಗೆ ಈ ಘಟನೆಯಿಂದ ಆ ದೇಶಕ್ಕೆ ಆಗುವ ನಷ್ಟವೇನು? ಏನೂ ಇಲ್ಲ. ದೇಶ ಸುರಳೀತವಾಗಿ ನಡೆದುಹೋಗುತ್ತದೆ. ಆದರ ಬದಲು ಒಂದು ರಾತ್ರಿ ಆ ದೇಶದಲ್ಲಿಯ ಎಲ್ಲ ರೈತರು, ಕಾರ್ಮಿಕರು, ಬಡಿಗರು, ಕಮ್ಮಾರರು, ಇಂಜಿನಿಯರರು, ತೀರಿಹೋದರೆ ಮಾರುದಿನ ಬೆಳಿಗ್ಗೆ ಆ ದೇಶ ನಿರ್ಜೀವವಾಗುತ್ತದೆ. ದೇಶದ ಉತ್ಪಾದನೆಯ ಚಕ್ರಗಳೆಲ್ಲ ನಿಂತುಹೋಗುತ್ತವೆ" ತಾತ್ಪರ್ಯ? ದೇಶದ ಜೀವ ಮತ್ತು ಗತಿ ಆ ದೇಶದ ಕಾರ್ಮಿಕರು, ಇಂಜಿನಿಯರರೇ ಆಗಿದ್ದಾರೆ. ಈ ಜನರೇ ದೇಶದ ಪ್ರಾಣ. ಅವರನ್ನು ಪ್ರೋತ್ಸಾಹಿಸಿದರೆ ದೇಶದ ಅಭಿವೃದ್ಧಿಯಾಗುವುದು. ನಮ್ಮ ದೇಶ ಅರ್ಥಪೂರ್ಣವಾದ ಅಭಿವೃದ್ಧಿ ಸಾಧಿಸುವ ಹಂಬಲ ನಮ್ಮ ಸರಕಾರಗಳಿಗೆ ಸಮಾಜಕ್ಕೆ ಇದ್ದರೆ ಪ್ರೌಧಾನನ ನೀತಿ ಖಂಡಿತ ಅನ್ವಯವಾಗುತ್ತದೆ. ✡



## ಕರುಣಾಳು (?)

ಒಳ್ಳೆಯ ಬಟ್ಟೆ ಧರಿಸಿದ್ದ ಶ್ರೀಮಂತನೆಂಬಂತೆ ತೋರುತ್ತಿದ್ದ ಒಬ್ಬಾತ ಚರ್ಚಿನ ಪಾದ್ರಿಯ ಬಳಿ ಬಂದು ನೆರೆಹೊರೆಯಲ್ಲಿರುವ ಬಡತನ ಅನಾರೋಗ್ಯಕರ ಪರಿಸರ ಇತ್ಯಾದಿಗಳ ಬಗೆಗೆ ಹೇಳುತ್ತಾ ತಾನು ಕರೆದುಕೊಂಡು ಬಂದಿದ್ದ ಓರ್ವ ಹೆಂಗಸನ್ನು ತೋರಿಸಿ,

"ನೋಡಿ ... ಈಕೆ ಬಡ ವಿಧವೆ. ಈಕೆಗೆ ಆರು ಮಕ್ಕಳಿದ್ದಾರೆ. ಎಲ್ಲಾ ಪುಟ್ಟ ಪುಟ್ಟ ಮಕ್ಕಳು. ಬಹಳ ದಿವಸಗಳಿಂದ ಅವರು ಹೊಟ್ಟೆಗಿಲ್ಲದೆ ಹಸಿದು ಕಂಗಾಲಾಗಿದ್ದಾರೆ. ಅವರಲ್ಲಿ ಇಬ್ಬರು ಮಕ್ಕಳು ಗಂಭೀರಸ್ವರೂಪದ ಕಾಹಿಲೆಯಿಂದ ನರಳುತ್ತಿದ್ದಾರೆ. ಜೊತೆಗೆ ಈಕೆ ಆರು ತಿಂಗಳ ಮನೆ ಬಾಡಿಗೆ ಹಣ ೩೦೦ ರೂಪಾಯಿಗಳನ್ನು ಕೊಡದೆ ಉಳಿಸಿಕೊಂಡಿದ್ದಾಳೆ. ಮನೆಯಿಂದ ಈಕೆಯನ್ನು ಹೊರಕ್ಕೆ ಉಚ್ಚಾಟಿಸುವ ಪರಿಸ್ಥಿತಿ ಬಂದಿದೆ. ಈಕೆ ಮನೆ ಬಾಡಿಗೆಯನ್ನು ಕೊಡಲು ಶಕ್ಯವಾಗವಂತೆ ಹಣಸಂಗ್ರಹಣೆಗಾಗಿ ಬಂದೆ," ಎಂದು ಹೇಳಿದ.

"ಖಂಡಿತವಾಗಿಯೂ ಸಹಾಯ ಮಾಡುವಾ. ಇಂಥ ಒಳ್ಳೆಯ ಕೆಲಸಕ್ಕೆ ಸಹಾಯಮಾಡದೆ ಇನ್ನು ಯಾವುದಕ್ಕೆ ಮಾಡುವುದು? ನಿಮ್ಮಂತ ಶ್ರೀಮಂತರೇ ಈ ಕಾರ್ಯಕ್ಕೆ ಮುನ್ನುಗ್ಗಿರುವಾಗ ದೇವರ ಮಕ್ಕಳಾದ ನಾವು ಮಾಡಬಾರದೆ? ಅದ್ಸರಿ, ತಾವು ಯಾರು?" ಎಂದು ಪಾದರಿಗಳು ಆತನನ್ನು ಕೇಳಿದರು.

"ನಾನು ಈಕೆಗೆ ಮನೆಯನ್ನು ಬಾಡಿಗೆಗೆ ಕೊಟ್ಟಿರುವವ," ಎಂದ ಆ ಶ್ರೀಮಂತ.

-ಎಸ್. ವಿಶ್ವನಾಥ

# ಜಾಗತಿಕ ಖ್ಯಾತಿಯ ದ್ಯೂತಾಲಯ

**ನಾಗೇಶ ಜಿ. ವೈದ್ಯ**

ಅದೊಂದು ವಿಚಿತ್ರ ಕ್ಷೇತ್ರ. ಹಣದ ಹೊಳೆಯೇ ಅಲ್ಲಿ ಉಕ್ಕೇರುತ್ತಿದೆ. 'ಝಣ್ ಝಣ್' ಎಂದು ಹಣದ ಸದ್ದು ಕೇಳುವುದರ ಜತೆಗೆ ಅಪ್ಸರೆಯರ ಕುಣಿತ, ಗಂಧರ್ವರ ಗಾಯನ ಎಡೆಬಿಡದೆ ಅವ್ಯಾಹತವಾಗಿ ನಡೆಯುತ್ತಿದೆ. ಜಗತ್ತಿಗೇ ರಾತ್ರಿಯಾದಾಗ ಇಲ್ಲಿ ಮಾತ್ರ ಹಗಲಾಗುತ್ತದೆ! ರಾಜ ಮಹಾರಾಜರುಗಳೆಲ್ಲ ಇಲ್ಲಿಂದ ಹೋಗುವಾಗ ಬರಿಗೈ ಭಿಕಾರಿಯಾದದ್ದುಂಟು. ಸಾಮಾನ್ಯ ಮನುಷ್ಯ ಇಲ್ಲಿ ಕಾಲಿಟ್ಟಾಕ್ಷಣ ಲಕ್ಷ್ಮೀಪತಿಯಾದದ್ದೂ ಇದೆ. ಆದರೆ ಅಂತಹ ಅದೃಷ್ಟವಂತರು ತೀರ ಕಡಿಮೆ.

ಈ ನೆಲದಲ್ಲಿ ಒಮ್ಮೆ ಕಾಲಿಟ್ಟರೆ, ತನ್ನ ಮನೆಯನ್ನೇ ಮರೆಯುವಷ್ಟು ಮೋಹಕತೆ ಇಲ್ಲಿದೆ. ಜೊತೆಗೆ ಮಾದಕತೆಯ ಬೆಡಗು! ಇಂಥದೊಂದು ನಗರ ಜಗತ್ತಿನಲ್ಲಿದೆಯೆಂದರೆ ನಂಬುವುದು ಕಷ್ಟ. ಆದರೆ ಫ್ರಾನ್ಸಿನ ದಕ್ಷಿಣದಲ್ಲಿರುವ ಈ ನಗರ ಇಂದಿಗೂ ಕಂಗೊಳಿಸುತ್ತಿದೆ: ತನ್ನತ್ತ ಲಕ್ಷಾಂತರ ಜನರನ್ನು ಆಕರ್ಷಿಸುತ್ತಿದೆ.

ಒಂದು ನೂರು ವರ್ಷಗಳಿಗೂ ಹಿಂದಿನ ಸಂಗತಿ. ದಟ್ಟವಾದ ಅರಣ್ಯವೊಂದರಲ್ಲಿ ಫ್ರಾಂಸೊಯಾ ಬ್ಲಾಂ ಎಂಬಾತ ಒಂದು ಕುಣಿತದ ಮನೆ ಕಟ್ಟಿಸಿದ. ಕ್ರೂರ ಮೃಗಗಳ ವಾಸಸ್ಥಾನವಾಗಿದ್ದ ಆ ಕಾಡಿನಲ್ಲಿ ನೃತ್ಯ ಶಾಲೆ ಕಟ್ಟಿಸಿದವನಿಗೆ ಹುಚ್ಚಿರಬೇಕೆಂದುಕೊಂಡರು ಜನ. ಆದರೆ ಆತ ಜೂಜಿನಿಂದಲೇ ಜೀವನ ಸಾಗಿಸುವವ. ಬಿಸ್ಮಾರ್ಕನ ಕಾನೂನು ಜೂಜನ್ನು ಪ್ರತಿಬಂಧಿಸಿದ್ದರಿಂದ ಈತ ತನ್ನ ದ್ಯೂತಾಲಯವನ್ನು ಈ ವನಕ್ಕೆ ವರ್ಗಾಂತರಿಸಿದ್ದ.

ಫ್ರಾಂಸೊಯಾ ಬ್ಲಾಂ ತನ್ನ ಯೋಜನೆಗಳನ್ನು ಒಂದೊಂದಾಗಿ ಕಾರ್ಯರೂಪಕ್ಕಿಳಿಸಿದ. ಕಣ್ಣಿಗೆ ಹೆಣ್ಣಿನ ಕುಣಿತ, ನಾಲಿಗೆಗೆ ಸವಿಯಾದ ಮದ್ಯ, ಹೊತ್ತು ಕಳೆಯಲು ಜೂಜು ಇವುಗಳಿದ್ದರೆ ಯಾವ ವಿಲಾಸಿ ಈ ಕಡೆ ಬಾರದಿರನು? ಕಾಡಿನಲ್ಲಿ ಕಟ್ಟಿಸಿದ ಈ ನೃತ್ಯಶಾಲೆಗೆ 'ಮಾಂತೆ ಕಾರ್ಲೋ' ಎಂದು ಹೆಸರಿಟ್ಟ. ಅನೇಕ ಜೂಜುಖೋರರು ಅವನ ಪ್ರಯತ್ನಕ್ಕೆ ಮರುಗು ಮರುಗಿದರು. ಇಂತಹ ದ್ಯೂತಾಲಯ ಕಾಡಿನಲ್ಲಿರುವ ಬದಲು ನಗರದಲ್ಲಿದ್ದರೆ ಚೆನ್ನ. ಎಲ್ಲ ಬಿಟ್ಟು ಈತ ಕಾಡಿನಲ್ಲಿ ಕಟ್ಟಿಸಿದ್ದಾನಲ್ಲ! ಈ ದ್ಯೂತಾಲಯ ಖಂಡಿತ ಅಲ್ಪಾಯುಷಿಯೆಂದುಕೊಂಡರು. ಮೊದಮೊದಲು ನಗರದಿಂದ ಇಲ್ಲಿಗೆ ಬರಲು ಫ್ರಾನ್ಸಿನ ಜೂಜುಖೋರರು ಹಿಂಜರಿದರು. ಆದರೂ ಒಮ್ಮೆ ನೋಡೋಣವೆನ್ನುವ ಕುತೂಹಲದಿಂದ ಹಲವರು ಆಗಮಿಸಿದರು. ಅಷ್ಟಾದದ್ದೇ ತಡ, ಇನ್ನೂ ಬರಬೇಕೆನಿಸಿತು. ಜೀವನದಲ್ಲೊಮ್ಮೆಯಾದರೂ ಈ ದ್ಯೂತಾಲಯಕ್ಕೆ ಭೇಟಿ ನೀಡದಿದ್ದರೆ ಜೀವನವೇ ವ್ಯರ್ಥವೆಂದು ಹಲವರು ಹೇಳಲಾರಂಭಿಸಿದರು. ಬ್ಲಾಮನಿಗೂ ಉತ್ತೇಜನ ದೊರಕಿತು. ಆತ ನೆಲ ಜಲ ಮಾರ್ಗವನ್ನು ನಿರ್ಮಿಸಿದ. ಸ್ನಾನಗೃಹ, ಸಂಗೀತ ಸಾಧನಗಳು, ಉಳಿದುಕೊಳ್ಳಲು ಹವೆಲಿಗಾಗಿ

ಪ್ರತ್ಯೇಕ ಕೊಠಡಿಗಳ ವ್ಯವಸ್ಥೆ ಮಾಡಿದ. ಅಷ್ಟು ಸಾಲದೇ ಅಲ್ಲಿಗೆ ಬರಲು ಪುಟ್ಟ ವಿಮಾನವೊಂದನ್ನೂ ಕೊಂಡುಕೊಂಡ.

ಈ ನೃತ್ಯಶಾಲೆ ನಿರ್ಮಿಸಿದವನ ವಿಚಾರ ಫಲಪತ್ತಾಗಿತ್ತು. ಒಮ್ಮೆ ಇದನ್ನು ನೋಡಿದವ ಕದಲದಂತಹ ರಮ್ಯಶ್ರೀ. ಸುತ್ತಲೂ ಸುಂದರ ಕಾನನ. ಜಲವಿಹಾರಕ್ಕೆ, ಸ್ನಾನಕ್ಕೆ ನೀರಿನ ಬುಗ್ಗೆ. ಅಲ್ಲಲ್ಲಿ ಚಿಕ್ಕ ಜಲಪಾತ. ಇಂತಹ ಚೆಲುವಿನ ತೆಕ್ಕೆಯಲ್ಲಿ ಈ ಶೃಂಗಾರ ಗೃಹ ತಲೆ-ಯೆತ್ತಿತ್ತು.

ಬ್ಲಾಮನಿಗೆ ಸೋಲೆಂಬುದೇ ಗೊತ್ತಿಲ್ಲ. ಪೋಲೋ, ಬಿಲಿಯರ್ಡ್ಸ್‌ಗಳಿಗೆ ಜನ ಮುತ್ತಿದರು. ಬ್ಲಾಂ "ಸುಲೇತ್" ಎಂಬ ಹೊಸ ಆಟವೊಂದನ್ನು ಶೋಧಿಸಿದ. ಇದಕ್ಕೆ ಮಾರುಹೋದ ಶ್ರೀಮಂತರನ್ನೆಲ್ಲ ಆತ ನಿರ್ದಯನಾಗಿ ಸುಲಿದ. ದಿನಗಳೆದಂತೆ 'ಮಾಂತೆ ಕಾರ್ಲೋ'ದಲ್ಲಿ ಜೂಜಾಡುವುದು ಸಾರ್ಥಕತೆಯ ಸಂಕೇತವೇ ಆಯಿತು.

ಜೂಜು ಒಂದೇ ಇದ್ದರೆ ಜನ ತೃಪ್ತಿಪಡರೆಂದು ಬ್ಲಾಮನಿಗೆ ಗೊತ್ತು. ಬಂದವರ ಸಂತೋಷಕ್ಕಾಗಿ ಪಣ್ಣಿನ ಅಂಗಡಿಗಳಾದವು. ಬ್ಲಾಂ ಆಟಕ್ಕೆ ಕುಳಿತರೆ ಖಂಡಿತ ಗೆದ್ದಂತೆಯೆ. ಹಣದ ರಾಶಿಯನ್ನು ಎರಡೂ ಕೈಗಳಿಂದ ಬಾಚಿಕೊಳ್ಳುತ್ತಿದ್ದ. ಅವನನ್ನು ಕಂಡವರಿಗೆ ಇನ್ನೂ ಆಡಬೇಕೆನಿಸುತ್ತಿತ್ತು. ತನಗೆ ಬೇಸರ ಬಂದಾಗ ಬ್ಲಾಂ ಬೇಕೆಂದೇ ಸೋಲು ತಂದುಕೊಳ್ಳುತ್ತಿದ್ದ. ಗೆದ್ದವ ಲಕ್ಷಾಧೀಶನಾಗುತ್ತಿದ್ದ. ಆ ಪ್ರದೇಶದ ದೊರೆ, ಸರದಾರರು 'ಮಾಂತೆ ಕಾರ್ಲೋ' ಸುತ್ತ ವಸತಿ ಮಾಡತೊಡಗಿದರು. ಕೆಲವೇ ವರ್ಷಗಳಲ್ಲಿ ಫ್ರಾಂಸೊಯಿ ಬ್ಲಾಂ ಜಾಗತಿಕ ಶ್ರೀಮಂತರಲ್ಲೊಬ್ಬನಾಗಿದ್ದ.

೧೮೭೭ರಲ್ಲಿ ಬ್ಲಾಂ ಸತ್ತ. ದ್ಯೂತಾಲಯ ಅವನ ಮಗ ಮೌರುಸಿಯ ಕೈಗೆ ಬಂತು. ಅವನೂ ಅಪ್ಪನಷ್ಟೇ ಬುದ್ಧಿವಂತ, ಜೂಜು-ಗ್ರೇಸರನಲ್ಲಿದ್ದ ಸರ್ವಗುಣಗಳ ತವರು ಮನೆ. ಆಟಗಳಿಗಿಂತ ಈತ ವಿಲಾಸ ಭವನಗಳನ್ನು ಸುಸಜ್ಜಿತಗೊಳಿಸಿದ. ಫ್ರಾನ್ಸಿನ ಸುಂದರಿಯರ ನೃತ್ಯವಾಡಿಸಿದ. ಆಮಂತ್ರಿತರ ಕಣ್ಣುಗಳಿಗೆ ಸಿಹಿಯೂಟ ಉಣಬಡಿಸಿದ. ವೇದಿಕೆಯಲ್ಲಿ ನಗ್ನರಾಗಿ ಕುಣಿಯುತ್ತಿದ್ದ ನೀರೆಯರನ್ನು ಕಂಡ ಇಡೀ ಫ್ರಾನ್ಸಿನ ಶ್ರೀಮಂತರು ಹುಚ್ಚೆದ್ದರು. ಧಾರಾಳವಾಗಿ ಹಣ ಸುರಿದರು. ಮೊದಲನೆಯ ಮಹಾಯುದ್ಧದ ಕಾಲದಲ್ಲಿ ಆರು ತಿಂಗಳು ಮಾತ್ರ ಈ ದ್ಯೂತಾಲಯದ ಆದಾಯ ಕಡಿಮೆಯಾಯಿತು. ಬಳಿಕ ಇದರಷ್ಟು ಸುರಕ್ಷಿತ ದ್ಯೂತಾಲಯ ಇನ್ನೆಲ್ಲೂ ಇಲ್ಲವೆಂದು ಜನ ನುಗ್ಗಿದರು. ಮೌರುಸಿ ತನ್ನ ಅಪ್ಪನ ಸಂಪತ್ತನ್ನು ನಾಲ್ಮಡಿಗೊಳಿದಸಿದ.

ಇಲ್ಲಿಯ ಆಡಳಿತವನ್ನು ಮೌರುಸಿ ಮತ್ತೆ ಬದಲಿಸಿದ. ಆಗ ಇದಕ್ಕೆ ಇನ್ನೂ ರಂಗು ಬಂತು. ಜಗತ್ತಿನ ಹೆಸರಾಂತ ನಟನಟಿಯರ ನಾಟಕ ನೃತ್ಯಗಳ ನಿತ್ಯೋತ್ಸವ ನಡೆಯತೊಡಗಿತು. ಯುರೋಪಿನ ಶ್ರೀಮಂತ ಯುವಕ ಯುವತಿಯರ ಹೆಜ್ಜೆಗಳಿಂದ ಈ ಶೃಂಗಾರ ತೀರ್ಥ ಅಂಕಿತವಾಯಿತು. ವಿಲಾಸ, ಮನ್ಮಥ ಲೀಲೆಗಳು ಆರಂಭವಾದ ಮೇಲೆ ಪರಿಸ್ಥಿತಿ ಹದಗೆಟ್ಟಿತು. ಕೆಲವು ಕೊಲೆಗಳು ನಡೆದವು. ಕ್ಷಿಪ್ರದಲ್ಲೇ ಪರಿಸ್ಥಿತಿ ಶಾಂತವಾಯಿತು. ಈ ಆನಂದ ತೀರ್ಥಕ್ಕೆ ಶ್ರೀಮಂತ ಆಗಾಖಾನ, ಅಲೀಖಾನ, ಅರಸು ಫರೂಕನಿಂದ ಹಿಡಿದು ಅನೇಕ ಭಾರತೀಯ ಮಹಾರಾಜರೂ ಹೋಗಿ ಜೇಬು ಬರಿದುಮಾಡಿಕೊಂಡು ಬಂದಿದ್ದಾರೆ! ಇಂದಿಗೂ ಆ ಜೂಜುಗಾರರ ಆನಂದತೀರ್ಥ ಬ್ಲಾಮನ ವಾರಸುದಾರರಿಂದಲೇ ನಡೆಯುತ್ತಿದೆ. ✡

**"ಸಲಹೆಗಾರ ಅಂದರೆ ಯಾರು?"**

**"ನಮ್ಮ ಕೈಗಡಿಯಾರವನ್ನೇ ನಮ್ಮಿಂದ ಎರವಲು ಪಡೆದು ವೇಳೆ ಎಷ್ಟಾಗಿದೆಯೆಂಬುದನ್ನು ಹೇಳಿ ಕೊನೆಗೆ ಈ 'ಸೇವೆಗಾಗಿ' ನಮಗೇ ಬಿಲ್ಲು ಕಳಿಸುವಾತ."**

# ಮೂಕಪ್ರಶ್ನೆ

ಮೂಲ : ಶೌರಿ ಗುಪ್ತಾ
ಕನ್ನಡಕ್ಕೆ : 'ಮೂರ್ತಿ' ರಾಮನಾಥಪುರ

ಕಾಲ ಹೇಗೆ ಕಳೆಯಿತು, ಯುಗ ಹೇಗೆ ಬದಲಾಯಿತು ಏನೂ ತಿಳಿಯಲಿಲ್ಲ. ನನಗೆ ಇದ್ದಕ್ಕಿದ್ದಂತೆ ಆ ಕಳೆದ ದಿನಗಳ ನೆನಪು ಬರುತ್ತದೆ! ಅತೀತವಾದ ಆ ದೃಶ್ಯಗಳು ಏಕೆ ಮೆದುಳಿನಲ್ಲಿ ಮಿಂಚಿನಂತೆ ಸುಳಿದಾಡುತ್ತವೋ ನೆನಪಿಗೆ ಬರುವುದಿಲ್ಲ. ಮತ್ತೆ ಕ್ಷಣ ಮಾತ್ರದಲ್ಲಿಯೇ ನನ್ನ ನವೀನ ಭವ್ಯ ಅರಮನೆಯಂತಹ ಬಂಗಲೆಯ ಫಸ್ಟ್ ಕ್ಲಾಸ್ ಡ್ರಾಯಿಂಗ್ ರೂಮಿಗೆ ಹಿಂದಿರುಗುತ್ತೇನೆ. ಇಲ್ಲಿ ಕೂರಲು ಹಿತವಾಗಿರುತ್ತದೆ– ಹಿಂದಿನ ಕಾಲದ ಉತ್ಕೃಷ್ಟ ಫರ್ನಿಚರುಗಳು, ಮೃದುವಾದ ಮೆತ್ತೆಗಳು, ಗೋಡೆಗಳ ಮೇಲೆ ಅಂದವಾದ ಚಿತ್ರಗಳು ಮತ್ತು ಕೊಠಡಿಯ ವಾಲ್ಸ್ ಕಡೆಗೆ ಜಾಗರೂಕತೆಯಿಂದ ಅಣಿಯಾಗಿ ಜೋಡಿಸಿದ ನನ್ನ ಲೆಕ್ಕವಿಲ್ಲದಷ್ಟು ಬಹುಮಾನ– ಪದಕಗಳು ಟ್ರೋಫಿ ಮತ್ತು ಪ್ರಶಸ್ತಿ ಪತ್ರಗಳು ಇವೆಲ್ಲವುಗಳಿಂದ ನಾನು ದೊಡ್ಡ ಹೆಸರು ಗಳಿಸಿದ್ದೇನೆ.

ನಾನು ಮೊದಲು ಲೇಖನಿ ಹಿಡಿದ ದಿನಗಳು ನನಗೆ ನೆನಪಿಗೆ ಬರುತ್ತವೆ. ಹೊಸ ಹವ್ಯಾಸ ಹೊಸ ಉತ್ಸಾಹ. ಎಲ್ಲಾದರೂ ಲೇಖನವೋ ಕವಿತೆಯೋ ಪ್ರಕಟವಾದರೆ ಮನಸ್ಸೆಲ್ಲಾ ಪುಟಿದೇಳುತ್ತಿತ್ತು. ಒಂದು ದಿನ ನನ್ನ ಮಾವನಿಂದ ನನ್ನಜ್ಜಿ ಸತ್ತರೆಂದು ಪತ್ರ ಬಂತು. ಅವರ ಜೀವನ ಸಂಗಾತಿಯಾದ ಸಂಪತ್ತನ್ನೆಲ್ಲಾ ನನ್ನ ಹೆಸರಿಗೆ ಮಾಡಿರುವರೆಂದು ತಿಳಿದ ಮೇಲೆ ಇನ್ನೇನಿದೆ! ಹೊಟ್ಟೆ ಪಾಡಿಗೆ ಭದ್ರವಾಯಿತೆಂದು ಯೋಚಿಸಿದೆ. ಸಾಹಿತ್ಯ ಸಾಧನೆ ಮಾಡಬೇಕೆಂದು ಚಿಂತಿಸಿ ಶಾಲಾ ಕೆಲಸಕ್ಕೆ ರಾಜೀನಾಮೆ ಕೊಟ್ಟೆ.

ನಿಜವಾಗಿ ನಾನು ಬಯಸಿದಂತೆಯೇ ಕೆಲವು ದಿನಗಳಲ್ಲಿಯೇ ಮನೆ ಸಿಕ್ಕಿತು. ಅಮೃತಸರದಿಂದ ಲಾಹೋರಿಗೆ ಹೋಗುವ ರಸ್ತೆಯಲ್ಲಿದ್ದ ಹಳ್ಳಿಯೊಂದರ ಅಂಚಿನಲ್ಲಿ ಮೂರು ಕೋಣೆಗಳ ಅನುಕೂಲಕರ ಮನೆ ಮಾವಿನ ತೋಟದ ಮಧ್ಯದಲ್ಲಿತ್ತು. ನಾನು ಕೂಡಲೇ ಬಟ್ಟೆ–ಬರೆ, ಅಡಿಗೆ ಪಾತ್ರೆ, ಪುಸ್ತಕಗಳು, ಟೈಪ್‌ರೈಟರ್, ಕಾಗದ–ಪತ್ರಗಳು, ಪೆನ್ನು ಎಲ್ಲವನ್ನೂ ಕಟ್ಟಿದೆ. ಎರಡು ದಿನಗಳಲ್ಲಿ ನಾನು ನನ್ನ ಹೊಸ ಮನೆಯಲ್ಲಿ ಪೂರ್ಣ ರೀತಿಯಿಂದ ಸ್ಥಿತವಾಗೇ ನನ್ನ ಕಾದಂಬರಿ ಬರೆಯುವುದರಲ್ಲಿ ಮಗ್ನಳಾದೆ.

ಆಗಾಗ್ಗೆ ಸಂಜೆ ಹಾಗೆಯೇ ಸುತ್ತಾಡಿ ಬರಲು ಹೋಗುತ್ತಿದ್ದೆ. ಪೇಟೆಯಿಂದ ಹೂ–ಹಣ್ಣು ಕೊಳ್ಳಲು, ಹಾಲು ಮಾರುವವನ ವೃದ್ಧ ತಾಯಿಯ ಕ್ಷೇಮ ಸಮಾಚಾರ ವಿಚಾರಿಸಲು ಹೋಗುತ್ತಿದ್ದೆ. ಒಂದು ದಿನ ನಾನು ಹಳ್ಳಿಯಿಂದ ಸಾಕಷ್ಟು ದೂರ ಹೊರಟು ಬಂದೆ. ದಾರಿಯ ಬದಿಯಲ್ಲಿ ಸುಮಾರು ಹತ್ತು ಅಡಿ ಎತ್ತರದ ಅಪಾರದ ಗೋಡೆ ಎದ್ದಿರುವುದು ಕಂಡಿತು. ಸ್ವಲ್ಪ ಮುಂದೆ ಹೋದಾಗ ಎತ್ತರವಾದ ಕಬ್ಬಿಣದ ಸರಳುಗಳ ಬಾಗಿಲು ಕಂಡಿತು. ಅದಕ್ಕೆ ಒಂದು ದಪ್ಪವಾದ ತುಕ್ಕು ಹಿಡಿದ ಬೀಗ



ಹಾಕಿತ್ತು. ಒಳಗೆ ಬಹು ದೂರದಲ್ಲಿ ಯಾವುದೋ ಒಂದು ದೊಡ್ಡ ಕಟ್ಟಡ ನಿಂತಿತ್ತು. ಸಂಜೆಯ ಮಬ್ಬಿನಲ್ಲಿ ಏನೂ ಸರಿಯಾಗಿ ಕಾಣುತ್ತಿರಲಿಲ್ಲ. ಆ ಕಟ್ಟಡದಲ್ಲಿ ಶಾಲೆಯ ಗಂಟೆಯಂತೆ ಟನ್–ಟನಾಟನ್–ಟನ್ ಶಬ್ದವಾಯಿತು. ಇಲ್ಲಿ ಯಾರಿದ್ದಾರೆಂದು ಸ್ವಲ್ಪ ಆಶ್ಚರ್ಯವಾಯಿತು.

ಮರುದಿನ ಕಲು(ಪ) ಆ ಹಾಲಿನವ ನನಗೆ ಹೇಳಿದ– "ಇದು ನೆಹರೂ ಬಾಲಮಂದಿರ... ಇಲ್ಲಿ ಅನಾಥ ಬಾಲಕರು ಇರ್ತಾರೆ. ೨೦–೨೨ ವರ್ಷಗಳ ಹಿಂದೆ ನೆಹರೂ ಇದನ್ನು ಕಟ್ಟಿಸಿದ್ದಾರೆ. ನನ್ನ ತಮ್ಮ ಅಲ್ಲಿಗೆ ಪ್ರತಿ ದಿನ ಬೆಳಿಗ್ಗೆ ಹಾಲು ಕೊಡೋದಕ್ಕೆ ಹೋಗ್ತಾನೆ!"

"ಸುಮಾರು ಎಷ್ಟು ಜನ ಮಕ್ಕಳಿದ್ದಾರೆ?"

"ಸುಮಾರು ನೂರು– ನೂರೈವತ್ತು. ಯಾರ–ಯಾರ ಮನೆಯವರು, ಅವರ ಕುಲ–ಗೋತ್ರಗಳು ಗೊತ್ತಿಲ್ಲ. ನಾಲ್ಕು ಮಂದಿ ಮಾಸ್ತರುಗಳೂ ಇದ್ದಾರೆ." ಎಂದ.

ಅಂದು ಸಂಜೆ ನಾನು ಮನೆಯಿಂದ ಸ್ವಲ್ಪ

ಬೇಗನೇ ಹೊರಟೆ. ಸುಮಾರು ೪-೫ ಗಂಟೆ ಇದ್ದಿರಬಹುದು. ಕಬ್ಬಿಣದ ಸರಳುಗಳಿಂದ ಇಣುಕಿ ನೋಡಿದೆ. ಒಳಗೆ ಅನೇಕ ಮರಗಳಿದ್ದವು. ಮಾವು, ಅರಳಿ, ಗುಲಾಬಿ ಗಿಡ ಮತ್ತೆ ಕೆಲವು ಕಾಡು ಪೊದೆಗಳು. ನಾಲ್ಕೂ ಕಡೆ ಆಳೆತ್ತರದ ಹುಲ್ಲು ಸಾದ ಹುಲ್ಲು, ಮಧ್ಯೆ ಕಟ್ಟಡ ನಿಂತಿತ್ತು. ದೊಡ್ಡದಾದರೂ ಹಳೆ ಪುರಾತನವಾಗಿತ್ತು. ಅಲ್ಲಲ್ಲಿ ಚಿಗುರೊಡೆದ ಪೊದೆಗಳು ಲೆಕ್ಕವಿಲ್ಲ ದಷ್ಟು ಬೆಳೆದಿದ್ದವು. ಈ ಅನಾಥ ಬಡಪಾಯಿ ಗಳ ಬಗೆಗೆ ಯಾರೂ ಹೆಚ್ಚು ಚಿಂತಿಸುವುದಿಲ್ಲ ವೆಂದು ನಾನು ಮನಸ್ಸಿನಲ್ಲಿಯೇ ಯೋಚಿಸಿದೆ.

ನಾನು ನಿಂತುಕೊಂಡಿದ್ದಾಗಲೇ ಗಂಟೆ ಹೊಡೆಯಿತು. ಮಧ್ಯದ ಬಾಗಿಲು ತೆರೆಯು ತ್ತಿದ್ದಂತೆಯೇ ಮಕ್ಕಳ ಮಹಾ ಪ್ರವಾಹ ನುಗ್ಗಿತು. ಕೆಲ ಚಿಕ್ಕ - ದೊಡ್ಡ ಮತ್ತೆ ಕೆಲ ಬತ್ತಲೆ - ಚಿಂದಿ ಬಟ್ಟೆಯ ಮಕ್ಕಳಿದ್ದರು. ಎಲ್ಲರೂ ಕೈಲಿ ಚಾಲು ಬ್ಯಾಟು, ಗಿಲ್ಲಿ-ದಾಂಡು ಹಿಡಿದು ಇಡೀ ದಿನದ ಬಂಧನದಿಂದ ಬಿಡುಗಡೆ ಹೊಂದಿ ಸ್ವಾತಂತ್ರ್ಯದ ಒಂದು ಘಳಿಗೆ ಯನ್ನಾದರೂ ಸುಖವಾಗಿ ಕಳೆಯಲೆಂಬಂತೆ ಓಡುತ್ತಿದ್ದರು. ಬಯಲಿನ ಗಂಭೀರ ನೀರವತೆ ಮಕ್ಕಳ ಕೋಲಾಹಲದಿಂದ ಪೊಳಗಿತು.

ಅಂದಿನಿಂದ ನಾನು ಪ್ರತಿ ನಿತ್ಯ ಅಲ್ಲಿಗೆ ಹೋಗಲಾರಂಭಿಸಿದೆ. ಅವರ ಆಟದ ಗಂಟೆ-ನನಗೂ ಆಟದ ಗಂಟೆಯಾಗಿ ಬಳಲಿದ ಮನಸ್ಸಿಗೆ ಸ್ವಲ್ಪ ವಿಶ್ರಾಂತಿ ಸಿಗುತ್ತಿತ್ತು. ಕೆಲವು ದಿನಗಳಲ್ಲಿ ಲ್ಲಿಯೇ ನಾನು ಮಕ್ಕಳನ್ನು ಪರಿಚಯಮಾಡಿ ಕೊಳ್ಳತೊಡಗಿದೆ. ಒಬ್ಬ ದಷ್ಟ - ಪುಷ್ಟ ಹುಡುಗ ಮಕ್ಕಳನ್ನು ದಬಾವಣೆಯಿಂದ ನೋಡಿ ಕೊಳ್ಳುತ್ತಿದ್ದ. ಆತನಿಗೆ 'ಗೂಂಡಾ' (ದಾದಾ) ಎಂದು ಹೆಸರಿಟ್ಟೆ. ಹಾಗು ಚಪ್ಪಟೆಯಾದವನಿಗೆ ಚಪ್ಪಟೆ ನಾಗ, ಗುಂಡಂತೆ ಹೊಟ್ಟೆಯಿದ್ದ 'ಬೊಜ್ಜ' ಹೀಗೆ ಎಷ್ಟೋ ಹುಡುಗರನ್ನು ನಾನು ಗುರುತಿಸುತ್ತದೆ. ಇವರ ಅಪ್ಪ- ಅಮ್ಮ ಯಾರು? ಎಲ್ಲಿಂದ ಬಂದರು? ಎಂದೇ ಆಗಾಗ ಯೋಚಿಸುತ್ತಿದ್ದೆ. ನನಗೆ ನನ್ನ ಬಾಲ್ಯ ನೆನಪಾಗು ತ್ತದೆ. ಚಿಕ್ಕ ಪುಟ್ಟ ಗೊಂಬೆಗಳು. ಆಟ-ಆಟಿಕೆಗಳು, ಹಣ್ಣು - ಮಿಠಾಯಿಗಳಲ್ಲದೆ ತಾಯಿ-ತಂದೆಗಳ ಪ್ರೀತಿಯಿಂದ ಕೂಡಿದ್ದ ಬಾಲ್ಯ ನನ್ನದು. 'ಇವರ ಕಣ್ಣೀರು ಯಾರು ಒರಸ್ತಾರೆ? ಇವರನ್ನು ರಾತ್ರಿ ಹೊತ್ತು ಯಾರು ತಟ್ಟಿ ಮಲಗಿಸ್ತಾರೆ? ಬೆಳಿಗ್ಗೆ ಮೈ - ಕೈ ತೊಳೆದು ಯಾರು ಸ್ನಾನ ಮಾಡಿಸ್ತಾರೆ? ತೊಡೆಯ ಮೇಲೆ ಕೂರಿಸಿಕೊಂಡು ತಿಂಡಿ ತಿನ್ನೋರು ಯಾರು?' ಹೀಗೆಲ್ಲಾ ಯೋಚಿಸಿ-ಯೋಚಿಸಿ ನನ್ನ ಮನಸ್ಸು ತುಂಬಿಬರುತ್ತಿತ್ತು.

ಹೀಗೆಯೇ ಒಂದೆರಡು ವಾರಗಳು ಕಳೆದವು. ಒಂದು ದಿನ ಬಾಗಿಲ ಹೊರಗೇ ನಿಂತ ನಾನು ನೋಡಿದಾಗ- ಒಬ್ಬ ಹುಡುಗ ಕಂಕುಳಲ್ಲಿ ಪುಸ್ತಕ ಸಿಕ್ಕಿಸಿಕೊಂಡು, ಊರುಗೋಲುಗಳ ಸಹಾಯ ದಿಂದ ನಿಧಾನವಾಗಿ ನಡೆಯುತ್ತ ಬಾಗಿಲ ಬಳಿ ಇದ್ದ ಅರಳೀ ಮರದ ಕೆಳಗೆ ಕುಳಿತ. ಸ್ವಚ್ಛ ಮುಖ, ಮೈಮೇಲೆ ಬನಿಯನ್ ಮತ್ತು ನಿಕ್ಕರ್. ನೋಡಿದರೆ ೧೦-೧೨ ವರ್ಷವಿದ್ದಿರಬಹುದು. ಪುಸ್ತಕ ಬಿಚ್ಚಿ ಓದತೊಡಗಿದ. ಆದರೆ ಓದುವು ದರಲ್ಲಿ ಈತನಿಗೆ ಮನಸ್ಸಿರಲಿಲ್ಲ. ಕುಣಿದು, ಕುಪ್ಪಳಿಸುತ್ತಿದ್ದ ಮಕ್ಕಳತ್ತ ಅವನ ದೃಷ್ಟಿ ಹರಿ ಯುತ್ತಿತ್ತು. ಮತ್ತೆ ತನ್ನ ತೆಳು, ಅಸ್ವಸ್ಥ ಕಾಲು ಗಳತ್ತ ನೋಡುತ್ತಿದ್ದ. ಆಗಾಗ್ಗೆ ಆತನ ಕಣ್ಣು ಗಳಲ್ಲಿ ನೀರು ಹರಿಯುತ್ತಿತ್ತು. ಮರು ಕ್ಷಣದಲ್ಲಿ ಆತ ಪುಸ್ತಕ ಒಗೆದವನೇ ಮಲಗಿ ಆಕಾಶದತ್ತ ನೋಡತೊಡಗಿದ. ಕೈ ನೀಡಿ ಅರಳೀ ಮರದ ಒಂದು ಮೃದು ತಳಿರೆಲೆಯನ್ನು ಕಿತ್ತು, ಸುರಳಿ ಸುತ್ತಿ ತನ್ನ ಬಾಯಿಗಿಟ್ಟು ಮಧುರ ನಾದವನ್ನು ಹೊರಡಿಸಿದ. ನನ್ನ ಹೃದಯದ ಪ್ರತಿ ತಂತಿಯನ್ನೂ ರೆಝೇಂಗುಡಿಸುವ ಶೋಕಯುಕ್ತ ಮಧುರ ನಾದವದು.

ಒಂದಿಬ್ಬರು ಘಟಿಂಗ ಹುಡುಗರು ಬಂದವರೇ ಜೋರು ಮಾಡಿ, "ನಡೆಯೋಲೇ ಕುಂಟಾ!" ಅಂತ ಒಂದೆರಡು ಹೊಡೆತಾನೂ ಕೊಟ್ಟರು. "ನಮ್ಮ ಮರದ ಕೆಳಗೆ ಕೂತ್ಕೊಳಕ್ಕೆ ಬಂದ್ಬಿಟ್ಟ. ನಡೀ - ಇನ್ನೇನಾದ್ರೂ ಘೀಂ-ಘೀಂ ಅಂತ ಅನ್ನಿಸು," ಅಂತ ದಬಾಯಿಸಿದರು.

ಆ ಹುಡುಗ ಮೌನವಾಗಿ ಪುಸ್ತಕ ಎತ್ತಿ

ಕೊಂಡು ಹೊರಟ. ನನಗೆ ತಡೆಯೋದಿಕ್ಕೆ ಆಗಲಿಲ್ಲ. ಅವನು ಬಾಗಿಲ ಎದುರಿನಿಂದ ಹೋಗುವಾಗ ನಾನು– "ಕೇಳಪ್ಪಾ ಮಗು" ಅಂತ ಕೂಗಿದೆ.

ಹೆಜ್ಜೆ ನಿಂತವು. ಅಸಹಾಯಕ, ಉಪೇಕ್ಷೆಯ ಹಾಗೂ ತಿರಸ್ಕಾರದಿಂದ ತೊಯ್ದು ಹೋದ ಅವನ ಕಣ್ಣುಗಳು ನಿಧಾನವಾಗಿ ಮೇಲಿದ್ದುವು.

"ಇಲ್ಲಿ ಬಾಪ್ಪ, ನಿನ್ನ ಹೆಸರೇನು ?" ಅಂತ ಕೇಳಿದೆ.

ಆತ ಹಿಂಜರಿಯುತ್ತಾ ಬಾಗಿಲವರೆಗೆ ಬಂದು "ದೀಪಕ್" ಅಂದ.

"ಇಲ್ಲೆ ಇದೀಯೇನು?" ನನ್ನದು ಒಂದು ದಡ್ಡತನದ ಪ್ರಶ್ನೆಯಾಗಿತ್ತು.

ಆತ ಕಾಲು ಬೆರಳಿನಿಂದ ಮಣ್ಣು ಕೆದಕುತ್ತಾ "ಹೂಂ!" ಎಂದ. ಮತ್ತೇನು ಹೇಳಲಿ? ಬಹಳಷ್ಟು ತಲೆಯೋಡಿಸಿದ್ರೂ ಏನೂ ಹೇಳಲಾಗಲಿಲ್ಲ. ಆಗಲೇ ಟಿನ್– ಟಿನಾಟಿನ್– ಟಿನ್, ಆಟದ ಗಂಟೆ ಮುಗಿದಿತ್ತು. ಮರಗಳಿಂದ, ಉಯ್ಯಾಲೆಯಿಂದ ಮಕ್ಕಳು ನೆಗೆದರು. ಓಡುತ್ತಾ ಆ ಕಟ್ಟಡದ ಒಳಗೆ ನುಗ್ಗಿದರು. ಆತ ನನ್ನ ಕಡೆಗೊಮ್ಮೆ ನೋಡಿ, ಕುಂಟುತ್ತಾ ಹೊರಟು ಹೋದ.

ಅಂದು ಬಹಳ ಹೊತ್ತಿನವರೆಗೆ ನಾನು ಬಾಗಿಲಲ್ಲೆ ನಿಂತಿದ್ದೆ. ಮನೆಗೆ ಹೋಗಲು ಮನಸ್ಸಾಗಲಿಲ್ಲ. ಬಡಪಾಯಿ ದೀಪಕನನ್ನು ಉಳಿದ ಮಕ್ಕಳ ಕ್ರೌರ್ಯ ಬಿಡಲು ನನಗೆ ಮನಸ್ಸು ಒಪ್ಪಲಿಲ್ಲ.

ಮರುದಿನ ನಾನು ಹಲ್ವಾ ಮಾಡಿ ಒಂದು ಡಬ್ಬಿಯಲ್ಲಿ ತುಂಬಿಕೊಂಡು ಹೊರಟೆ. ವಿರಾಮ ಸಿಗುತ್ತಲೇ ಆತ ನೇರವಾಗಿ ಬಾಗಿಲ ಬಳಿ ಬಂದವನೇ ಗಂಭೀರವಾಗಿ ನಿಂತುಕೊಂಡ.

ನಾನು ಡಬ್ಬಿ ಮುಂದೆ ಮಾಡಿ – "ಹಲ್ವಾ ತಿಂತೀಯಾ?" ಎಂದೆ. ಅವನ ಕಣ್ಣುಗಳು ಮಿಂಚಿದವಾದರೂ ಮತ್ತೆ ಇದ್ದಕ್ಕಿದ್ದಂತೆ ಮಂಕಾದವು; ನಾನು ಡಬ್ಬಿ ಮುಂದೆ ಮಾಡಿ ಮತ್ತೆ ಹಿಂದಕ್ಕೆ ಎಳೆದುಕೊಳ್ಳುತ್ತೇನೆಂಬ ಭಾವನೆಯಿಂದಲಾಗಿರಬಹುದು.

"ಇಲ್ಲಿ ತಿನ್ನೋದಿಕ್ಕೆ ಏನು ಕೊಡ್ತಾರೆ ?"

"ಬೆಳಿಗ್ಗೆ ಟೀ, ಮತ್ತೆ ಒಂದು ರೊಟ್ಟಿ. ಮಧ್ಯಾಹ್ನ ಅನ್ನ ಸಾರು, ರಾತ್ರಿಗೆ ಎರಡು ರೊಟ್ಟಿ, ಕುಂಬಳಕಾಯಿ ಸಾರು ಅಷ್ಟೆ. ಹಲ್ವಾ ಸಿಗೋದಿಲ್ಲ!"

"ತಗೋ ತಿನ್ನು, ನಿನಗೋಸ್ಕರಾನೇ" ಎಂದು ನಾನು ಒತ್ತಾಯ ಮಾಡಿದಾಗ ಆತ ಕೈ ನೀಡಿ ತೆಗೆದುಕೊಂಡ.

"ಚೆನ್ನಾಗಿದೆಯಾ ?"

"ಹೂಂ...!"

"ನೀನು ಎಲೆಯಿಂದ ಕೊಳಲು ಮಾಡಿ ಮಧುರವಾಗಿ ಧ್ವನಿ ಹೊರಡಿಸೋದನ್ನ ಎಲ್ಲಿ ಕಲಿತೆ?"

"ನನಗೊಬ್ಬ ಸ್ನೇಹಿತ ಇದ್ದ, ಅವನು ಕಲಿಸಿದ."

"ಈಗ ಎಲ್ಲಿದ್ದಾನೆ?"

"ಹೊರಟು ಹೋದ"– ಅವನ ಗಂಟಲು ಕಟ್ಟಿತು. "ಯಾರೋ ಬಂದು, ತಮ್ಮ ಮಗು ಮಾಡಿಕೊಳ್ಳೋದಿಕ್ಕೆ ಅವನ್ನ ಮನೇಗೆ ಕರ್ಕೊಂಡು ಹೋದ್ರು."



"ಸಾಂಬಾರಿನಲ್ಲಿರೋ ವಡೆ ಎಲ್ಲಿದೆ ಅಂತ ಹುಡುಕೋದಕ್ಕೆ ಹೊರಟಿದ್ದೇನೆ... ಅಪ್ಪ"

"ಇಲ್ಲಿಂದ ಬಹಳ ಮಕ್ಕಳು 'ಹೋಗ್ತಾ ಇರ್ತಾರೇನು?"

"ಹೆಚ್ಚಿಗೆ ಏನೂ ಇಲ್ಲ. ವರ್ಷದಲ್ಲಿ ಒಂದಷ್ಟು ಜನ ಬರ್ತಾರೆ – ಹೋಗ್ತಾರೆ ಬರೋವಾಗ ಹೊಸಾ ಬಟ್ಟೆ ಹಾಕಿ ಕಳಿಸ್ತಾರೆ."

"ಮತ್ತೆ... ಮತ್ತೆ ನೀನು..." ನನ್ನ ಪ್ರಶ್ನೆ ಪೂರ್ಣಗೊಂಡಿರಲೇ ಇಲ್ಲ.

"ನನ್ನನ್ನು ಯಾರು ಕರ್ಕೊಂಡ್‌ಹೋಗ್ತಾರೆ? ನಾನು ಕುಂಟ" ಆತ ಒಂದು ನಿಟ್ಟುಸಿರು ಬಿಟ್ಟ ವನೇ ದೊಣ್ಣೆ ಹಿಡಿದು ಹೊರಟ. ನಾನು ನೋಡುತ್ತಿದ್ದೆ.

ಮರುದಿನ ನಾನು ಪಂಚತಂತ್ರದ ಕಥೆಗಳನ್ನು ತೆಗೆದುಕೊಂಡು ಹೋದೆ. ಈ ಬಾರಿ ದೀಪಕ ಬರುತ್ತಲೆ ಕೈ ಮುಂದೆ ಮಾಡಿದ.

"ಏನು ಅದು?" ಅಂದೆ.

"ಇದು ಅರಳೀ ಎಲೆಯ ಕೊಳಲು, ನಿಮಗಾಗಿ" ಅಂದ.

ನಾನು ಕೊಳಲು ಬಾಯಿಗಿಟ್ಟು ಜೋರಾಗಿ ಊದತೊಡಗಿದೆ. ಕೋಮಲವಾದ ಎಲೆ ಒಡೆದು ಹೋಯಿತು. ನನಗೂ ದೀಪಕನಿಗೂ ನಗು ಬಂದಿತು. ಇಬ್ಬರೂ ಬಹಳ ಹೊತ್ತಿನವರೆಗೆ ನಗುತ್ತಿದ್ದೆವು.

ಗೋಡೆಗಳು ಒಡೆಯುವುವೋ ಎನ್ನುವಂತಿತ್ತು, ಬಂಧನ ಕಳಚುತ್ತಿತ್ತು.

"ನಿನಗೆ ಕಥೆಗಳು ಇಷ್ಟವಾ? ಹೇಳು?"

"ಹೂಂ, ಯಾಕಿಲ್ಲ?"– ಅವನ ಧ್ವನಿಯಿಂದ ಸಂಕೋಚವೂ ಹೋಗುತ್ತಲಿತ್ತು.

"ತಗೋ, ಇದು ಪಂಚತಂತ್ರದ ಕಥೆಗಳು ಖುಷಿಯಾಗುತ್ತೆ," ಎಂದೆ. ಆತ ಪುಸ್ತಕ ತೆಗೆದು ಕೊಂಡವನೇ ತಿರುಗಿಸಿ ನೋಡಿದ. "ರಾತ್ರಿ ಊಟಾ ಆದ ಮೇಲೆ ಓತ್ತೀನಿ," ಅಂತ ಕಂಕುಳಿಗೆ ಸಿಕ್ಕಿಸಿದ.

"ಮತ್ತೆ ನಿನಗೆ ಇನ್ನೇನು ಇಷ್ಟ?"

"ನನಗೇ, ಆಟ ನೋಡೋದೂಂದ್ರೆ ಇಷ್ಟ. ಫುಟ್‌ಬಾಲ್, ಗಿಲ್ಲಿ–ದಾಂಡು. ಎಲ್ಲಾನೂ. ನನಗೆ ಆಟ ಆಡೋಕಾಗುಲ್ಲ. ಹುಡುಗರು ಯಾವಾಗ ನೋಡೋದಿಕ್ಕೆ ಬಿಡ್ತಾರೆ, ಆಗ ನೋಡ್ತೀನಿ."

"ಮತ್ತಿನ್ನೇನು ಇಷ್ಟ?"

"ಕೊಳಲು ಬಾರಿಸುವುದು."

"ಮತ್ತೆ?"

"ನನಗೆ ಮರಗಳನ್ನು ಕಂಡರೆ ಇಷ್ಟ. ಬೇಸಿಗೆಯಲ್ಲಿ ಬಹಳಾ ಇಷ್ಟ. ಅಲ್ನೋಡಿ" ಎಂದು ಆತ ಎಳೆಗೈಗಳಿಂದ ತೋರಿಸಿದ. "ಅದು ಗುಲಾಬಿ ಗಿಡ–ದೊಡ್ಡ ದೊಡ್ಡ ಕೆಂಪು ಹೂವು ಇರೋದು. ಮತ್ತೆ ಅದು ಮಾವಿನ ಮರ. ಮೂರು ತಿಂಗಳಲ್ಲಿ ಚಿಗುರೋದಿಕ್ಕೆ ಶುರುವಾಗುತ್ತೆ. ಮತ್ತೆ ರಸಪೂರಿ ಹಣ್ಣು ಬಿಡುತ್ತೆ. ಕಲ್ಲು ಹೊಡೆದು ಕೆಡವಿ ತಿನ್ತೇನೆ!"

ಇಬ್ಬರು ಮೂವರು ಮಕ್ಕಳು ಹೊರಟವರೆ ನನ್ನನ್ನು ಆಶ್ಚರ್ಯಚಕಿತರಾಗಿ ನೋಡತೊಡಗಿದರು.

"ಮುಂದಿನ ಗೋಡೆ ಒಡೆದು ಹೋಗಿದೆ, ಒಳಗೆ ಬನ್ನಿ," ದೀಪಕ ಹೇಳಿದ.

"ಇಲ್ಲ, ಇಲ್ಲ, ಮತ್ತೆ ಯಾವಾಗ್ಲಾದ್ರೂ ಬರ್ತೇನೆ"–ಅಂತ ನಾನು ಹೇಳಿದೆ.

ಆನಂತರ ನಾನು ಯಾವಾಗಲು ದೀಪಕನಿಗಾಗಿ ಏನಾದ್ರೂ ಕೊಂಡು ಹೋಗುತ್ತಿದ್ದೆ. ಒಮ್ಮೆ ಒಂದು ಪೆನ್, ಮತ್ತೊಮ್ಮೆ ಏನಾದ್ರೂ ತಿಂಡಿ. ಹೀಗೇ... ನನ್ನಿಂದಾಗಿ ಆತ ಬಹಳ ಬದಲಾಯಿಸಿದ್ದ.

ಒಂದು ದಿನ ನಾನು ಹಾಲಿನವನನ್ನು ಮಾತಿನ ಮಧ್ಯೆ ಕೇಳಿದೆ– "ಈ ಬಾಲಮಂದಿರದ ಸೂಪರಿಂಟೆಂಡೆಂಟ್ ಯಾರಪ್ಪಾ?"

"ಯಾರಮ್ಮಾ?" ಆತ ಕೇಳಿದ.

"ಸೂಪರಿಂಟೆಂಡೆಂಟ್ ಅಂದರೆ ಮ್ಯಾನೇಜರ್ ಮಕ್ಕಳ ಯೋಗಕ್ಷೇಮ ನೋಡಿಕೊಳ್ಳೋರು."

"ಅಯ್ಯೋ, ಅಯಪ್ಪಾ, ಸರ್ಕಾರದಿಂದ ಸಿಗೋ ಹಣಾನ್ನೆಲ್ಲ ಹೆಂಡ ಕುಡಿಯೋದಿಕ್ಕೆ ಖರ್ಚು ಮಾಡ್ತಾರೆ."

"ಓಹ್ ಹಾಗಿದ್ದ ಮೇಲೆ ಆ ಮಕ್ಕಳಿಗೆ ಸರಿಯಾಗಿ ಊಟ—ತಿಂಡಿ– ಬಟ್ಟೆ ಸಿಗೋದಿಲ್ವ?"

"ನಾನು ಹೇಳಲಿಲ್ಲವೇನಮ್ಮ. ನನ್ನ ತಮ್ಮ. ಬರಾಬರಿ ಒಳ್ಳೇ ಹಾರ್ಲೇ ಕೊಡ್ತಾನೆ: ಅದರೆ

ಈತ ಅರ್ಧ ಕುಡಿದೇಬಿಡ್ತಾನೆ. ಇನ್ನರ್ಧಕ್ಕೆ ನೀರು ಬೆರಸ್ತಾನೆ."

"ಅವನೆಲ್ಲಿರ್ತಾನೆ?"

"ಅಲ್ಲೇ ಇರ್ತಾನೆ. ಅದೋ ಆ ಹೆಬ್ಬಾಗಿಲಿನಿಂದ ಮುಂದೆ ಒಂದು ಚಿಕ್ಕ ಬಾಗಿಲಿದೆ. ಅದರೊಳಗೆ ಹೋದರೆ ಅವನ ಮನೆ, ಆದ್ರೆ ನಿಮಗ್ಯಾಕಮ್ಮ ಅದೆಲ್ಲ?"

"ಇನ್ನೇನೂ ಇಲ್ಲ, ಸುಮ್ನೆ ಕೇಳಿದೆ ಅಷ್ಟೆ." ನಾನು ಆಗು–ಹೋಗೋ ಮಾತು ಆಡಿದೆ.

ಅಂದಿನ ಸಂಜೆ ನಾನು ಸೂಪರಿಂಟೆಂಡೆಂಟರ ಮನೆಗೆ ಹೋದೆ. ಅರ್ಧ ವಯಸ್ಸಿನ ಮಹಿಳೆಯೊಬ್ಬಳು ಬಾಗಿಲು ತೆರೆದಳು. ಸೂಪರಿಂಟೆಂಡೆಂಟ್ ಒಬ್ಬ ಗುಗ್ಗು, ಅಶಿಕ್ಷಿತ ಮನುಷ್ಯನಂತೆ ಕಾಣುತ್ತಿದ್ದ. ನನ್ನ ಪ್ರಪಂಚದಲ್ಲಿ ನನ್ನವರಾರಿಲ್ಲವೆಂದೂ, ನಾನು ದೀಪಕನನ್ನು ಕರೆದುಕೊಂಡು ಹೋಗುವುದಾಗಿಯೂ ನನ್ನೆಲ್ಲ ವಿಚಾರಗಳನ್ನು ಅವನಿಗೆ ಹೇಳಿದೆ.

ಆತನಾದರೋ ತೀರ ಅಸಂತುಷ್ಟನಾಗಿ–"ಅವನು ಕುಂಟ, ಮತ್ಯಾರಾದ್ರೂ ಹುಡುಗನ್ನ ಕರ್ಕೊಂಡ್ ಹೋಗಿ. ಕಡೇ ಪಕ್ಷ, ತಾನು ಅಂಗವಿಕಲ ಅನ್ನೋದಾದ್ರೂ ಗೊತ್ತಾಗದವನನ್ನ."

ನನಗೆ ದೀಪಕನನ್ನು ಕಂಡರೆ ಆಸೆಯಾದ್ದರಿಂದ ಮತ್ಯಾವುದೋ ಹುಡುಗ ಏಕೆ ಎನಿಸುತ್ತಿತ್ತು.

"ನಿಮ್ಮಿಷ್ಟ" ಎಂದವನೇ ಆತ ಮತ್ತೆ ಆರಂಭಿಸಿದ. "ನಾನು ಈತನ ಕಾಗದ ಪತ್ರಗಳನ್ನು ರೆಡಿಮಾಡ್ತೇನೆ. ತಾವು ಕೆಲವು ದಿನ ಬಿಟ್ಟು ಬಂದು ಸಹಿ ಹಾಕಿ ಹೋಗಿ. ಮತ್ತೆ ಬೋರ್ಡಿನಿಂದ ಅನುಮತಿ ಪಡೀಬೇಕಾಗುತ್ತೆ. ಆಮೇಲೆ ತಾವು ಅವನನ್ನು ಕರ್ಕೊಂಡು ಹೋಗೋದಿಕ್ಕೆ ಸಾಧ್ಯ."

ನಾನು ಆ ಕೂಡಲೇ ದೀಪಕನನ್ನು ಭೇಟಿಯಾಗಲು ಹೋದೆ. "ನಿಮ್ಮ ಸೂಪರಿಂಟೆಂಡೆಂಟರು ಅನುಮತಿ ಕೊಟ್ಟಿದ್ದಾರೆ. ನಾನು ಆದಷ್ಟು ಬೇಗ ನಿನ್ನನ್ನ ನಮ್ಮ ಮನೆಗೆ ಕರೆದುಕೊಂಡು ಹೊಗ್ತೇನೆ," ಎಂದು ಅವನಿಗೆ ಹೇಳಿದೆ. ಆತ ಸಂತೋಷದಿಂದ ಕುಣಿದಾಡಿದ. ಆತನ ಶರೀರದಲ್ಲಿ ಉಲ್ಲಾಸದ ಅಲೆ ಹರಿದಾಡಿತು. ಕುಂಟುತ್ತಲೇ ಓಡೋಡಿ ಮುರಿದು ಬಿದ್ದ ಗೋಡೆ ದಾಟಿ ಹೊರ ಬಂದ. ನಾನು ಅವನನ್ನು ಹೆಗಲಿಗೆ ಅನಿಸಿಕೊಂಡೆ.

ಆದರೆ ಕಾಲ ಬದಲಾಗಲು ತಡವಾಗಲಿಲ್ಲ. ಒಂದು ದಿನ ನನಗೊಂದು ಸುದ್ದಿ ಬಂದಿತು–ಭಾರತ ಪಾಕಿಸ್ತಾನಗಳ ಮಧ್ಯೆ ಯುದ್ಧ ಪ್ರಾರಂಭವಾಗಿದೆಯೆಂದೂ ಈ ಕೂಡಲೇ ಸ್ವಸ್ಥಳಕ್ಕೆ ಹಿಂದಿರುಗಬೇಕೆಂದು ಅದು ತಿಳಿಸಿತು. ಯಾವಾಗ ಬೇಕಾದರೂ ಮುತ್ತಿಗೆ ಹಾಕುವ ಸಂಭವವಿದೆಯೆಂದು ನಾನು ನನ್ನ ಗಂಟು ಮೂಟೆ ಕಟ್ಟಿ ಅಮೃತಸರಕ್ಕೆ ಹಿಂದಿರುಗಿ ಬಂದೆ. ಹೊರಡುವಾಗಲೇ ಪುಸ್ತಕ ಪೆನ್ನು, ಬಟ್ಟೆಯಲ್ಲದೆ, ಮತ್ತೂ ಕೊಡಬಹುದಾದ ಒಂದು ರಾಶಿ ಪದಾರ್ಥಗಳನ್ನು ದೀಪಕನಿಗೆ ಕೊಟ್ಟೆ. ನಾನು ಅಮೃತಸರ ಸೇರುತ್ತಲೇ ಅವನನ್ನು ನನ್ನ ಬಳಿ ಕರೆಸಿಕೊಳ್ಳಲು ವ್ಯವಸ್ಥೆ ಮಾಡುವುದಾಗಿ ಮಾತು ಕೊಟ್ಟೆ. ಅವನು ಅಳಲೂ ಇಲ್ಲ, ಜತೆಯಲ್ಲಿ ಹೊರಡಬೇಕೆಂದೂ ಹಟವನ್ನೂ ಮಾಡಲಿಲ್ಲ. ಆತನ ಕಣ್ಣುಗಳು ಪೂರ್ಣ ವಿಶ್ವಾಸದಿಂದ ನನ್ನನ್ನೇ ನೋಡುತ್ತಿದ್ದವಷ್ಟೆ.

ಆದರೆ, ಅಯ್ಯೋ! ವಿಶ್ವಾಸದ್ರೋಹವೇ! ನಗರ ಸೇರುತ್ತಲೇ ನಾನು ಶ್ರೀಮಂತ ಜೀವನದ ಮೋಡಿಯಲ್ಲಿ ಬಿದ್ದೆ. ಬೊಂಬಾಯಿಯ ಒಂದು ದೊಡ್ಡ ಪ್ರಕಾಶನ ಸಂಸ್ಥೆ ನನಗೆ ಒಂದು ಮಹತ್ವದ ಕೆಲಸ ಕೊಟ್ಟಿತು. ನನ್ನ ಮಿತ್ರರೆಲ್ಲರೂ ಇಂತಹ ಅವಕಾಶ ಇನ್ನೊಮ್ಮೆ ಸಿಗಲಾರದೆಂದೂ ಈ ಕೂಡಲೇ ಬೊಂಬಾಯಿಗೆ ಹೋಗಬೇಕೆಂದೂ ಹೇಳಿದರು. ನಾನು ಹಳ್ಳಿಗೆ ಹೋಗಿ ಅನಾಥಾಲಯದ ಕಾಗದ ಪತ್ರಗಳ ಮೇಲೆ ಸಹಿ ಹಾಕಿ ದೀಪಕನನ್ನು ಕರೆತರಬೇಕೆಂದು ಅವರಿಗೆ ಹೇಳಿದೆ. ಅದೆಲ್ಲವೂ ಆಮೇಲೆ ಆಗುತ್ತದೆ. ರಜೆ ತೆಗೆದುಕೊಂಡು ಬಂದು ಬೇಕಾದ್ರೆ ಹಳ್ಳಿಗೆ ಹೋಗಬಹುದು. ಆದರೆ ಈ ಅವಕಾಶ ಮಾತ್ರ ಕಳ್ಕೋಬೇಡಾಂತ ಎಲ್ಲರೂ ಹೇಳಿದರು.

ಬೊಂಬಾಯಿಗೆ ಹೋಗುತ್ತಲೇ ಇದ್ದಕ್ಕಿದ್ದಂತೆ ಪರಿವರ್ತನೆಯಾಯಿತು. ನನ್ನ ಕಾದಂಬರಿಯೊಂದು

ಪ್ರಕಟವಾಯಿತು. ಅದಲ್ಲದೆ ಅದು ರಾತ್ರೋರಾತ್ರಿ ಸಫಲತೆಯ ಶಿಖರ ಮುಟ್ಟಿತು. ನನಗೆ ಒಂದಲ್ಲ ಅನೇಕ ಪುರಸ್ಕಾರ ಪಾರಿತೋಷಕಗಳು ಸಿಕ್ಕಿದ್ದವು. ನನಗೆ ಮತ್ತೆ ಪ್ರತಿನಿತ್ಯ ಒಂದಿಲ್ಲೊಂದು ಸಭೆ ಸಮಾರಂಭ ಪಾರ್ಟಿ. ಒಂದು ಕ್ಷಣವೂ ವಿರಾಮವಿರಲಿಲ್ಲ. ಇಂಥ ಸ್ಥಿತಿಯಲ್ಲಿ ದೀಪಕನ ನೆನಪೂ ಮಂಕಾಯಿತು. ಆ ಪ್ರಾಂತ್ಯ ಸುರಕ್ಷಿತವಲ್ಲ ಯಾವಾಗ ಏನಾಗುತ್ತೊ ಅಂತ ಆಗಾಗ್ಗೆ ಮನಸ್ಸಿಗೆ ಅನಿಸುತ್ತಿತ್ತು. ಆದರೆ ಮರುಕ್ಷಣದಲ್ಲೇ ಬರುತ್ತಿದ್ದ ಯೋಚನೆ – ಆ ಮಕ್ಕಳ ಯೋಗಕ್ಷೇಮದ ಜವಾಬ್ದಾರಿ ಸ್ವಲ್ಪವೂ ನನ್ನದಲ್ಲವೆಂಬುದು.

ಒಂದು ರಾತ್ರಿ ನಾನು ನನ್ನ ಸಲ್ವಾರ್‌ಯ ಹೋಟೆಲ್ ತಾಜಮಹಲಿನಲ್ಲಿದ್ದ ಪಾರ್ಟಿಯೊಂದರಿಂದ ಬಹಳ ತಡವಾಗಿ ಬಂದೆ. ಫ್ಲಾಟಿಗೆ ಬಂದು ನೋಡುತ್ತಲೇ ಒಂದು ಅಪರಿಚಿತ ಕೈಬರಹದ ಪತ್ರ ಬಂದು ಬಿದ್ದಿತ್ತು. ನೆಹರೂ ಬಾಲಮಂದಿರದ ಮೇಲೆ ಬಾಂಬು ಬಿದ್ದಿದೆಯೆಂದೂ ಇಡೀ ಕಟ್ಟಡವೆಲ್ಲಾ ವಿಧ್ವಂಸಗೊಂಡಿದೆಯೆಂದೂ ಒಂದು ಮಗುವೂ ಉಳಿದಿಲ್ಲವೆಂದೂ ಅದರಲ್ಲಿ ಬರೆದಿತ್ತು. ಒಂದು ಕ್ಷಣ ಹೃದಯ ನಡುಗಿತು. ಪಕ್ಕೆ ಕಂಪಿಸಿತು. ನಾನು "ದೀಪಕ್" ...ಎಂದು ಚೀರಿದೆ. ಆದರೆ ಕೂಡಲೇ ಸುಧಾರಿಸಿಕೊಂಡೆ – ನನಗೂ ಆ ಮಕ್ಕಳಿಗೂ ಏನು ಸಂಬಂಧ? ನಾನು ಅವರ ಚಿಂತೆಯನ್ನೇಕೆ ಮಾಡಬೇಕು?

ಆದರೆ ಆಗಾಗ್ಗೆ ರಾತ್ರಿ ಮೌನದಲ್ಲಿ ಕೆಲವು ಅಸ್ಪಷ್ಟ ಶಬ್ದಗಳು ಕೇಳಿ ಬರುತ್ತವೆ. ಯಾರೋ ಮೆಲ್ಲ ಮೆಲ್ಲಗೆ ಊರುಗೋಲುಗಳ ಸಹಾಯದಿಂದ ತೆವಳುತ್ತಾ ನನ್ನ ಬಳಿ ಬಂದು ನಿಲ್ಲುವಂತಾಗುತ್ತದೆ. ಬಂದವನೇ ಅರಳೀ ಎಲೆಯ ಸುರುಳಿಯನ್ನು ಬಾಯಲ್ಲಿಟ್ಟು ಕರುಣಾಮಯವಾದ ಮರ್ಮಭೇದಕವಾದ ಧ್ವನಿಗೈಯುತ್ತಾನೆ. ಕಣ್ಣೀರು ಸುರಿಯುವ ಅವನ ದೊಡ್ಡ ದೊಡ್ಡ ಆಳವಾದ ಕಣ್ಣುಗಳು ನನ್ನ ಮೇಲೇ ನೆಟ್ಟು ಮೂಕ ಪ್ರಶ್ನೆಯೊಂದನ್ನು ಹಾಕುತ್ತವೆ. ✡



## ಪ್ರಾಣಿ ಪ್ರೀತಿ

ಆರನೆಯ ಲೂಯಿಯ ಮಡದಿ ಮೇರಿ ಅಂಟಾನಿಟಿಯ ಬಳಿ ಜಪಾನ್ ದೇಶದ ಸ್ಪಾನಿಯಲ್ ಜಾತಿಯ 'ಥಿಸ್ಬಿ' ಎಂಬ ಒಂದು ನಾಯಿ ಇತ್ತು. ಸದಾ ಕಾಲವೂ ಅದು ಅಂಟಾನಿಟಿಯಳ ಹಿಂದೆಯೇ ಓಡಾಡಿಕೊಂಡಿತ್ತು.

ಫ್ರಾನ್ಸಿನಲ್ಲಿ ಕ್ರಾಂತಿ ನಡೆದು ಆರನೆಯ ಲೂಯಿಯನ್ನು ಗಲ್ಲಿಗೇರಿಸಿದರು. ಬಳಿಕ ಅಂಟಾನಿಟಿಯನ್ನು ಹಿಡಿಯಲು ಬಂದರು. ತನ್ನ ಯಜಮಾನಿಯ ಸುತ್ತ ಅಧಿಕಾರಿಗಳು ಸುತ್ತುವರಿದಿರುವುದನ್ನು ಕಂಡು ಥಿಸ್ಬಿಗೆ ಯಾವುದೋ ಅನಿಷ್ಟದ ಸೂಚನೆ ಕಂಡಿತು. ಅಲ್ಲಿಂದ ಅದು ಅಂಟಾನಿಟಿಯನ್ನು ಎಲ್ಲೆಲ್ಲಿಯೂ ಹಿಂಬಾಲಿಸಿತು. ರಾಣಿಯನ್ನು ಸಾರೋಟಿನಲ್ಲಿ ಕೂರಿಸಿಕೊಂಡು ವಧಾಸ್ಥಾನಕ್ಕೆ ಕರೆದೊಯ್ದರು. ಥಿಸ್ಬಿ ಅಲ್ಲಿಗೂ ಓಡೋಡಿ ಬಂದಿತು.

ತನ್ನ ಯಜಮಾನಿಯನ್ನು ಗಲ್ಲಿಗೇರಿಸಿದುದನ್ನು ಕಂಡ ಥಿಸ್ಬಿ ತನ್ನ ಯಾತನೆಯನ್ನೆಲ್ಲಾ ಊಳಿಡುತ್ತಾ ತೋಡಿಕೊಂಡಿತು. ಅದರ ಸಂಕಟವನ್ನು ಯಾರಿಂದಲೂ ಕೇಳಲು ಸಾಧ್ಯವಾಗಲಿಲ್ಲ. ಕೊನೆಗೆ ಥಿಸ್ಬಿ ವೆಸೇಲ್ಸ್ ಅರಮನೆಯ ಮಾಳಿಗೆಯಿಂದ ಸೀನ್ ನದಿಗೆ ಹಾರಿ ಪ್ರಾಣ ಬಿಟ್ಟಿತು.

(ಸಂಗ್ರಹ) ಸಿ. ಎಸ್. ಎ.


ಮಹಾಭಾರತದ
ಭೀಮ
ಬಿ. ಎಸ್. ಗೋಪಾಲಕೃಷ್ಣ

# ಮಹಾಭಾರತದ ಭೀಮ

ಮಹಾಭಾರತದ ಭೀಮನನ್ನು ಮೆಚ್ಚುವವರು ಇದ್ದಾರಾದರೂ ಅವನಿಗೆ ಹುಂಬತನವನ್ನು ಆರೋಪಿಸಿ ಅವನ ಔನ್ನತ್ಯವನ್ನು ಕಡೆಗಣಿಸಿರುವವರೇ ಹೆಚ್ಚು. ಭೀಮನ ವ್ಯಕ್ತಿತ್ವದಲ್ಲಿಯ ಉಚ್ಚ ಗುಣಗಳನ್ನು ಗುರುತಿಸಿ ಅವನ ಹಿರಿಮೆಯನ್ನೂ ಅದರ ಅಪೂರ್ವತೆಯನ್ನೂ ಎತ್ತಿ ತೋರುತ್ತದೆ ಈ ಲೇಖನ. ಇದೇ ಲೇಖಕರ 'ಮಹಾಭಾರತದ ಭೀಮ' ಎಂಬ ಬೃಹದ್ಗ್ರಂಥ ಕನ್ನಡ ಸಾಹಿತ್ಯ ಪರಿಷತ್ತಿನ 'ಬೆಳ್ಳಿ ಬಿಟ್ಟ ಬಳ್ಳಿ'ಯ ೧೫ನೆಯ ಕುಸುಮವಾಗಿ ಈ ಹಿಂದಿನ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭವಲ್ಲಿ ಬಿಡುಗಡೆಗೊಂಡಿದೆ.

ವ್ಯಕ್ತಿ ವಿಮರ್ಶೆ ಎನ್ನುವದು ಕೇವಲ ಬೌದ್ಧಿಕ ಕುತೂಹಲವನ್ನು ತಣಿಸುವದಕ್ಕಾಗಿ ಕೈಗೊಳ್ಳುವ ಆಹ್ಲಾದಕರ ಹವ್ಯಾಸ ಮಾತ್ರ ಅಲ್ಲ. ಅದು ಯಶಸ್ವೀ ಜೀವನದ ಸೂತ್ರ ದರ್ಶನ ಕೂಡ ಆಗಿದೆ. ನಾವು ನಮ್ಮ ವೃತ್ತಿ ವ್ಯವಹಾರಗಳಲ್ಲಿ ನೂರಾರು ಸಂಖ್ಯೆಯ ಜನರೊಂದಿಗೆ ಸಂಪರ್ಕ ಇಟ್ಟುಕೊಂಡಿರುತ್ತೇವೆ. ಒಬ್ಬ ವ್ಯಕ್ತಿಯೊಂದಿಗೆ ನಾವು ವ್ಯವಹರಿಸುವಾಗ ಆತನ ಗುಣಾವಗುಣಗಳ ಮೇಲೆಯೂ ನಮ್ಮ ವ್ಯವಹಾರದ ಯಶಸ್ಸು ನಿಂತಿರುತ್ತದೆ. ಆತ ಅಸೂಯಾಪರ ಸ್ವಭಾವದವನಾದರೆ ಅಥವಾ ರಹಸ್ಯವನ್ನು ಬಹಿರಂಗಗೊಳಿಸುವದೇ ಒಂದು ಹವ್ಯಾಸ ಉಳ್ಳವನಾದರೆ ನಾವು ಆತನಲ್ಲಿ ನಮ್ಮ ಅಂತರ್ಯವನ್ನು ಬಿಚ್ಚದೆ ವ್ಯವಹರಿಸಬೇಕಾಗುತ್ತದೆ. ಒಬ್ಬಾತ ಉದಾರಿಯೂ, ಅನುಕಂಪ ಇರುವವನೂ, ಮೃದು ಹೃದಯದವನೂ ವಿಶ್ವಾಸಾರ್ಹನೂ ಆಗಿದ್ದರೆ ಆತನಲ್ಲಿ ನಮ್ಮ ಅಂತರಂಗವನ್ನು ಪೂರ್ತಿಯಾಗಿ ತೆರೆದಿಡುವದರಿಂದ ಒಳ್ಳೆಯದಾಗುತ್ತದೆ. ಹೀಗೆ ನಾವು ವ್ಯಕ್ತಿಗಳೊಂದಿಗೆ ವ್ಯವಹರಿಸುವಾಗ ಅವರ ಗುಣಾವಗುಣಗಳನ್ನು ಸಾಕಷ್ಟು ಗ್ರಹಿಸಿಕೊಂಡು ಮುಂದುವರಿಯಬೇಕಾಗುತ್ತದೆ.

## ನಮ್ಮ-ಇತರರ ನಡುವಿನ ಸಂಬಂಧ

ಆದರೆ ಸಾಮಾನ್ಯವಾಗಿ ನಾವು ಯಾರೂ ಹಾಗೆ ಮಾಡುವದಿಲ್ಲ. ವ್ಯಕ್ತಿಯನ್ನು ಯಥಾವತ್ತಾಗಿ ಅಳೆದು ಆ ವ್ಯಕ್ತಿತ್ವ ಇಂತಹುದೇ ಹೌದು ಎಂದು ನಿರ್ಧರಿಸುವದು ಬಹಳ ಕಷ್ಟದ ಕೆಲಸ. ಯಾವದೇ ವ್ಯಕ್ತಿಯಾದರೂ ಆ ವ್ಯಕ್ತಿಯ ಮೇಲ್ನೋಟದಿಂದ ನಾವು ಒಮ್ಮೆಗೆ ಪ್ರಭಾವಿತರಾಗುತ್ತೇವೆ. ಆದರೆ ಆ ವ್ಯಕ್ತಿ ಅಂತರ್ಯದಲ್ಲಿ ನಾವು ಆ ವ್ಯಕ್ತಿಯನ್ನು ತಿಳಿದುಕೊಂಡಿರುವುದಕ್ಕಿಂತಲೂ ಬೇರೆ ಗುಣದ ವ್ಯಕ್ತಿಯೇ ಆಗಿರಲಿಕ್ಕೂ ಸಾಕು. ಹೊರಗಿನ ವ್ಯವಹಾರದಲ್ಲಿ ಸಾಮಾನ್ಯವಾಗಿ ಎಲ್ಲರೂ ನಗುತ್ತಾ ಮಾತನಾಡಿಸುತ್ತಾರೆ, ಉಪಚಾರದ ಮಾತನಾಡುತ್ತಾರೆ, ಅನುಕಂಪ ತೋರುತ್ತಾರೆ. ಧರ್ಮ ನ್ಯಾಯಗಳ ಸಮರ್ಥನೆ ಮಾಡುತ್ತಾರೆ. ಅವೆಲ್ಲವೂ ಆ ವ್ಯಕ್ತಿಯ ಅಂತರ್ಯದ ಸ್ವಭಾವವನ್ನು ಪ್ರತಿ

● ಇತರರ ವ್ಯಕ್ತಿತ್ವವನ್ನು ಸರಿಯಾಗಿ ಅಳೆಯುವದರ ಯಶಸ್ಸು ಹಾಗೆ ಅಳೆಯುವವನ ವ್ಯಕ್ತಿತ್ವವನ್ನೂ ಅವಲಂಬಿಸಿರುತ್ತದೆ.

ಬಿಂಬಿಸುತ್ತದೆ ಎಂದು ನಾವು ಸಾಮಾನ್ಯವಾಗಿ ನಂಬಿಕೊಂಡುಬಿಡುತ್ತೇವೆ. ಈ ಆಧಾರದಲ್ಲಿಯೇ ಆ ವ್ಯಕ್ತಿಯೊಂದಿಗೆ ವ್ಯವಹರಿಸುತ್ತೇವೆ. ಇಲ್ಲಿ ನಮ್ಮ ವ್ಯವಹಾರವು ಎಡವಿರುತ್ತದೆ. ಇನ್ನು ಕೆಲವರು ಮೇಲ್ನೋಟಕ್ಕೆ ಬಹಳ ಗಡಸಾಗಿ ಕಾಣಿಸಿಕೊಳ್ಳುತ್ತಾರೆ. ನಾವು ಅವರಲ್ಲಿ ಉಪೇಕ್ಷೆಯಿಂದ ವ್ಯವಹರಿಸುತ್ತೇವೆ. ಇಲ್ಲಿಯೂ ನಮ್ಮ ವ್ಯವಹಾರ ಎಡವುತ್ತದೆ. ಈ ರೀತಿ ಇತರ ವ್ಯಕ್ತಿಗಳನ್ನು ಅರ್ಥ ಮಾಡಿಕೊಳ್ಳುವದರಲ್ಲಿ ಅವರ ಹೊರ ನೋಟವನ್ನು ಆಧರಿಸಿ ಹಾಗೂ ಅವರ ಅಂತರ್ಯವನ್ನು ತಿಳಿಯುವದಕ್ಕೆ ಬೇಕಾಗುವ ಸಾಮರ್ಥ್ಯ ನಮ್ಮಲ್ಲಿಲ್ಲದೆ ನಮ್ಮ ಮೆಚ್ಚಿನ ವ್ಯವಹಾರಗಳು ತಪ್ಪಿರುತ್ತವೆ.

ಇಷ್ಟಾಗಿ ಒಂದು ವ್ಯಕ್ತಿಯ ವ್ಯಕ್ತಿತ್ವವನ್ನು ಸರಿಯಾಗಿ ಅಳೆಯುವದು ಸುಲಭವೂ ಅಲ್ಲ. ಅದೇ ಒಂದು ವಿದ್ಯೆ, ಒಂದು ಕೌಶಲ್ಯ. ಇಷ್ಟೇ ಅಲ್ಲ, ಇತರರ ವ್ಯಕ್ತಿತ್ವವನ್ನು ಅಳೆಯುವವನ ವ್ಯಕ್ತಿತ್ವವನ್ನೂ ಈ ಅಳೆಯುವಿಕೆಯ ಯಶಸ್ಸು ಬಹಳ ಮಟ್ಟಿಗೆ ಅವಲಂಬಿಸಿರುತ್ತದೆ. ಕ್ರೂರ ಸ್ವಭಾವದ ಒಬ್ಬಾತ ದಯಾಪೂರ್ಣನಾದ ಒಬ್ಬಾತನ ವ್ಯಕ್ತಿತ್ವವನ್ನು ಸರಿಯಾಗಿ ಅಳೆಯಲಾರ. ಪೌರುಷ ಪ್ರಧಾನವಾದ ಮನೋಭಾವ ಇರುವಾತ, ವಿಧಿಗೆ ಶರಣಾಗಿ ಬದುಕುವಾತನ ಮನೋಭಾವವನ್ನು ಸರಿಯಾಗಿ ಅಳೆಯಲಾರ. ಹೇಗೂ ವ್ಯಕ್ತಿತ್ವದ ಯಥಾರ್ಥವಾದ ನಿಷ್ಕರ್ಷೆ ಬಹಳ ಜಟಿಲವಾದ, ಸೂಕ್ಷ್ಮವಾದ ವಿಷಯ.

## ಸ್ಥೂಲವಾದ ಗ್ರಹಿಕೆಯಲ್ಲಿ ಮಹಾಭಾರತದ ವ್ಯಕ್ತಿಗಳು

ವ್ಯಾಸರ ಮಹಾಭಾರತವು ಹಲವು ಅಮೂಲ್ಯ ರತ್ನಗಳ ಒಂದು ಗನಿ. ಅದನ್ನು ನಮ್ಮ ಪೂರ್ವಜರ ಇತಿಹಾಸವೆಂದು ಆಸ್ವಾದಿಸಬಹುದು: ಉತ್ತಮವಾದ ಕಾವ್ಯವೆಂದು ರಸಿಸಬಹುದು: ಭಗವಂತನ ಅವತಾರದ ಕ್ರೀಡಾಂಗಣ ಎಂದು ರಮಿಸಿ ಓದಬಹುದು: ಜೀವನದ ವಿವಿಧ ಸಮಸ್ಯೆಗಳಿಗೆ ಪರಿಹಾರ ನೀಡುವ ಗ್ರಂಥ ಎಂದು ಸ್ವೀಕರಿಸಬಹುದು: ನೀತಿಶಾಸ್ತ್ರ, ಧರ್ಮಗ್ರಂಥ ಎಂದು ಒಪ್ಪಿಕೊಳ್ಳಬಹುದು. ಇವೆಲ್ಲದರ ಜೊತೆಯಲ್ಲಿ ಅದಕ್ಕೆ ಇನ್ನೊಂದು ಮಹತ್ವವೂ ಇದೆ. ಮಹಾಭಾರತವು ಹಲವು ಅದ್ಭುತ ವ್ಯಕ್ತಿಗಳನ್ನು ಒಳಗೊಂಡಿರುವ ಒಂದು ಮಹಾನ್ ನಿರೂಪಣೆ. ಅದರಲ್ಲಿ ಬರುವ ಶ್ರೀಕೃಷ್ಣ ಯುಧಿಷ್ಠಿರ ಅರ್ಜುನ ಭೀಷ್ಮ ದ್ರೋಣ ಕರ್ಣ ದುರ್ಯೋಧನ—ಮೊದಲಾದವರ ಕುರಿತು ಈ ಸಾವಿರಾರು ವರ್ಷಗಳಲ್ಲಿ ಅನೇಕ ಕಾವ್ಯಗಳು, ವಿಮರ್ಶೆಗಳು, ನಾಟಕಗಳು ಹಲವಾರು ಭಾಷೆಗಳಲ್ಲಿ ಹುಟ್ಟಿಕೊಂಡಿವೆ.

ಈ ಪೈಕಿ ಶ್ರೀಕೃಷ್ಣ ಭಗವಂತನಾಗಿಬಿಟ್ಟ. ಯುಧಿಷ್ಠಿರ ಧರ್ಮದ ಪ್ರತಿಮೂರ್ತಿಯಾಗಿಬಿಟ್ಟ. ಭೀಷ್ಮ ತೇಜೋವಂತನಾದ ಹಿರಿಯ ವ್ಯಕ್ತಿ. ದ್ರೋಣ ಚಾಪಾಗಮಾಚಾರ್ಯ. ಕರ್ಣ ತ್ಯಾಗದ ಪ್ರತಿಬಿಂಬ. ದುರ್ಯೋಧನ ಛಲದ ಪ್ರತೀಕ. ಅರ್ಜುನ ಹಲವು ಆದರ್ಶಗಳ ಸಂಕೇತ. ಅವನು ಕೃಷ್ಣನ ಆತ್ಮೀಯ ಗೆಳೆಯ: ಅಣ್ಣನಲ್ಲಿ ಅತ್ಯಂತ ವಿಧೇಯ: ಮಹಾವೀರ. ಶಿವನನ್ನು ಮೆಚ್ಚಿಸಿದವನು: ಇಂದ್ರನ ಅರ್ಧಾಸನದಲ್ಲಿ ಕುಳಿತವನು: ತುಂಬ ಸುಸಂಸ್ಕೃತ, ಇತ್ಯಾದಿ. ಇದು ಮಹಾಭಾರತದ ವಿಮರ್ಶಕರು ಈವರೆಗೆ ಹೆಚ್ಚು ಕಡಿಮೆ ಏಕಾಭಿಪ್ರಾಯದಿಂದ ಕಂಡುಕೊಂಡಿರುವ ಅಭಿಪ್ರಾಯ. ಈ ಯಾವ ವಿಮರ್ಶಕರ ದೃಷ್ಟಿಯಲ್ಲಿಯೂ ಭೀಮನ ಪಾತ್ರ ಪ್ರಶಂಸೆಗೆ ಅರ್ಹವಾಗಿಲ್ಲ. ಪ್ರಶಂಸೆ ಇರಲಿ: ಹಲವರ ಟೀಕೆಗೆ ಅವನ ವ್ಯಕ್ತಿತ್ವ ಗುರಿಯಾಗಿದೆ. ಭೀಮ ಒಬ್ಬ ಅವಿವೇಕಿ: ಮುಂದಾಲೋಚನೆ ಇಲ್ಲದ ಮೂಢ. ಸಹನೆ ಇಲ್ಲದವ. ಒರಟ. ಇವು ಅವನ ಕುರಿತು ಸಾಮಾನ್ಯವಾಗಿ ಕೇಳಿ ಬರುವ ಅಭಿಪ್ರಾಯ. ವೇದವ್ಯಾಸರು ಮಹಾಭಾರತದ ಯಾವ ವ್ಯಕ್ತಿಯ ಬಗೆಗೂ ತಮ್ಮ ಖಚಿತ ಅಭಿಪ್ರಾಯ ನೀಡಿಲ್ಲ. ವ್ಯಕ್ತಿತ್ವವನ್ನು ಜೀವಂತವಾಗಿ ರಚಿಸಿ ಇಟ್ಟಿದ್ದಾರೆ.

ವಿಮರ್ಶೆ ನಮ್ಮ ನಮ್ಮ ದೃಷ್ಟಿಕೋನವನ್ನು ಅವಲಂಬಿಸಿರುತ್ತದೆ.

ವಿಮರ್ಶಕರು ಭೀಮನ ಕುರಿತು ಈ ರೀತಿ ಔದಾರ್ಯರಹಿತ ಅಭಿಪ್ರಾಯಗಳಿಗೆ ಹೇಗೆ ಬಂದರು ಎನ್ನುವದು ಒಂದು ಸೋಜಿಗದ ಸಂಗತಿ. ಒಬ್ಬನೇ ಒಬ್ಬ ವಿಮರ್ಶಕನಾದರೂ ಅವನಲ್ಲಿ ಉದಾತ್ತ ಗುಣಗಳನ್ನು ಕಂಡಂತಿಲ್ಲ. ಈ ಹಿನ್ನೆಲೆಯಲ್ಲಿ ಭೀಮನ ವ್ಯಕ್ತಿತ್ವವು ಶ್ರೀಕೃಷ್ಣನನ್ನು ಬಿಟ್ಟರೆ ಮಹಾಭಾರತದ ಇತರ ಎಲ್ಲರ ವ್ಯಕ್ತಿತ್ವಕ್ಕಿಂತಲೂ ಹೆಚ್ಚು ಉದಾತ್ತವಾದುದು ಎಂದು ಹೇಳಲು ಸ್ವಲ್ಪ ಅಳುಕೆನಿಸುತ್ತದೆ. ಆದರೂ ಅವನ ವ್ಯಕ್ತಿತ್ವದ ಔನ್ನತ್ಯ ಅಷ್ಟು ಸ್ಪಷ್ಟವಾಗಿ ಕಾಣಿಸುವಾಗ ಅದನ್ನು ಗುರುತಿಸದೆ ಅವನನ್ನು ಸಾಂಪ್ರದಾಯಿಕವಾದ ಕೊರತೆಯ ಕೋಲಿನಿಂದ ಅಳೆಯುವುದು ಅಪಚಾರ ಎಂದೂ ಅನಿಸುತ್ತದೆ. ಅವಿವೇಕಿ, ಒರಟ, ಸಂಯಮ ಇಲ್ಲದವ ಎಂದು ಸಾರ್ವತ್ರಿಕವಾಗಿ ಹೇಳಿಸಿಕೊಂಡವನು ಶ್ರೀಕೃಷ್ಣನ ಸಮೀಪಕ್ಕೆ ತಲಪುವಷ್ಟು ಘನ ವ್ಯಕ್ತಿತ್ವ ಹೊಂದಿದವನು ಎಂದು ಘೋಷಿಸುವದು ನಗೆಪಾಟಲೂ ಆಗಬಹುದು. ಈ ಎರಡು ಅಭಿಪ್ರಾಯಗಳಲ್ಲಿ ಯಾವುದಾದರೂ ಒಂದು ನಗೆಪಾಟಲಿಗೆ ತುತ್ತಾಗುವದು ಅನಿವಾರ್ಯ. ವಿಮರ್ಶೆ ಮಾಡೋಣ. ಸೌಕರ್ಯಕ್ಕಾಗಿ ಕುಮಾರವ್ಯಾಸನ ಭಾರತದಿಂದ ಭಾಗಗಳನ್ನು ಉದಾಹರಿಸಲಾಗುತ್ತದೆ.

## ಭೀಮನ ಸಂಯಮ ಶಕ್ತಿ

ಅರಗಿನ ಮನೆಯಿಂದ ತಪ್ಪಿಸಿಕೊಂಡ ಐವರು ಪಾಂಡವರು ಮತ್ತು ತಾಯಿ ಕುಂತಿ ಅರಣ್ಯವನ್ನು ಕ್ರಮಿಸಬೇಕಾಗುತ್ತದೆ. ನಡೆದೂ ನಡೆದೂ ಎಲ್ಲರೂ ತುಂಬ ಬಳಲುತ್ತಾರೆ. ಕುಂತಿ ಮತ್ತು ನಕುಲ ಸಹದೇವರಂತೂ ಮುಂದೆ ನಡೆಯಲು ಸಾಧ್ಯವೇ ಇಲ್ಲದಷ್ಟು ಬಳಲಿರುತ್ತಾರೆ. ಭೀಮನು ಉಳಿದ ಐವರನ್ನು ತಾನು ಹೊತ್ತುಕೊಳ್ಳುತ್ತಾನೆ. ಕರ್ತವ್ಯಪರತೆಗೆ ಶರಣಾಗಿ ಕತ್ತಲಿನಲ್ಲಿ ಕಾಡು ದಾರಿಯನ್ನು ಕ್ರಮಿಸುತ್ತಾನೆ. ದೇಹದಲ್ಲಿ ಅವನು ಬಲಿಷ್ಠ ನಿಜ. ಆದರೂ ಅವನಿಗೆ ಮಾನವ ಸಹಜವಾದ ಬಳಲಿಕೆ, ಆಲಸ್ಯಗಳು ಬಾರದಿರಲು ಸಾಧ್ಯವೇ? ಕವಿ ಹೇಳುತ್ತಾನೆ "...ಬಂದನೀ ಪರಿ ಹಲವು ಯೋಜನದಿಂದ ಹೇರಡವಿಯಲಿ: ಬಳಲಿದೆನೆಂದನೇ: ನೀರಡಿಸಿದನೆ: ಮೇಣ್ ನಿದ್ರೆಗೆಳೆಸಿದನೇ..." ಹೀಗೆ ತನ್ನವರನ್ನು ಹೊತ್ತು ತಂದು ಅವರನ್ನೆಲ್ಲ ಒಂದು ಮರದಡಿಯಲ್ಲಿ ಇಳಿಸಿ, ಸೊಪ್ಪನ್ನು ಹಾಕಿ ಅದರ ಮೇಲೆ ಅವರನ್ನು ಮಲಗಿಸುತ್ತಾನೆ. ಅವರೆಲ್ಲರೂ ನಿದ್ರಾವಶರಾಗುತ್ತಾರೆ. ಆದರೆ ಭೀಮ ನಿದ್ರಿಸುವಂತಿಲ್ಲ. ಮಲಗಿದವರನ್ನು ಕಾಯಬೇಕು ಎಚ್ಚರದಿಂದ ಕುಳಿತಿರುತ್ತಾನೆ. ಮಾನವ ಸಹಜವಾದ ಬಳಲಿಕೆ ಅವನನ್ನು ತೀವ್ರವಾಗಿ ಬಾಧಿಸುತ್ತದೆ. ತಡೆದುಕೊಳ್ಳಲಾರದಷ್ಟು ನಿದ್ರೆ ಅವನನ್ನು ಕಾಡುತ್ತದೆ. ಕವಿ ಹೇಳುತ್ತಾನೆ "...ಕವಿದುದು ಬಲು ನಿದ್ರೆ. ನಿದ್ರೆಯ ನೂಕುವನು ಕಣ್ಣೆವೆಗಳಲಿ ನಸು ತೂಕಡಿಕೆ ತೋರಿದೊಡೆ ಮೈಗೆದರುವನು ಕೈಯೊಡನೆ. ಸೋಕುವುದು ತನ್ನ ಮರನೆ. ಮರವೆ ವಿಸೋಕಿಸುವ ಚಿತ್ತವೃತ್ತಿ ನಿರಾಕುಲಾಂತಃಕರಣನಾದನು ಬಳಿಕ ಕಲಿ ಭೀಮ." ಕರ್ತವ್ಯದ ಬಗ್ಗೆ ಎಷ್ಟು ಔದಾಸೀನ [illegible] ವನಾಗಿದ್ದರೂ ಭೀಮ ತನಗೆ [illegible] ಈ ಸಂದರ್ಭದಲ್ಲಿ ಬಲವತ್ತರವಾಗಿ ಏರಿ ಬರುತ್ತಿದ್ದ ನಿದ್ರೆಗೆ ಖಂಡಿತವಾಗಿಯೂ ವಶನಾಗುತ್ತಿದ್ದ

● ಭೀಮ ಒಬ್ಬ ಅವಿವೇಕಿ. ಮುಂದಾಲೋಚನೆ ಇಲ್ಲದ ಮೂಢ. ಸಹನೆ ಇಲ್ಲದವ. ಒರಟ. ಇವು ಅವನ ಕುರಿತು ಸಾಮಾನ್ಯವಾಗಿ ಕೇಳಿ ಬರುವ ಅಭಿಪ್ರಾಯ.

● ಕರ್ತವ್ಯ ನಿರ್ವಹಣೆಯಲ್ಲಿ ಭೀಮ ತೋರಿದ ಅಸಾಧಾರಣ ಸಂಯಮ ಶಕ್ತಿಯನ್ನು ನಾವು ಮಹಾಭಾರತದ ಇತರರಲ್ಲಿ ಕಾಣುವ ಅವಕಾಶ ದೊರಕುವದಿಲ್ಲ.

ಕರ್ತವ್ಯ ನಿರ್ವಹಣೆಯಲ್ಲಿ ಭೀಮ ಇಲ್ಲಿ ತೋರಿದ ಅಸಾಧಾರಣ ಸಂಯಮ ಶಕ್ತಿಯನ್ನು ನಾವು ಮಹಾಭಾರತದ ಇತರರಲ್ಲಿ ಕಾಣುವ ಅವಕಾಶ ದೊರಕುವದಿಲ್ಲ. ಭೀಮನು ಜಡ ಸ್ವಭಾವದವನೆಂದು ಹೇಳಲು ಅವನ ಜೀವನದಲ್ಲಿ ಒಂದು ನಿದರ್ಶನವೂ ಸಿಕ್ಕುವುದಿಲ್ಲ. ಅದರ ಬದಲಿಗೆ ಅವನಲ್ಲಿರುವ ಪ್ರಜ್ಞಾವಂತಿಕೆ ಎಷ್ಟು ಜಾಗೃತವಾಗಿತ್ತು ಎನ್ನುವದಕ್ಕೆ ಈ ಘಟನೆ ನಿದರ್ಶನವಾಗುತ್ತದೆ. ಇತರರ ಆದೇಶದಂತೆ ಅಲ್ಲದೆ ಕೇವಲ ಸ್ವಯಂಪ್ರೇರಿತವಾದ ಕರ್ತವ್ಯ ಪ್ರಜ್ಞೆ ಇಷ್ಟು ಬಲವಾಗಿರುವ ಭೀಮನ ವ್ಯಕ್ತಿತ್ವವನ್ನು ಸಾಂಪ್ರದಾಯಿಕವಾದ ವಿಮರ್ಶೆಯಿಂದ ಬೇರ್ಪಡಿಸಿ ಪುನರ್ವಿಮರ್ಶಿಸಬೇಕಾಗುತ್ತದೆ.

ಭೀಮನ ಅಸಾಧಾರಣವಾದ ಸಂಯಮಶಕ್ತಿಗೆ ಇನ್ನೊಂದು ಚರ್ಚಾಸ್ಪದವಲ್ಲದ — ನಿದರ್ಶನ ಸಿಕ್ಕುತ್ತದೆ. ತನ್ನ ಮೇಲೆ ಬಲವಾದ ಆಕ್ರಮಣ ನಡೆಸುತ್ತಿರುವ ನಿದ್ರೆಯನ್ನು ನಿವಾರಿಸುತ್ತಾ ಭೀಮ ಹಿಡಿಂಬ ವನದಲ್ಲಿ ಕುಳಿತಿದ್ದಾನೆ. ಆ ವನದಲ್ಲಿ ಮನುಷ್ಯರ ವಾಸನೆಯನ್ನು ಗ್ರಹಿಸಿದ ಹಿಡಿಂಬ ಎಂಬ ರಾಕ್ಷಸ ಆ ಮನುಷ್ಯರನ್ನು ಕೊಂದು ತರುವಂತೆ ತನ್ನ ತಂಗಿ ಹಿಡಿಂಬಿಯನ್ನು ಕಳುಹಿಸುತ್ತಾನೆ. ಅವಳು ಬಂದು ಭೀಮನನ್ನು ನೋಡುತ್ತಾಳೆ. ವಜ್ರ ದೇಹದ ಸುಂದರ ಯುವಕ. ಅವನಿಗೆ ಮನಸೋಲುತ್ತಾಳೆ. ಸುಂದರ ತರುಣಿಯ ವೇಷ ಧರಿಸಿ ಭೀಮನ ಮುಂದೆ ಸುಳಿಯುತ್ತಾಳೆ. ಅವನು ಅವಳನ್ನು ನೋಡುವದೂ ಇಲ್ಲ, ಮಾತನಾಡಿಸುವದೂ ಇಲ್ಲ. ಅವಳು ಕಾಮ ಭಿಕ್ಷೆ ಬೇಡುತ್ತಾಳೆ "...ಮುನ್ನಲೇ ಮನುಮಥನ ಶರದಲಿ ಖಿನ್ನೆಯಾಗಿಹೆ. ಮರೆಯ ಹೊಕ್ಕೆನು. ತನ್ನನೀ ಪರಿ ಮುರಿದು ನುಡಿವರೆ ಎಂದಳಿಂದುಮುಖಿ..." ಆದರೆ ಭೀಮ ಕಠಿಣವಾಗಿ ನಿರಾಕರಿಸುತ್ತಾನೆ.

ಇಲ್ಲಿನ ಸಂದರ್ಭವನ್ನು ವಿಮರ್ಶಿಸಬೇಕು. ವಿರುದ್ಧ ಲಿಂಗದ ಆಕರ್ಷಣೆಯು ಹುಚ್ಚೆದ್ದು ಕುಣಿಯುವ ಹೊಸ ತಾರುಣ್ಯದಲ್ಲಿ ಭೀಮನಿದ್ದಾನೆ. ಅದಕ್ಕೆ ಪೋಷಕವಾಗಿ ಅವನ ದೇಹ ಸೌಷ್ಠವ. ಎದುರಿನಲ್ಲಿ ಕಾಮಿಸಿ ಬೇಡುತ್ತಿರುವ ಸುಂದರ ತರುಣಿ. ಸ್ಥಳ ನಿರ್ಜನವಾದ ಅರಣ್ಯ ಪ್ರದೇಶ: ಸಮಯ ಕಗ್ಗತ್ತಲಿನ ರಾತ್ರಿ. ಇಷ್ಟಾಗಿ ಭೀಮ ಬ್ರಹ್ಮಚರ್ಯ ವ್ರತಸ್ಥನೇನೂ ಅಲ್ಲ. ತನ್ನ ಐವರನ್ನು ಕಾಯಬೇಕೆಂಬ ಕರ್ತವ್ಯ ನಿಷ್ಠೆಯೊಂದೇ ಅವನನ್ನು ಇಂತಹ ಅಮಲಿನ ಕಾವಿನ ಪರಿಸ್ಥಿತಿಯಿಂದ ವಿಮುಖನನ್ನಾಗಿ ಮಾಡಬಹುದಾದರೆ ಅವನಲ್ಲಿರುವ ಇಂದ್ರಿಯ ನಿಗ್ರಹ ಶಕ್ತಿ, ಕರ್ತವ್ಯ ಪರಿಜ್ಞಾನ ಇವು ಮಹಾಭಾರತದಲ್ಲಿ ಇತರೆಡೆ ಕಾಣಬರದಿರುವ ಅದ್ಭುತ ಗುಣ ವಿಶೇಷಗಳು ಎನ್ನುವದನ್ನು ಒಪ್ಪದಿರಲು ಹೇಗೆ ಸಾಧ್ಯ? ಅಣ್ಣ ಅತ್ತಿಗೆಯರನ್ನು ಏಕಾಂತದಲ್ಲಿ ಕಂಡ ಕಾರಣಕ್ಕಾಗಿ ತಾವು ಐವರು ಒಪ್ಪಿಕೊಂಡ ನಿಯಮದಂತೆ ಬ್ರಹ್ಮಚರ್ಯೆಯಲ್ಲಿದ್ದು ಭೂಪ್ರದಕ್ಷಿಣೆ ಮಾಡಲು ಹೊರಟ ಅರ್ಜುನನು ಬ್ರಹ್ಮಚರ್ಯವನ್ನು ಮರೆತು ಉಲೂಪಿ, ಚಿತ್ರಾಂಗದೆ ಸುಭದ್ರೆಯರನ್ನು ವಿವಾಹ ಮಾಡಿಕೊಂಡ ಮನೋದೌರ್ಬಲ್ಯಕ್ಕೆ ಭೀಮನ ಈ ಅದ್ಭುತ ಸಂಯಮ ಶಕ್ತಿಯನ್ನು ಅನಿವಾರ್ಯವಾಗಿ ಹೋಲಿಸಬೇಕಾಗುತ್ತದೆ. ಅರ್ಜುನನೇ ಏಕೆ, ಹಲವಾರು ಋಷಿ, ಮುನಿ, ತಪಸ್ವಿಗಳು ಸಾಧಿಸಲಾರದ ಇಂದ್ರಿಯ ನಿಗ್ರಹ ಶಕ್ತಿಯನ್ನು ಭೀಮ ಸಾಧಿಸಿದ್ದಾನೆ. ಈ ಸಾಧನೆ ಆತ್ಮಲಾಭಕ್ಕಾಗಿ ಅಲ್ಲ: ರಾಜ್ಯಲಾಭಕ್ಕಾಗಿ ಅಲ್ಲ: ಅಪೂರ್ವವಾದ ಸಿದ್ಧಿಗಳ ಲಾಭಕ್ಕಾಗಿ ಅಲ್ಲ: ಕೇವಲ ತನ್ನವರನ್ನು ಪಹರೆ ಕಾಯಬೇಕೆನ್ನುವ ಕರ್ತವ್ಯ ನಿರ್ವಹಣೆಗಾಗಿ.

● ಅರ್ಜುನನೇ ಏಕೆ ? ಹಲವಾರು ಋಷಿ ಮುನಿ ತಪಸ್ವಿಗಳು ಸಾಧಿಸಲಾರದ ಇಂದ್ರಿಯ ನಿಗ್ರಹ ಶಕ್ತಿಯನ್ನು ಭೀಮ ಸಾಧಿಸಿರುವದಕ್ಕೆ ನಿದರ್ಶನಗಳಿವೆ.

ಭೀಮನ ಸಂಯಮ ಶಕ್ತಿಗೆ ಸಮಾನವಾದ ಗುಣವನ್ನು ಮಹಾಭಾರತದಲ್ಲಿ ನಾವು ಬಹುಶಃ ಇತರ ಇಬ್ಬರಲ್ಲಿ ಮಾತ್ರ ಕಾಣಲು ಸಾಧ್ಯವಾಗಬಹುದು. ಬ್ರಹ್ಮಚರ್ಯ ವ್ರತವನ್ನು ಘೋಷಿಸಿ ಅದನ್ನು ಪಾಲಿಸಿದ ಭೀಷ್ಮಾಚಾರ್ಯ ಮತ್ತು ಪತಿಯ ಕುರುಡುತನಕ್ಕೆ ಅನುಗುಣವಾಗಿ ತಾನೂ

ಕೂಡ ತನ್ನ ಕಣ್ಣಿನ ಉಪಯೋಗ ಪಡೆಯುವದಿಲ್ಲ ಎಂದು ಆಜೀವ ಪರ್ಯಂತ ಕಣ್ಣು ಬಿಡದೆಯೇ ಬದುಕಿದ ಗಾಂಧಾರಿ—ಈ ಇಬ್ಬರ ಸಂಯಮಶೀಲತೆಯನ್ನೂ ಒಂದು ವಿಧದಲ್ಲಿ ಮೀರುವ ಇಂದ್ರಿಯ ನಿಗ್ರಹ ಶಕ್ತಿಯನ್ನು ಭೀಷ್ಮನಲ್ಲಿ ಕಾಣಬಹುದು.

ತುಂಬಿದ ಕೌರವ ಸಭೆಯಲ್ಲಿ ತಮ್ಮ ಧರ್ಮಪತ್ನಿಯಾದ, ಅಗ್ನಿಪುತ್ರಿಯಾದ, ಪ್ರಖ್ಯಾತ ವಂಶದಲ್ಲಿ ಹುಟ್ಟಿ ಬಂದ ಹಾಗೂ ಕೇವಲ ನಿರಪರಾಧಿಯಾದ ದ್ರೌಪದಿಯನ್ನು ವಿವಸ್ತ್ರಳನ್ನಾಗಿ ಮಾಡುವ ಪ್ರಯತ್ನ ಕೌರವರಿಂದ ನಡೆಯುತ್ತದೆ. ದ್ರೌಪದಿ ಆರ್ತಳಾಗಿದ್ದಾಳೆ, ಅನಾಥಳಾಗಿದ್ದಾಳೆ, ಯುಧಿಷ್ಠಿರನ ದ್ಯೂತವ್ಯಸನದ ದೌರ್ಬಲ್ಯದಿಂದಾಗಿ ಆಕೆ ದುಷ್ಟರ ಕ್ರೌರ್ಯಕ್ಕೆ ಬಲಿಯಾಗುತ್ತಿದ್ದಾಳೆ. ಆದರೆ ಅವಳು ಇಂತಹ ಪರಿತಾಪಪಡಬೇಕಾಗಿಲ್ಲ. ಅವಳ ಗಂಡಂದಿರು ಪರಾಕ್ರಮಿಗಳು. ಅವಳನ್ನು ಸರ್ವಥಾ ರಕ್ಷಿಸಲು ಸಮರ್ಥರು. ಆದರೆ ಅದೇನೋ ಧರ್ಮ ಜಿಜ್ಞಾಸೆಯಂತೆ. ಯುಧಿಷ್ಠಿರನು ದ್ಯೂತದಲ್ಲಿ ದ್ರೌಪದಿಯನ್ನು ಸೋಲುವದಕ್ಕೆ ಮುಂಚೆ ತನ್ನನ್ನು ಸೋತುಕೊಂಡಿದ್ದನೇ ಅಥವಾ ಅನಂತರ ಸೋತುಕೊಂಡನೇ ಎನ್ನುವದು ದ್ರೌಪದಿಯ ಪ್ರಶ್ನೆ. ಭೀಷ್ಮ ಮೊದಲಾದ ಅಷ್ಟರು ಕೂಡ ಈ ಪ್ರಶ್ನೆಗೆ ಉತ್ತರವನ್ನು ಹುಡುಕುತ್ತಿದ್ದಾರೆ. ಯುಧಿಷ್ಠಿರ ತನ್ನ ದ್ಯೂತ ವ್ಯಸನದ ಅಮಲನ್ನೇ ಧಾರ್ಮಿಕ ಪ್ರಜ್ಞೆ ಎಂದು ಭ್ರಮಿಸಿ ಕುಳಿತಿದ್ದಾನೆ. ಅರ್ಜುನನಿಗೆ ಸ್ವತಂತ್ರ ವ್ಯಕ್ತಿತ್ವವಿಲ್ಲ. ಅಣ್ಣ ತಲೆ ಎತ್ತಿದರೆ ಅವನೂ ಎತ್ತುತ್ತಾನೆ. ಅವನು ಬಗ್ಗಿ ಕುಳಿತರೆ ಇವನೂ ಹಾಗೆಯೇ. ಈ ನಡುವೆ ಕೌರವರು ತಮ್ಮ ಕಾರ್ಯ ನಿರ್ವಹಣೆಯೇ ಧಾರ್ಮಿಕ ಜಿಜ್ಞಾಸೆಯ ಉತ್ತರ ಎನ್ನುವಂತೆ ದ್ರೌಪದಿಯ ಸೀರೆಯನ್ನು ಎಲ್ಲರೆದುರಿಗೆ ಬಲಾತ್ಕಾರದಿಂದ ಬಿಚ್ಚಿ ಅವಳನ್ನು ಬತ್ತಲೆ ಮಾಡಲು ತೊಡಗಿದ್ದಾರೆ. ಇಡಿಯ ಸಭೆಗೆ ಸಿಡಿಲು ಬಡಿದಂತಾಗಿದೆ. ಈ ಸಂದರ್ಭದಲ್ಲಿ ಭೀಮನ ಸ್ವಭಾವ ಗುಣದ ಕುರಿತು ಒಂದೆರಡು ಮಾತ ಹೇಳುವದು ಉಚಿತವಾಗುತ್ತದೆ.

## ಅನ್ಯಾಯವನ್ನು ದಮನ ಮಾಡುವ ಮಹಾವ್ರತ

ಅನ್ಯಾಯವನ್ನು ಕಂಡಲ್ಲಿ ಪ್ರಾಣವನ್ನು ಪಣವಿಟ್ಟು ಅದನ್ನು ತೊಡೆಯಲು ಪ್ರಯತ್ನಿಸುವದು ಭೀಮನ ಪ್ರವೃತ್ತಿ. ಧರ್ಮ—ಅಧರ್ಮ, ನೀತಿ—ಅನೀತಿ ಶಿಷ್ಟಾಚಾರ—ಅನಾಚಾರ ಎಂಬ



● ಸ್ತ್ರೀಯ ಮೇಲಿನ ದುರಾಚಾರವನ್ನು ನೋಡಿ ಸುಮ್ಮನಿದ್ದರೆ ಅವನು ಭೀಮನಾಗ ಲಾರ.

ಒಂದು ಚರ್ಚೆಯಲ್ಲಿ ಪ್ರವೇಶಿಸಿ, ಚರ್ಚೆ ಮುಗಿಯುವ ವೇಳೆಗೆ ಆ ಚರ್ಚೆಗೆ ವಿಷಯವಾಗಿದ್ದ ಘಟನೆಯು ನಡೆದು ಹೋಗಿ ಚರ್ಚೆಯು ನಿಷ್ಪ್ರಯೋಜಕ ವಾಗುವಂತಹ ಪರಿಸ್ಥಿತಿ ಅವನಿಗೆ ಎಳ್ಳಷ್ಟೂ ಒಗ್ಗುವದಿಲ್ಲ. ತನ್ನ ಅಂತರ್ಯಕ್ಕೆ ಯಾವದು ತಪ್ಪು ಎನಿಸುತ್ತದೋ ಆ ತಪ್ಪನ್ನು ತಿದ್ದಲು ಅವನು ಆ ಕ್ಷಣದಲ್ಲಿಯೇ ಸಿದ್ಧ. ಇದನ್ನು ಭೀಮನ ಜೀವನದಾದ್ಯಂತ ಹಲವಾರು ಸಂದರ್ಭಗಳಲ್ಲಿ ನಾವು ನೋಡಬಹುದು. ದ್ರೌಪದಿಯ ಸೀರೆಯನ್ನು ಪಾಂಡವರ ಶತ್ರುಗಳಾದ ಕೌರವರು ತುಂಬಿದ ಸಭೆಯಲ್ಲಿ ಬಿಚ್ಚಿ ಅವಳನ್ನು ಬತ್ತಲೆ ನಿಲ್ಲಿಸಲು ಪ್ರಯತ್ನಿಸುತ್ತಿರುವದು ಸರಿಯೇ, ತಪ್ಪೇ ಎನ್ನುವ ಜಿಜ್ಞಾಸೆಗೆ ಆ ತುಂಬಿದ ಸಭೆಯಲ್ಲಿ ಮನಸ್ಸು ಕೊಡದ ಒಬ್ಬನೇ ವ್ಯಕ್ತಿ ಎಂದರೆ ಭೀಮ. ಜಿಜ್ಞಾಸೆ ಹಾಳಾಯಿತು. ದ್ರೌಪದಿಯ ಮಾನ ಉಳಿಯಬೇಕಾದುದು ತಕ್ಷಣದ ಕರ್ತವ್ಯ. ಅದನ್ನು ಅವನು ನಿರ್ವಹಿಸಬಲ್ಲ. ನಿರ್ವಹಿಸಲು ಸಮರ್ಥ ಹೌದೋ ಅಲ್ಲವೋ ಅದಕ್ಕಾಗಿ ಪ್ರಾಣದ ಪಣವಿಟ್ಟು ಕಾರ್ಯೋನ್ಮುಖನಾಗಲು ಅವನು ಸ್ವಭಾವ ಸಹಜವಾಗಿ ಸಿದ್ಧ. ಭೀಮನ ಹೃದಯದೊಳಗೆ ಇಂತಹ ತುಮುಲವಿದೆ. ಇಂತಹ ತಳಮಳವಿದೆ. ಇಂತಹ ಹಾಲಾಹಲದ ಕುದಿತವಿದೆ. ಹಾಗಿದ್ದರೆ ಅವನಿಗೇನು ಅಡ್ಡಿ? ಎದ್ದು ಹೋಗಿ ದ್ರೌಪದಿಯನ್ನೇಕೆ ರಕ್ಷಿಸಲೊಲ್ಲ? ಕೌರವರ ಭಯವೆ? ಅವನು ಭಯವನ್ನು ಕಂಡವನೇ ಅಲ್ಲ. ಧರ್ಮಾಧರ್ಮದ ಜಿಜ್ಞಾಸೆಯ ಕಟ್ಟುಪಾಡೇ? ಅವನ ಅಂತರಾತ್ಮನೇ ಅವನ ಧಾರ್ಮಿಕ ಗುರು. ಮತ್ತೇಕೆ ಸುಮ್ಮನಿದ್ದಾನೆ? ಇಲ್ಲ: ಸುಮ್ಮನಿಲ್ಲ: ಸುಮ್ಮನಿರಲಾರ. ಸುಮ್ಮನಾದರೆ ಅವನು ಭೀಮನಲ್ಲ. ಅಂತಹ ಘೋರ ಅನ್ಯಾಯವನ್ನು, ಸ್ತ್ರೀಯ ಮೇಲಿನ ದುರಾಚಾರವನ್ನು ನೋಡಿ ಸುಮ್ಮನಿದ್ದರೆ ಅವನು ಭೀಮನಾಗಲಾರ. ಒಳಗಿನ ಜ್ವಾಲಾಮುಖಿ ಸಿಡಿಯುತ್ತದೆ. “ಸಹದೇವಾ, ಬೆಂಕಿಯನ್ನು ತಾ. ಅಣ್ಣ ಯುಧಿಷ್ಠಿರನ ತೋಳನ್ನು ಸುಟ್ಟು ಹಾಕುತ್ತೇನೆ” ಎಂದು ಬುಸುಗುಟ್ಟುತ್ತಾನೆ. ಅದೇಕೆ ಹೀಗೆ? ಕೌರವರ ಮೇಲೆ ಎರಗುವ ಕೈ ಅಣ್ಣನ ಮೇಲೇಕೆ? ವಿಚಿತ್ರ. ಅವನು ಅಣ್ಣನ ಮೇಲೆ ಎರಗುತ್ತಿರುವದು, ಅಣ್ಣನ ಮೇಲಿನ ಗೌರವದಿಂದಲೇ. ವಿಚಿತ್ರವೇ ಸರಿ. ಅಣ್ಣನ ಮೇಲಿನ ಗೌರವದಿಂದಾಗಿ ಅಣ್ಣನ ತೋಳನ್ನೇ ಸುಡಲು ಹೊರಡುವದು ಬಹಳ ಆಶ್ಚರ್ಯಕರವಾದ ವಿಷಯ. ಹೌದು. ಅಣ್ಣನ ಹೆಸರು ಯುಧಿಷ್ಠಿರ. ಅವನನ್ನು ಕರೆಯುವದು ಧರ್ಮರಾಯ ಎಂದು. ಅವನು ದ್ರೌಪದಿಯನ್ನು ಕೌರವರಿಗೆ ಸೋತಿರುವದು ಧರ್ಮಯುಕ್ತವಾಗಿಯೇ ಇದೆಯಂತೆ. ಹಾಗಾಗಿ ತಾವು ಗೆದ್ದುಕೊಂಡ ಹೆಂಗಸನ್ನು ಏನು ಬೇಕಾದರೂ ಮಾಡಲು ಅವಳ ಒಡೆಯರಾದ ಕೌರವರಿಗೆ ಅಧಿಕಾರ ಇದೆಯಂತೆ.

ಆದುದರಿಂದಲೇ ಯಾರೂ ಕೌರವರನ್ನು ತಡೆಯುತ್ತಿಲ್ಲ. ಆದುದರಿಂದಲೇ ಭೀಮನೂ ಕೌರವರ ವಿರುದ್ಧ ಏಳಬಾರದು. ಈ ಪರಿಸ್ಥಿತಿಯನ್ನು ತನ್ನ ಅಣ್ಣ ಒಪ್ಪಿಕೊಂಡಿದ್ದಾನೆ. ಆದುದರಿಂದ ಅಣ್ಣ ಒಪ್ಪಿದುದನ್ನು ತಾನು ಪ್ರತಿಭಟಿಸಿ ಭೀಮ ಕೌರವರ ಮೇಲೆ ಎರಗುವಂತಿಲ್ಲ. ಇದು ಅಂದಿನ ಧರ್ಮಜಿಜ್ಞಾಸೆ. ಹಾಗೆಂದು ಭೀಮ ದ್ರೌಪದಿಯ ಮೇಲಿನ ಅತ್ಯಾಚಾರವನ್ನು ಸಹಿಸುವದಾದರೂ ಹೇಗೆ? ಆದುದರಿಂದಲೇ ತನ್ನ ಅಂತರ್ಯದ ಬಯಕೆಯ ಪ್ರಕಾರ ಕೌರವರ ಮೇಲೆ ಎರಗಬೇಕಾದ ಅವನು ವಿಧಿಯಿಲ್ಲದೆ – ಅಣ್ಣನ ಧಾರ್ಮಿಕ ಪ್ರಜ್ಞೆಗೆ ಮನ್ನಣೆ ಕೊಟ್ಟು ಅಣ್ಣನ ಮೇಲೆ ಎರಗುತ್ತಿದ್ದಾನೆ. ಭೀಮನ ಸಂಯಮ ಶಕ್ತಿಗೆ ಬೇರೊಂದು ಉದಾಹರಣೆ ಸಿಕ್ಕುವದಿಲ್ಲ. ಯುಧಿಷ್ಠಿರನ ತೋಳನ್ನು ಸುಡುವ ಭೀಮನ ಪ್ರಯತ್ನವನ್ನು ಅರ್ಜುನ ವಿರೋಧಿಸುತ್ತಾನೆ. ಭೀಮನ ಅಂತರಂಗದ ಕುದಿತ ಅರ್ಜುನನಿಗೆ ಅರ್ಥವಾಗಿಲ್ಲ. ಅಣ್ಣನ ತೋಳನ್ನು ಸುಡಲು ಹೊರಟಿದ್ದಾನೆ ಎನ್ನುವ ಬಾಹ್ಯ ವಿದ್ಯಮಾನವಷ್ಟೇ ಅವನಿಗೆ ತಿಳಿಯುವದು. ಆಗ ಭೀಮ ತನ್ನ ಅಂತರಂಗದ ಒಂದು ಭಾಗವನ್ನು ಕಿತ್ತು ತೋರಿಸುತ್ತಾನೆ. ಅವನು ಹೇಳುತ್ತಾನೆ. “...ಹಿಂಗಿ ಹೋಗಲಿ ತನುವನಸು:

ಸಪ್ತಾಂಗ ಬೇಯಲಿ: ಜೋಡಿ ಮನದಲಿ ಹಿಂಗುವದೆ, ಹರಹರ... ಅಂಗನೆಯು ಮೇಲೊಡ್ಡವೆ? ಲಲಿತಾಂಗಿಗೀ ವಿಧಿಯೇಕೆ? ನಮಗೀ ಭಂಗ ಸಾಲದೆ? ಸುಡುವೆನಾದೊಡೆ ತನ್ನ ತೋಳುಗಳ..." ಅಣ್ಣನ ತೋಳಲ್ಲವಾದರೆ ತನ್ನ ತೋಳು, ತೋಳನ್ನು ಸುಡುವುದು ಅವನ ಉದ್ದೇಶವಲ್ಲ. ನಿರಪರಾಧಿ ಅಬಲೆಯ ಘೋರ ದುಃಖಕ್ಕೆ ಕಾರಣವಾದ ತೋಳನ್ನು, ಇಲ್ಲವೇ, ಆ ದುಃಖವನ್ನು ಪರಿಹರಿಸಲಾರದ ತೋಳನ್ನು ಸುಡಬೇಕು. ಆ ತೋಳು ಯಾರದು ಎನ್ನುವದು ಮುಖ್ಯವಲ್ಲ. ಅವನು ಮುಂದುವರಿದು ಹೇಳುತ್ತಾನೆ, "...ಈ ಅವಸ್ಥೆಗೆ ತಂದ ಕೌರವ ನಾಯಿಗಳ ಸಿಟ್ಟೆಲುವ ಮುರಿದು ನವಾಯಿಯಲಿ ಘಟ್ಟಿಸದೆ ಕೊಬ್ಬಿದ ತನ್ನ ತೋಳುಗಳ ವಾಯುಸಖನಲಿ ಸುಡುವೆನು......" "ಈಗಲೆ ಬೀಯುವಾಗಲಿ ದೇಹವು ಆಚೆಂದ್ರಾರುತವೇ?" ಎಂದು ಅವನು "ಒಡನೊಡನೆ ಮಿಡುಕುತ್ತಾನೆ." ಅನ್ಯಾಯವನ್ನು ಎಂದಿಗೂ ಸಹಿಸಲಾರ. ಅಣ್ಣನ ಮಾತನ್ನೂ ಮೀರಲಾರ. ಇಂತಹ ಅಡಕೆಯ ಕತ್ತರಿಯ ಒತ್ತುವಿಕೆಗೆ ಸಿಕ್ಕಿದ ಭೀಮ ಚಡಪಡಿಸುತ್ತಿದ್ದಾನೆ. ಇದು ಭೀಮನ ವ್ಯಕ್ತಿತ್ವ. ಹಿರಿಯಣ್ಣನ ಮಾತನ್ನು ಅಲಕ್ಷಿಸುವದರ ಮೂಲಕ ಶಿಷ್ಟಾಚಾರವನ್ನು ತುಳಿದ ಕೌರವರ ಮೇಲೆ ಕೈ ಮಾಡುವ ಅಶಿಕ್ಷಿತನೂ ಅವನಲ್ಲ: ಅಣ್ಣನ ಮಾತಿಗೆ ಕಟ್ಟು ಬಿದ್ದು ಅಬಲೆಯೊಬ್ಬಳ ಶೀಲಹರಣವನ್ನು ಕಣ್ಣಾರೆ ನೋಡುತ್ತಾ ಕೂರುವ ಷಂಡನೂ ಅವನಲ್ಲ. ಇದು ಭೀಮನ ವ್ಯಕ್ತಿತ್ವ. ಮಹಾಭಾರತದಲ್ಲಿ ಇತರ ಯಾರಿಗೂ ಇಲ್ಲದ ವ್ಯಕ್ತಿತ್ವ.

ಇಂತಹುದೇ ಇನ್ನೊಂದು ಪ್ರಸಂಗದಲ್ಲಿಯೂ ಭೀಮನ ವ್ಯಕ್ತಿತ್ವ ಒಡೆದು ಮೂಡಿ ಗಗನದೆತ್ತರದಲ್ಲಿ ಕಾಣಿಸಿಕೊಳ್ಳುತ್ತದೆ. ವಿರಾಟನಗರದಲ್ಲಿ ವಿರಾಟನ ಮೈದುನ ಕೀಚಕ ದ್ರೌಪದಿಯನ್ನು ಕಾಮಿಸಿ ಅವಳನ್ನು ಅಟ್ಟಿಸಿಕೊಂಡು ಹೋಗಿ ವಿರಾಟ, ಕಂಕಯತಿ (ಯುಧಿಷ್ಠಿರ) ಮೊದಲಾದವರ ಸಮಕ್ಷಮದಲ್ಲಿಯೇ ಅವಳನ್ನು ಒದೆದು ಉರುಳಿಸುತ್ತಾನೆ. ಮೂಗು ಬಾಯಿಗಳಲ್ಲಿ ರಕ್ತವನ್ನು ಕಾರಿದ ದ್ರೌಪದಿ ಧೂಳಿನಲ್ಲಿ ಹೊರಳುವದನ್ನು ರಾಜಸಭೆ ನೋಡುತ್ತದೆ. ಭೀಮನೂ ನೋಡುತ್ತಾನೆ. ರಾಜಾಂಗಣದಲ್ಲಿದ್ದ ಮರವನ್ನು ಕಿತ್ತು ಕೀಚಕನನ್ನು ಮತ್ತು ಅವನ ಕಡೆಯವರನ್ನು ತೀರಿಸಲು ನಿಶ್ಚಯಿಸುತ್ತಾನೆ. ಯುಧಿಷ್ಠಿರನಿಗೆ ಭೀಮನದೇ ಭಯ. ಭೀಮನ ಅಭಿಪ್ರಾಯ ಅವನಿಗೆ ತಿಳಿಯುತ್ತದೆ. ಅವನನ್ನು ತಡೆಯುತ್ತಾನೆ. ಭೀಮನಿಗೆ ನುಂಗಲಾರದ ತುತ್ತಾಗಿ ಹತಾಶನಾಗಿ ಒಳಗೆ ಹೋಗುತ್ತಾನೆ. ಆದರೆ ಸಮಸ್ಯೆ ಬಗೆಹರಿಯುವದಿಲ್ಲ. ಕೀಚಕ ದ್ರೌಪದಿಯನ್ನು ಸುಮ್ಮನೆ ಬಿಡುವವನಲ್ಲ. ಅವಳೀಗ ಅನಾಥೆಯಾಗಿದ್ದಾಳೆ. ತನ್ನ ಶೀಲವನ್ನು ಕಾಪಾಡಿಕೊಳ್ಳುವದು ಅವಳಿಗೆ ದೊಡ್ಡ ಸಮಸ್ಯೆಯಾಗಿದೆ. ರಾತ್ರಿಯ ಹೊತ್ತು ಯಾರಿಗೂ ತಿಳಿಯದಂತೆ ಭೀಮನಲ್ಲಿಗೆ ಬಂದು ತನ್ನನ್ನು ರಕ್ಷಿಸಬೇಕೆಂದು ಅನೇಕ ರೀತಿಯಲ್ಲಿ ಕೇಳಿಕೊಳ್ಳುತ್ತಾಳೆ. ಭೀಮ ಕಠಿಣವಾಗಿ ಹೇಳುತ್ತಾನೆ—"......ನಿನ್ನಯ ಹಳಿವು ಹರಿಬವ ಹೇಳಿ ಚಿತ್ತವ ತಿಳುಹಿಕೊಂಬುದು (ಉಳಿದ ನಾಲ್ವರಲ್ಲಿ). ನಾವು ಭೀತರು ಧರ್ಮಜನ ಹೊರೆಗೆ" ಮತ್ತೂ ಹೇಳುತ್ತಾನೆ "...ಅಣ್ಣನವರಿಗೆ ದೂರುವದು. ನಾವೃಣ್ಣದರಿಯೆವು. ರಾಜಾಜ್ಞೆಯ ಕಣ್ಣಿಯಲ್ಲಿ ಬಿಗಿವಡೆದು ಕೆಡೆದೆವು ಕಾಂತೆ..." ದ್ರೌಪದಿ ಹಲವು ವಿಧದಲ್ಲಿ ಕಾಡುತ್ತಾಳೆ. ಧರ್ಮ, ಧರ್ಮ ಎಂದುಕೊಂಡು ಕೈ ಹಿಡಿದ ಹೆಂಡತಿಯನ್ನು ಪರಪುರುಷನಿಗೆ ಒಪ್ಪಿಸಲೂ ಹೇಸದ ಗಂಡಂದಿ

● ನಿರಪರಾಧಿ ಅಬಲೆಯ ಘೋರ ದುಃಖಕ್ಕೆ ಕಾರಣವಾದ ತೋಳನ್ನು ಇಲ್ಲವೇ ಆ ದುಃಖವನ್ನು ಪರಿಹರಿಸಲಾರದ ತೋಳನ್ನು ಸುಡಲು ಭೀಮ ಬಯಸುತ್ತಾನೆ.

● ಹಿರಿಯಣ್ಣನ ಮಾತನ್ನು ಅಲಕ್ಷಿಸಿ, ಶಿಷ್ಟಾಚಾರವನ್ನು ತುಳಿಯುವ ಅಶಿಕ್ಷಿತನೂ ಅವನಲ್ಲ: ಅಣ್ಣನ ಮಾತಿಗೆ ಕಟ್ಟು ಬಿದ್ದು ಅಬಲೆಯ ಶೀಲಹರಣವನ್ನು ನೋಡುತ್ತಾ ಕೂಡುವ ಷಂಡನೂ ಅವನಲ್ಲ. ಇದು ಭೀಮನ ವ್ಯಕ್ತಿತ್ವ.

● ಅನ್ಯಾಯವನ್ನು ಹತ್ತಿಕ್ಕಬೇಕೆಂಬ ಪ್ರವೃತ್ತಿ ಭೀಮನಲ್ಲಿ ಎಷ್ಟು ಬೃಹದಾಕಾರವಾಗಿದ್ದಿತೋ ಅಂತರಂಗದ ಈ ಪ್ರವೃತ್ತಿಯನ್ನು ಅದುಮಿಡುವ ಅವನ ಇಂದ್ರಿಯ ನಿಗ್ರಹ ಶಕ್ತಿಯೂ ಅಷ್ಟೇ ಬಲವಾಗಿದ್ದಿತು.

---

ರನ್ನು ಕಠಿಣವಾಗಿ ದೂರುತ್ತಾಳೆ. ಭೀಮನನ್ನು ವೈಯಕ್ತಿಕವಾಗಿ ನಿಂದಿಸುತ್ತಾಳೆ. ಅವನು ಹೇಳುತ್ತಾನೆ "...ಈ ನಪುಂಸಕರೊಡನೆ ಹುಟ್ಟಿದ ನಾನು ಮೂಗುಳ್ಳವನೆ ಮಾನಿನಿ: ನೀನು ತೋರಿದ ಪರಿಯಲೆಂಬುದು – ಭೀತಿ ಬೇಡ," ಎನ್ನುತ್ತಾನೆ. ಅವಳು ತನ್ನನ್ನು ಏಕಾಗಿ ದೂರುತ್ತಿದ್ದಾಳೆ ಎನ್ನುವದು ಅವನಿಗೆ ಗೊತ್ತಿದೆ. ಅವಳು ಮಾತ್ರ ತನ್ನ ಅಳಲನ್ನು ತೋಡಿಕೊಂಡು ಗೋಳಾಡುತ್ತಾಳೆ. ಅವಳ ಬೇಡಿಕೆ ನ್ಯಾಯವಾದುದೇ ಆಗಿದೆ. ಅವಳನ್ನು ರಕ್ಷಿಸುವ ಕರ್ತವ್ಯ ತಮ್ಮ ಮೇಲಿರುವದನ್ನು ಭೀಮ ಚೆನ್ನಾಗಿ ಅರಿತಿದ್ದಾನೆ. ಆದರೆ ಅವನು ಅಣ್ಣನ ಮಾತಿಗೆ ವಿರೋಧ ಹೋಗಲೊಲ್ಲ. ಕೌರವ ಸಭೆಯಲ್ಲಿ ದ್ರೌಪದಿಯನ್ನು ವಿವಸ್ತ್ರಳನ್ನಾಗಿ ಮಾಡುವ ಪ್ರಯತ್ನ ನಡೆದರೆ ವಿರಾಟನಗರದಲ್ಲಿ ಅವಳನ್ನು ತಾವಾಗಿಯೇ ಪರಪುರುಷನಿಗೆ ಒಪ್ಪಿಸಬೇಕಾದ ಸನ್ನಿವೇಶ ಬಂದಿದೆ. ಅವಳ ನಾಲ್ವರು ಗಂಡಂದಿರು ಹಾಯಾಗಿ ಇದ್ದುಬಿಟ್ಟಿದ್ದಾರೆ. ಭೀಮ ಹಾಗಿರಲೊಲ್ಲ. ಅವನ ಹೃದಯದೊಳಗೆ ಅನ್ಯಾಯ ಮಾಡಿದವರ ರಕ್ತ ಹಿಂಡುವ ತವಕದ ಜ್ವಾಲಾಮುಖಿ ಕುದಿಯುತ್ತದೆ. ಅಂತಹ ಜ್ವಾಲಾಮುಖಿಯನ್ನು ಅವನು ಹೇಗೆ ಅದುಮಿ ಹಿಡಿಯುತ್ತಾನೆ? ಅಣ್ಣನ ಮಾತಿಗೆ ಶರಣಾಗುವ ಶಿಷ್ಟಾಚಾರದ ಮೂಲಕ. ಅನ್ಯಾಯವನ್ನು ಹತ್ತಿಕ್ಕಬೇಕೆಂಬ ಅಸಹನೀಯ ಪ್ರವೃತ್ತಿ ಭೀಮನಲ್ಲಿ ಎಷ್ಟು ಬೃಹದಾಕಾರವಾಗಿದ್ದಿತೋ, ಅಂತರಂಗದ ಆ ಪ್ರಚಂಡ ತವಕವನ್ನು ಅಲ್ಲಿಯೇ ಹತೋಟಿಯಲ್ಲಿಡುವ ಅವನ ಇಂದ್ರಿಯ ನಿಗ್ರಹ ಶಕ್ತಿಯೂ ಅಷ್ಟೇ ಬಲಪತ್ತರವಾದುದಾಗಿದ್ದಿತು. ಈ ಎರಡು ಗುಣಗಳು ಒಂದೇ ವ್ಯಕ್ತಿಯಲ್ಲಿ ಇಷ್ಟು ಸ್ಪಷ್ಟವಾಗಿ ಅಳವಟ್ಟಿರುವದಕ್ಕೆ ಮಹಾಭಾರತದಲ್ಲಿ ಇನ್ನೊಂದು ವ್ಯಕ್ತಿಯ ನಿದರ್ಶನ ಸಿಕ್ಕುವದಿಲ್ಲ. ಅನ್ಯಾಯವನ್ನು ಹತ್ತಿಕ್ಕಬೇಕೆಂಬ ಅವನ ತವಕವನ್ನು ಅಣ್ಣನಿಗೆ ತಾನು ವಿಧೇಯನಾಗಬೇಕೆಂಬ ಶಿಷ್ಟಾಚಾರವು ಜಯಿಸುತ್ತದೆ. ಆದರೆ ಒಳಗಿನ ಈ ಘೋರ ಯುದ್ಧದ ಪರಿಣಾಮ ಭೀಮನ ಮೇಲೆ ಆಗದಿರಲು ಹೇಗೆ ಸಾಧ್ಯ? ಅವನು ಹತಾಶನಾಗಿ ಹೇಳುತ್ತಾನೆ "...ತರುಣಿ ದಿಟ ಕೇಳಿಂದು ಮೊದಲಾಗಿ ಅರಸಿ ನೀ ನಾಲ್ವರಿಗೆ. ನಾವೆಡೆ ಯರಿದು ಬಿಟ್ಟವರು ನಿನ್ನಯ ಸೂಳು ಪಾಳೆಯವ..." ದ್ರೌಪದಿಯೂ ಅಷ್ಟೇ ಹತಾಶಳಾಗಿದ್ದಾಳೆ. ಹಾಗಿದ್ದರೆ ತಾನು ಸಾಯಲು ಅನುಮತಿ ಕೊಡು ಎಂದು ಭೀಮನನ್ನು ಕೋರಿ ಅವನಿಗೆ ನಮಸ್ಕರಿಸುತ್ತಾಳೆ. ಅನ್ಯಾಯವನ್ನು ದಮನ ಮಾಡಬೇಕೆನ್ನುವ ತನ್ನ ಪ್ರವೃತ್ತಿಯೊಂದಿಗೆ ಪತ್ನಿಯನ್ನು ರಕ್ಷಿಸಬೇಕೆನ್ನುವ ಕರ್ತವ್ಯ ಪ್ರಜ್ಞೆಯೂ ಅವನನ್ನು ಇರಿಯುತ್ತದೆ. ಕರ್ತವ್ಯ ಜವಾಬ್ದಾರಿಕೆಗಳ ಪ್ರಜ್ಞೆಗೆ ಮೇಲುಗೈಯಾಗುತ್ತದೆ. ಅಣ್ಣನ ಮಾತನ್ನು ಮೀರುವ ನಿರ್ಧಾರ ಕೈಗೊಳ್ಳುತ್ತಾನೆ.

ಇಂತಹ ಸಂದರ್ಭಗಳಲ್ಲಿ ಭೀಮ ತೋರುವ ಆತ್ಮ-ಸಂಯಮವು ಹೆಸರಾಂತ ಅನೇಕ ಋಷಿಗಳಿಂದ ಕೂಡ ಆಚರಿಸಲು ಸಾಧ್ಯವಾಗದಿರುವಷ್ಟು ಅಮೋಘವಾದುದು. ಭೀಮ ಮುಂಗೋಪಿ: ಮುಂದಾಲೋಚನೆ ಇಲ್ಲದ ಮೂಢ ಎನ್ನುವ ವಿಮರ್ಶಕರು ತಮ್ಮ ವಿದ್ವತ್ತನ್ನು ಒರೆಗೆ ಹಚ್ಚಿ ನೋಡಿಕೊಳ್ಳಬೇಕು.

## ಭೀಮನಲ್ಲಿದ್ದ ಅನುಕಂಪ ಗುಣ

ಭೀಮ ಒರಟ, ಜಡ ಸ್ವಭಾವದವನು ಎನ್ನುವದು ಅವನ ಮೇಲಿರುವ ಇನ್ನೊಂದು ಅಪಾದನೆ. ದ್ರೌಪದಿಯ ವಸ್ತ್ರಾಪಹಾರದ ಸಂದರ್ಭದಲ್ಲಿಯೂ ಅವಳು ಕೀಚಕನಿಂದ ಬಲಾತ್ಕಾರಕ್ಕೆ ಒಳಗಾಗಬೇಕಾದಾಗಲೂ ಅವನು ಮಿಡುಕಿದುದು ಅಂತಃಕರಣ ಕರಗಿದುದರಿಂದ ಎಂದು ಹೇಳಬೇಕಾಗಿಲ್ಲ ಎಂದೇ ಭಾವಿಸೋಣ. ಆ ಸಂದರ್ಭಗಳಲ್ಲಿ ಅವನು ಪ್ರಚೋದಿತನಾದುದು ಅನ್ಯಾಯ

ವನ್ನು ದಮನ ಮಾಡುವ ಅವನ ಅದಮ್ಯ ಪ್ರವೃತ್ತಿಯಿಂದಾಗಿ ಎನ್ನೋಣ. ಆದರೆ ಅವನ ದಯಾಸಾಂದ್ರತೆ ಕೂಡ ಅಷ್ಟೇ ಪರಿಶುದ್ಧವಾದುದು. ಒಂದೆರಡು ನಿದರ್ಶನಗಳನ್ನು ನೋಡಬಹುದು.

ಅರಗಿನ ಮನೆಯಿಂದ ತಾಯಿ ಕುಂತಿ ಮತ್ತು ನಾಲ್ವರು ಸೋದರರನ್ನು ಹೊತ್ತು ತಂದ ಭೀಮ ಅವರನ್ನೆಲ್ಲ ಒಂದು ಮರದಡಿಯಲ್ಲಿ ಚಿಗುರೆಲೆಗಳ ಮೇಲೆ ಮಲಗಿಸುತ್ತಾನೆ. ಬಳಲಿಕೆಯಿಂದ ಆ ಐವರೂ ನಿದ್ರಾವಶರಾಗಿರುತ್ತಾರೆ. ಭೀಮ ಅವರ ರಕ್ಷಣೆಗಾಗಿ ಎಚ್ಚರದಿಂದ ಕುಳಿತಿರುತ್ತಾನೆ. ತನ್ನವರನ್ನು ಅವನು ನೋಡುತ್ತಾನೆ "...ರಥಿಳಕೆ ಕಂದಿದ ಮೈಯ: ಬಾಡಿದ ಲಲಿತ ವದನದ: ಮಾಸಿ ಕೆದರಿದ ತಲೆಯೊಳಿರೆ ತನ್ನೈವರನು ಕಂಡು ಅಳಲಿದನು ಭೀಮ." ಮಹಾ ಪರಾಕ್ರಮಿಗಳು ಎನಿಸಿಕೊಂಡ ಐವರು ಮಕ್ಕಳನ್ನು ಪಡೆದ ಕುಂತಿಗೆ ಬಂದೊದಗಿದ ದುರವಸ್ಥೆಯನ್ನು ನೋಡಿ ಅವನ ಕರುಳು ಮಿಡಿಯುತ್ತದೆ. "ತಾಯೆ, ನೀ ದಿಟ ನಾಗನಗರಿಯ ರಾಯನರಸಿಯೆ! ನಿನ್ನ ಮಕ್ಕಳು ರಾಯರೆದೆವಲ್ಲರೆ! ಭಾರಿಯ ಬಾಹು ವಿಕ್ರಮರೆ! ಈಯವಸ್ಥೆಗೆ ಸೋಮವಂಶದ ರಾಯತನವೆಂತಹುದು ಹೇಳೌ? ತಾಯೆ, ಹೇಳನ್ನಾಣೆ ಹೇಳು ಎಂದು ಅಳಲಿದನು ಭೀಮ". ಅವನ ದುಃಖ ಉಮ್ಮಳಿಸುತ್ತದೆ. ಕ್ರೂರ ವಿಧಿಯ ಆಘಾತಕ್ಕೆ ಸಿಕ್ಕಿದ ತಾವು ಏನು ಮಾಡಲು ಸಾಧ್ಯ! ಆದರೂ ಯಾವುದೇ ಪರಿಸ್ಥಿತಿಯನ್ನೂ ಮೌನವಾಗಿ ಸಹಿಸುವ ಪ್ರವೃತ್ತಿ ಅವನದಲ್ಲ. ತನ್ನ ಬಳಲಿಕೆಯನ್ನು ಮರೆತು ತಾಯಿ, ಅಣ್ಣ, ತಮ್ಮಂದಿರನ್ನು ಉಪಚರಿಸುತ್ತಾನೆ. ಅವರ ಕಾಲುಂಗಳನ್ನು ಒತ್ತುತ್ತಾನೆ "...ಅನಿಬರ ಇರವನು ನೋಡಿ ಪೂರ್ವವ ನೆನೆದು ತಾ ಬಿರಿದಳುತ ಘನ ಕಾನನದ ಮಧ್ಯದಲಿ ಈಸಿದ್ದನು ಹಿರಿದು ಚಿಂತಿಸುತ." ಅವನ ಅನುಕಂಪವಾದರೂ

---

● ಭೀಮನಿಗೆ ಗೊತ್ತೇ ಇರದ ವಿಷಯ ಯಾವದಾದರೂ ಇದ್ದರೆ ಅದು ಭಯ ಮತ್ತು ಕಾಪಟ್ಯ.

---

ಶುದ್ಧವಾದುದು. ಯಾರನ್ನೋ ಮೆಚ್ಚಿಸಲೆಕ್ಕೆಂದು ಪ್ರದರ್ಶಿಸುವ ದುಃಖ ಅವನದಲ್ಲ. ಭೀಮನಿಗೆ ಗೊತ್ತೇ ಇರದ ವಿಷಯ ಯಾವದಾದರೂ ಇದ್ದರೆ ಅದು ಭಯ ಮತ್ತು ಕಾಪಟ್ಯ. ಇದು ಅತ್ಯಂತ ವಿಕಸಿತವಾದ ವ್ಯಕ್ತಿತ್ವದಲ್ಲಿ ಮಾತ್ರ ಕಂಡುಬರುವ ಗುಣ ಎನ್ನುವದರಲ್ಲಿ ಎರಡು ಅಭಿಪ್ರಾಯ ಇರಲು ಸಾಧ್ಯವಿಲ್ಲ.

ಇದೇ ರೀತಿ ಅವನು ದುಃಖಿಸಿರುವ ಇನ್ನೊಂದು ಸಂದರ್ಭ ಇದೆ. ಕೌರವರ ಕಡೆ ಕರ್ಣನ ಸೇನಾಧಿಪತ್ಯದಲ್ಲಿ ಕುರುಕ್ಷೇತ್ರ ಯುದ್ಧ ನಡೆದಿರುತ್ತದೆ. ಕರ್ಣನಿಗೂ ಯುಧಿಷ್ಠಿರನಿಗೂ ಹೋರಾಟ ನಡೆದು ಕರ್ಣನಿಂದ ಯುಧಿಷ್ಠಿರ ಮೂರ್ಛೆ ಬರುವಂತೆ ಪೆಟ್ಟು ತಿನ್ನುತ್ತಾನೆ. ಮೂರ್ಛಿತನಾದ ಅವನನ್ನು ಶಿಬಿರಕ್ಕೆ ಒಯ್ಯುತ್ತಾರೆ. ಈ ವರ್ತಮಾನ ಎಲ್ಲಿಯೋ ಯುದ್ಧ ಮಾಡುತ್ತಿದ್ದ ಭೀಮನಿಗೆ ತಲಪುತ್ತದೆ. ಅವನು ಹೀಗನ್ನುತ್ತಾನೆ– "...ನೊಂದನೇ ಧರ್ಮಜನು. ಭಂಗಕೆ ತಂದನೇ ರಾಧೇಯನು: ಅಕಟಕಟ, ಇಂದು ಮಡಿದರೆ ಭೀಮ ಪಾರ್ಥರು..." ಇಷ್ಟೇ ಅಲ್ಲ– "...ತಾ ಮುನ್ನ ಕರ್ಣನ ಶರಹತಿಯಲೇ ಕಳಿದುದಿಲ್ಲಾ" ಎನ್ನುತ್ತ ಚಿಂತಿಸಿದ. ಮುಂದುವರಿದು "...ಹರಹರ ಮಹಾದೇವ ಎನುತ ತುದಿವೆರಳಲಿ ಅಲಿಯ ನೀರ ಮಿಡಿದು ಅಳಲಿದನು ಕಲಿ ಭೀಮ." ಈ ರೀತಿ ಭೀಕರವಾದ ಯುದ್ಧ ರಂಗದಲ್ಲಿ ಹಾಗೂ ತೀವ್ರವಾದ ಯುದ್ಧ ನಡೆಯುತ್ತಿದ್ದ ಸಂದರ್ಭದಲ್ಲಿ ಅಣ್ಣನಿಗಾದ ದುರವಸ್ಥೆಯನ್ನು ಕೇಳಿ ಭೀಮ ಕಣ್ಣಿನಲ್ಲಿ ನೀರು ತಂದುಕೊಂಡನೆಂಬುದು ಅವನ ಹೃದಯದ ಪಕ್ವತೆಗೆ ಸಾಕ್ಷಿ: ಅವನ ದುಃಖ ಎಷ್ಟು ಸಹಜವಾಗಿತ್ತು? ಯಾರಾದರೂ ನೋಡಲಿ ಎನ್ನುವದಕ್ಕಲ್ಲವೆ ತಾನು ಅಳುವದನ್ನು ಶತ್ರುಗಳು ನೋಡಿ ನಕ್ಕಾರು ಎಂಬ ಪ್ರಜ್ಞೆಯೂ ಇಲ್ಲದಂತೆ ಅವನು ಅಳುತ್ತಾನೆ. ತಾನಿದ್ದೂ ಅಣ್ಣನ ನೆರವಿಗೆ ಒದಗದೆ ಹೋದೆನಲ್ಲಾ ಎನ್ನುವದಕ್ಕಾಗಿ ಅಳುತ್ತಾನೆ. ಅವನ ದುಃಖ ಅವನ ಹೃದಯಾಂತರಾಳದಿಂದ ಬಂದುದು ಎನ್ನುವದಕ್ಕೆ ಅನಂತರದ ಅವನ ವರ್ತನೆ ಸಾಕ್ಷಿ ನೀಡುತ್ತದೆ. ವೀರನ ದುಃಖ ಕ್ರೋಧವಾಗಿ

ಮಾರ್ಪಡುವುದು ಸಹಜ. ಭೀಮ ತನ್ನ ಅಣ್ಣನನ್ನು ಹೊಡೆದ ಕರ್ಣನನ್ನು ಹುಡುಕಿಕೊಂಡು ಹೋಗುತ್ತಾನೆ. ಕ್ರುದ್ಧನಾಗಿ ತನ್ನೆಡೆಗೆ ಬರುತ್ತಿರುವ ಭೀಮನನ್ನು ಕಂಡು ಕರ್ಣ ಅವನ ಮೇಲೆ ಕ್ರೂರವಾದ ಬಾಣಗಳನ್ನು ಬಿಡುತ್ತಾನೆ. ಕರ್ಣನೊಂದಿಗೆ ಲೆಕ್ಕಾಚಾರದ ಪ್ರಕಾರ ಎನ್ನುವಂತೆ ಬಿಲ್ಲಿನಲ್ಲಿ ಯುದ್ಧ ಮಾಡುವಷ್ಟು ವ್ಯವಧಾನ ಭೀಮನಲ್ಲಿಲ್ಲ. ಅವನು ರೋಷದಿಂದ ಮೈ ಮರೆತಿದ್ದಾನೆ. ಕರ್ಣನ ಬಾಣಗಳನ್ನು ಲೆಕ್ಕಿಸದೆ, ಅರ್ಥಾತ್ ತನ್ನ ಪ್ರಾಣದ ಮೇಲೆ ಗಮನ ಕೊಡದೆಯೇ, ರಥದಿಂದ ಒಮ್ಮೆಗೇ ಕೆಳಗೆ ಹಾರಿ ಬಿಲ್ಲು ಬಾಣಗಳನ್ನು ಬಿಸಾಡಿ ಕತ್ತಿಯನ್ನೆತ್ತಿ ಕೊಂಡು ಮುನ್ನುಗ್ಗಿ ಕರ್ಣನ ಮುಂದಲೆಯನ್ನು ಹಿಡಿದು ರಥದಿಂದ ಎಳೆದು ಕೆಡವಿ ಅವನನ್ನು ಕೊಲ್ಲಲು ಹೋಗುತ್ತಾನೆ. ಶಲ್ಯ ಸಮಾಧಾನದ ಮಾತುಗಳ ಮೂಲಕ ಕರ್ಣನ ಜೀವವನ್ನು ಉಳಿಸುತ್ತಾನೆ. ಮಹಾರಥಿಯಾದ ಕರ್ಣನ ಮುಂದೆ ಭೀಮ ತೋರಿದ ಈ ಶೌರ್ಯ ಎಣೆ ಇಲ್ಲದ್ದು. ಈ ಶೌರ್ಯದ ಮೂಲ ಸ್ವರೂಪ ತನ್ನ ಅಣ್ಣನಿಗೆ ನೋವಾದುದರಿಂದ ಭೀಮ ಪಟ್ಟಿದ್ದ ದುಃಖ. ಅಣ್ಣನಿಗಾದ ನೋವು ತನ್ನ ಪ್ರಾಣದ ಮೇಲಿನ ಹಂಗನ್ನೇ ತೊರೆಸುವಷ್ಟರ ಮಟ್ಟಿಗೆ ಭೀಮನ

● ಅಣ್ಣನ ಮೇಲಿಟ್ಟ ಗೌರವ, ಪರಿಸ್ಥಿತಿಯ ಸೂಕ್ಷ್ಮ ವಿವೇಚನೆ, ಜವಾಬ್ದಾರಿಯುತ ಪ್ರಜ್ಞೆ ಮೊದಲಾದ ವಿಶಿಷ್ಟ ಗುಣಗಳನ್ನು ಗಮನಿಸಿದರೆ ಮಹಾಭಾರತದಲ್ಲಿ ಶ್ರೀಕೃಷ್ಣನನ್ನು ಬಿಟ್ಟರೆ ಭೀಮನೇ ಆದರ್ಶಯುತ ವ್ಯಕ್ತಿ ಎಂದು ಹೇಳಬಹುದು.

ಅಂತರಾಳವನ್ನು ಕಲಕಿತೆಂದರೆ, ಅಂತಹ ಮೃದುವಾದ, ಮಧುರವಾದ ಹೃದಯದ ಗುಣ ಒರಟು ಎಂದು ಅಪಾದಿಸುವವರ ಕುರಿತು ಏನು ಹೇಳಬಹುದು?

## ಭೀಮನಲ್ಲಿದ್ದ ಪ್ರಜ್ಞಾವಂತಿಕೆ

ಭೀಮ ಮೂಢ, ಅವಿವೇಕಿ, ಮುಂದಾಲೋಚನೆ ಇಲ್ಲದ ಜಡ್ಡು ಸ್ವಭಾವದವನು ಎನ್ನುವವರ ವಾದವನ್ನು ಅಲ್ಲಗಳೆಯಲು ಬೇಕಷ್ಟು ನಿದರ್ಶನಗಳು ಸಿಕ್ಕುತ್ತವೆ. ಪಾಂಡವರು ಎದುರಿಸಿದ ಪತ್ತಾರು ತೀವ್ರ ಸ್ವರೂಪದ ಸನ್ನಿವೇಶಗಳಲ್ಲೆಲ್ಲ ಭೀಮ ತನ್ನದೇ ಆದ ಪರಿಹಾರಗಳನ್ನು ಸೂಚಿಸಿದ್ದಾನೆ. ಅನೇಕ ಸಂದರ್ಭಗಳಲ್ಲಿ ಅವನ ಅಭಿಪ್ರಾಯವು ಯುಧಿಷ್ಠಿರನ ಅಭಿಪ್ರಾಯಕ್ಕೆ ವಿರೋಧವಾದುದಾಗಿರುತ್ತದೆ. ಸಹಜವಾಗಿ ಅಣ್ಣನ ಅಭಿಪ್ರಾಯಕ್ಕೇ ಪ್ರತಿ ಬಾರಿಯೂ ಮಾನ್ಯತೆ ಸಿಕ್ಕುತ್ತದೆ. ಭೀಮ ಶಿಸ್ತಿನ ಸಿಪಾಯಿಯಂತೆ ಅಣ್ಣನ ಅಭಿಪ್ರಾಯಕ್ಕೆ ವಿಧೇಯನಾಗಿ ನಡೆಯುತ್ತಾನೆ. ಆದರೆ ಇಷ್ಟರಿಂದಲೇ ಭೀಮನ ಅಭಿಪ್ರಾಯಗಳು ಸರಿಯಾದುವಲ್ಲವೆಂದು ಭಾವಿಸುವದು ತಪ್ಪಾಗುತ್ತದೆ. ಅಣ್ಣನ ಅಭಿಪ್ರಾಯಕ್ಕೆ ತಲೆಬಾಗುವದರಿಂದ ತೀವ್ರವಾದ ಅನಾಹುತವಾಗುತ್ತದೆ ಎಂದು ಭೀಮ ಭಾವಿಸಿದಾಗ ಒಂದೆರಡು ಬಾರಿ ಅವನು ಅಣ್ಣನನ್ನು ಮೀರಿಯೂ ವರ್ತಿಸುತ್ತಾನೆ. ಅವನ ಅಂತಹ ವರ್ತನೆಯಿಂದಾಗಿ ಪಾಂಡವರಿಗೆ ಕ್ಷೇಮ ಉಂಟಾಗುತ್ತದೆ. ಆದರೆ ಹಾಗೆ ವರ್ತಿಸುವಾಗಲೂ ಅವನು ಎಷ್ಟು ಕೌಶಲ್ಯದಿಂದ ವರ್ತಿಸುತ್ತಾನೆ: ಎಷ್ಟು ದೂರಾಲೋಚನೆ ಮಾಡುತ್ತಾನೆ ಎನ್ನುವದನ್ನು ಗಮನಿಸುವಾಗ ಅವನ ತೀಕ್ಷ್ಣವಾದ ಬುದ್ಧಿ ಶಕ್ತಿಯನ್ನು ಕಂಡು ನಾವು ಚಕಿತರಾಗುತ್ತೇವೆ. ಅಣ್ಣನಿಗೆ ವಿರೋಧ ಹೋಗಬೇಕಾಗುವ ಅತ್ಯಂತ ಸಂಕಟದ ಪರಿಸ್ಥಿತಿಯಲ್ಲಿಯೂ ಅವನು ಅಣ್ಣನ ಮೇಲಿಟ್ಟಿರುವ ಗೌರವವನ್ನೂ, ತನ್ನ ಅಂತಹ ಸ್ವತಂತ್ರ ವರ್ತನೆಯಿಂದ ತಮ್ಮ ಹಿತಕ್ಕೆ ಧಕ್ಕೆ ಏನಾದರೂ ಬಂದೀತೇ ಎಂದು ಅವನು ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ವಿವೇಚಿಸುವಾಗ ಅವನು ತೋರುವ ಅತ್ಯಂತ ಜವಾಬ್ದಾರಿಯುತ ಪ್ರಜ್ಞೆಯನ್ನೂ ಗಮನಿಸುವಾಗ ಮಹಾಭಾರತದಲ್ಲಿ ಶ್ರೀಕೃಷ್ಣನನ್ನು ಬಿಟ್ಟರೆ ಸರ್ವ ವಿಧದಲ್ಲಿಯೂ ಆದರ್ಶ ಗುಣಗಳನ್ನು ಪಡೆದ ಬೇರೊಬ್ಬ ವ್ಯಕ್ತಿ ಭೀಮನನ್ನು ಬಿಟ್ಟರೆ ಯಾರೂ ಇಲ್ಲ ಎನ್ನುವದನ್ನು ನಾವು ಕಂಡುಕೊಳ್ಳಬಹುದು. ಅಣ್ಣನ ಇಚ್ಛೆಗೆ ವಿರುದ್ಧವಾಗಿ ಹೋಗಬೇಕಾಗಿರುವ ಪರಿಸ್ಥಿತಿಯಿಂದ ಉಂಟಾದ ಉದ್ವೇಗದ ಭರದಲ್ಲಿ ಕೂಡ ಅವನು ಪರಿಸ್ಥಿತಿಯನ್ನು ಎಷ್ಟು ತಿಳಿಯಾಗಿ ವಿಮರ್ಶಿಸಬಲ್ಲನೆಂಬುದಕ್ಕೆ ಒಂದು ಉತ್ತಮ ನಿದರ್ಶನ ಕೊಡಬಹುದು.

## ತಿಳಿಯಾದ, ಚೂಪಾದ ವಿವೇಚನಾ ಶಕ್ತಿ

ಕೀಚಕನ ಕಾಮುಕ ವರ್ತನೆಯಿಂದ ತನ್ನನ್ನು ರಕ್ಷಿಸಬೇಕೆಂದು ಹಲವು ವಿಧದಲ್ಲಿ ಕೇಳಿಕೊಂಡ ದ್ರೌಪದಿಯ ಪ್ರಾರ್ಥನೆಯನ್ನು ಬಹಳ ಕಷ್ಟದಿಂದ ಭೀಮ ನಿರಾಕರಿಸುತ್ತಾನೆ. ಆದರೆ ಅವಳು ನಿರಾಶಳಾಗಿ, ಹಿಂದೆ ಹೋಗುವಂತಿಲ್ಲ. ಅವಳು ಹಿಂದೆ ಹೋದರೆ ಒಂದೋ ಕೀಚಕನ ತೆಕ್ಕೆಯೊಳಗೆ ಹೋಗಬೇಕು, ಇಲ್ಲವೇ ಸಾವಿನ ತೆಕ್ಕೆಯೊಳಗೆ ಹೋಗಬೇಕು. ಹಾಗಾಗಿ, ತಾನು ಎಷ್ಟು ವಿಧದಲ್ಲಿ ಹೇಳಿದರೂ ಭೀಮನ ಮನಸ್ಸು ಕರಗದುದರಿಂದ ಕೊನೆಯದಾಗಿ ತಾನು ಆತ್ಮಹತ್ಯೆ ಮಾಡಿಕೊಳ್ಳಲು ಆಕೆ ಅವನ ಅನುಮತಿಯನ್ನು ಕೇಳುತ್ತಾ, ತಾನು ಸತ್ತ ಅನಂತರ ಅವನು ಬೇರೊಬ್ಬಳನ್ನು ವಿವಾಹವಾಗಬಹುದೆಂದು ಸೂಚಿಸುತ್ತಾ, ತಾನು ಸತ್ತ ಮೇಲೆ ಭೀಮನು "...ಕಾಮಿನಿಯು ಕೇಳಿಯಲಿ (ತನ್ನನು) ನೆನೆವುದು: ತಾಮಸದಿ ತಾ ಮೀರಿ

ನುಡಿದ ಉದ್ದಾಮತೆಯ ಸೈರಿಸುವದು ಎಂದು ಮರುಗಿದಳು ಚರಣದಲಿ." ಭೀಮ ಈಗ ಏನು ಮಾಡಬೇಕು? "ಸಾಯಿ ಹೋಗು" ಎಂದು ದ್ರೌಪದಿಗೆ ಹೇಳುತ್ತಾನೆಯೇ? ದ್ರೌಪದಿ ಹಾಗೆ "ಎನಲು ಕಂಬನಿದುಂಬಿದನು: ಕಡು ನೆನೆದುದಂತಃಕರಣ: ರೋಷದ ಘನತೆ ಮಚ್ಚಿತು, ದಶನಗಳನು ಹಿಂಡಿದನು ಮನದೊಳಗೆ, ತನು ಪುಳಕ ಉಬ್ಬರಿಸಿ ಮೆಲ್ಲನೆ ವನಿತೆಯನು ತೆಗೆದಪ್ಪಿದನು: ಕಂಬನಿಯ ತೊಡೆದನು ಸೆರಗಿನಲಿ ಕಲಿ ಭೀಮ ಮಾನಿನಿಯ." ಅವಳ "ಕುರುಳ ನೇವರಿಸಿದನು: ಗಲ್ಲವ ನೊರಸಿ ಮುಂಡಾಡಿದನು: ಮಂಚದ ಹೊರೆಯ ಗಿಂಡಿಯ ನೀರಿನಲಿ ತೊಳೆದನು ಮುಖಾಂಬುಜವ. ಅರಸಿ, ಬಿಡು ಬಿಡು ಖಾತಿಯನು. ವಿಸ್ತರಿಸಲೇಕೆ? ಎಮ್ಮಣ್ಣನ ಆಜ್ಞೆಯ ಗಿರಿಯ ದಾಂಟಿದೆ. ದಾಂಟಿದೆನು ಹೋಗು" ಎಂದನಾ ಭೀಮ: ಒಂದೇ ಮಾತು. ಭೀಮನ ಮೇರು ಸದೃಶವಾದ ಪ್ರಚಂಡ ಕ್ರತುಶಕ್ತಿಗೆ ಈ ಪ್ರಪಂಚದ ಯಾವದೂ ಅಡ್ಡವಾಗಿ ನಿಂತಿರಲಿಲ್ಲ. ಅಣ್ಣನ ಆಜ್ಞೆ. ಅದೊಂದೇ ಹಿಮಾಲಯ ಅವನ ಮುಂದೆ ಸದಾ ಅಡ್ಡಲಾಗಿ ನಿಂತಿರುತ್ತಿದ್ದುದು. ಅದನ್ನು ಅವನು ದಾಟಿದನೆಂದರೆ ಮೂರು ಲೋಕವೂ ಅವನಿಗೆ ಲೀಲಾ ಮಾತ್ರವಾಗಿದ್ದ ನಿರಾತಂಕವಾದ ಕಾರ್ಯ ಕ್ಷೇತ್ರವಾಗುತ್ತಿತ್ತು. ಈಗ, ನಿರಪರಾಧಿಯಾದ ಅಬಲೆಯಾದ, ತನ್ನ ರಕ್ಷಣೆಗೆ ನ್ಯಾಯವಾಗಿ ಒಳಗಾಗಿದ್ದ ತನ್ನ ಪತ್ನಿಯ ಮಾನ, ಪ್ರಾಣಗಳನ್ನು ಕಾಪಾಡಲೇಬೇಕಾದಾಗ ಅವನು ಅದಕ್ಕಾಗಿ, ಆ ಕರ್ತವ್ಯ ನಿರ್ವಹಣೆಗಾಗಿ, ಆ ನ್ಯಾಯದಾನಕ್ಕಾಗಿ, ಆ ದುಷ್ಟ ಶಿಕ್ಷೆಗಾಗಿ ಅಣ್ಣನ ಆಜ್ಞೆಯ ಗಿರಿಯನ್ನು ದಾಟಿ ನಿಂತಿದ್ದಾನೆ. ಸರಿ. ಹಾಗೆಂದರೆ ಅವನು ಮಾಡುತ್ತಿರುವ ಕಾರ್ಯ ದ್ರೌಪದಿಯ ದೃಷ್ಟಿಯಿಂದ ಅವಶ್ಯ ಎನಿಸಬಹುದಾದರೂ ಅದರಿಂದ ಪಾಂಡವರ ಇತರ ಹಿತಗಳಿಗೆ ತೀವ್ರವಾಗಿ ಧಕ್ಕೆಯಾಗುವದಿಲ್ಲವೆ? ಆ ರೀತಿ ಹಿತಗಳಿಗೆ ಧಕ್ಕೆಯಾಗಬಾರದು ಎನ್ನುವದಕ್ಕಾಗಿಯೇ ಅಲ್ಲವೆ ಯುಧಿಷ್ಠಿರ-ಅರ್ಜುನ ಮೊದಲಾದವರು ದ್ರೌಪದಿಯ ದುರವಸ್ಥೆಯನ್ನು ನೋಡಿಯೂ ನೋಡದಂತಿದ್ದುದು? ಹೌದು. ಭೀಮನಿಗೂ ಆ ವಿಷಯ ತಿಳಿಯದೇ ಇಲ್ಲ. ತಮ್ಮ ಯಾವ ಹಿತಕ್ಕೆ ಏನೇನು ಧಕ್ಕೆಯಾದೀತು ಎನ್ನುವದನ್ನು ಅವನು ಎಳೆ ಎಳೆಯಾಗಿ ವಿಮರ್ಶಿಸಿದ್ದಾನೆ. ಅದಕ್ಕೆಲ್ಲ ಪರಿಹಾರವನ್ನು ಕಂಡುಕೊಂಡೇ ಅವನು ಇಂತಹ ಕಠಿಣವಾದ ನಿರ್ಧಾರವನ್ನು ಕೈಗೊಂಡಿರುವದು. ಅವನು ಲೆಕ್ಕ ಹಾಕುತ್ತಾನೆ. ತನ್ನ ನಿರ್ಧಾರದ ಪ್ರಕಾರ ತಾನು ಕೀಚಕನನ್ನು ಕೊಂದರೆ ಏನಾಗುತ್ತದೆ? ಅವನ ಭಾವನಾದ ವಿರಾಟ ಮೊದಲಾದವರು ತನ್ನ ಮೇಲೆ ಕೈ ಮಾಡುತ್ತಾರೆ. ಅವರ ವಂಶವನ್ನು ತಾನು ನಿರ್ಮೂಲ ಮಾಡುತ್ತೇನೆ. ಹಾಗೆ ಮಾಡುವದರಿಂದ ನಾವು ಇಲ್ಲಿದ್ದೇವೆಂದು ಕೌರವರಿಗೆ ತಿಳಿದು ಅವರು ನಮ್ಮ ಅಜ್ಞಾತವಾಸ ವ್ರತ ಭಂಗಕ್ಕಾಗಿ ನಮ್ಮನ್ನು ಪುನಃ ಅರಣ್ಯಕ್ಕೆ ಕಳುಹಿಸಲು ಹೇಳಬಹುದು. ಅವರು ಹಾಗೆ ಹೇಳುವ ಮುಂಚೆ ಕೌರವ ವಂಶವನ್ನು ನಾಶ ಮಾಡುತ್ತೇನೆ. ಇಲ್ಲಿ ನೀತಿ ಅನೀತಿಯ ಪ್ರಶ್ನೆ ಬರಬಹುದು. ತಾವು ದ್ಯೂತದ ಸಂದರ್ಭದಲ್ಲಿ ಒಪ್ಪಿದ ಶರತ್ತಿಗೆ ತಪ್ಪಿದ ಅನೀತಿಯನ್ನು ಎಸಗಿದ್ದೇವೆ ಎಂದು ಹೇಳಬಹುದು. ಯಾರು ಹೇಳುವವರು? ನೀತಿ ಅನೀತಿಗಳನ್ನು ತೀರ್ಮಾನ ಮಾಡುವ ದೇವತೆಗಳು. ಅವರೇನಾದರೂ ಹೀಗೆ ಹೇಳಲು ಬಂದರೆ "...ಮುಸುಡನು ಅಮರಾದ್ರಿಯಲಿ ತೇವೆನು ದೇವ ಸಂತತಿಯ." ಇಲ್ಲಿಗೇ ಇದು ಮುಗಿಯಲಾರದು. ತಾನು ಹೀಗೆಲ್ಲ ಮಾಡಿದುದು ತಪ್ಪು ಎಂದು ಹೇಳುವ ಒಂದು ವ್ಯಕ್ತಿ ಇದೆ. ಅದು ಯಥಾಪ್ರಕಾರ ತನ್ನ ಅಣ್ಣ. ಅಣ್ಣ ಹಾಗೇನಾದರೂ ಹೇಳಿದರೆ— "...ಅಣ್ಣತನ ಇಂದಿನಲಿ ಹರಿಯಲಿ". ಇದಕ್ಕಾಗಿ ಅರ್ಜುನ, ನಕುಲ, ಸಹದೇವ ಹಾ ಹೂ ಎನ್ನಬಹುದು. ಅವರಿಗೆ ಎರಡು ತಟ್ಟಿ ಕೂರಿಸುತ್ತೇನೆ. ಕೊನೆಯಲ್ಲಿ ಬರುವವನು ನಮ್ಮ ಹಿತೈಷಿಯಾದ ಕೃಷ್ಣ. ಅವನೇನಾದರೂ "ನೀನು

---

● ಭೀಮನ ಮೇರು ಸದೃಶವಾದ ಪ್ರಚಂಡ ಕ್ರತು ಶಕ್ತಿಗೆ ಈ ಪ್ರಪಂಚದ ಬೇರೆ ಯಾವದೂ ಅಡ್ಡ ನಿಲ್ಲಲು ಸಾಧ್ಯವಿರಲಿಲ್ಲ. ಅಡ್ಡಲಾಗಿದ್ದುದು ಒಂದೇ ಒಂದು—ಅಣ್ಣನ ಆಜ್ಞೆ.

---

● ಶಿವನಲ್ಲಿ ಕೇವಲ ಶಬರನನ್ನು ಶಿವೋಪಾಸಕನಾಗಿದ್ದ ಅರ್ಜುನ ಕಂಡ. -ಕಪಿಯಲ್ಲಿ ಅಮಾನುಷತೆಯನ್ನು ಉತ್ಸಾಹದ ಭರದಲ್ಲಿದ್ದ ಭೀಮ ಕಂಡ.

ಮಾಡಿದುದು ತಪ್ಪು ಭೀಮಾ" ಎಂದರೆ "ಹೋಗಯ್ಯಾ" ಎನ್ನುತ್ತೇನೆ. ಇಷ್ಟೇ ತಾನೇ ಆದೀತು? ಸರಿ, ಮತ್ತೆ "... ತರಿವೆನು ಕೀಚಕಾನ್ವಯವ". ಭೀಮನ ಮುಂದಾಲೋಚನೆಗೆ ಇದು ನಿದರ್ಶನ, ಹಾಗೆಂದರೆ ಅವನು ಹೇಳಿದಂತೆಲ್ಲ ಮಾಡಲು ಸಮರ್ಥನೆ ಎಂದರೆ, ಅದು ಅವನ ಕಾರ್ಯಕ್ರಮ. ಹೀಗೆ ಮಾಡುವದರಿಂದ ಹಾಗಾಗುತ್ತದೆ. ಆಗ ಹೀಗೆ ಮಾಡುತ್ತೇನೆ. ಆದರಿಂದ ಇದು ಹೀಗಾಗಬಹುದು. ಆಗ ಹೀಗೆ ಮಾಡುತ್ತೇನೆ – ಎಂದು ಲೆಕ್ಕಾಚಾರ ಹಾಕುವದು ಪ್ರಜ್ಞಾವಂತಿಕೆಯ ಲಕ್ಷಣ. ಮನುಷ್ಯ ಹಾಕಿಕೊಂಡ ಕಾರ್ಯಕ್ರಮಗಳಲ್ಲಿ ಎಷ್ಟು ನಡೆಯುತ್ತವೆ, ಎಷ್ಟು ನಡೆಯುವದಿಲ್ಲ ಎನ್ನುವದಕ್ಕೆ ಮನುಷ್ಯ ಜವಾಬ್ದಾರನಲ್ಲ. ಭೀಮ ಈಗ ಕೀಚಕನನ್ನು ಕೊಲ್ಲದೆ, ದ್ರೌಪದಿಯ ಮಾನ, ಪ್ರಾಣಗಳನ್ನು ಉಳಿಸದೆ ನಿರ್ವಾಹವೇ ಇಲ್ಲ. ಅದನ್ನು ಅವನು ಅಣ್ಣನ ಇಚ್ಛೆಗೆ ವಿರೋಧವಾಗಿ ತನ್ನ ಸ್ವಂತ ಜವಾಬ್ದಾರಿಕೆಯಿಂದ ನಿರ್ವಹಿಸಲು ಹೊರಟಿದ್ದಾನೆ. ತಾನು ಹೀಗೆ ಮಾಡುವದರಿಂದಾಗಿ ತನ್ನ ಸೋದರರಿಗೆ ಕೇಡು ಬರದಂತೆ ಸಾಧ್ಯವಾದಷ್ಟು ಪ್ರಯತ್ನಿಸಬೇಕು ಎನ್ನುವದು ಅವನ ಜವಾಬ್ದಾರಿಕೆಯ ನಿರ್ವಹಣೆಯ ಗುಣದ ಪರಿಣಾಮ, ಆ ಕುರಿತೂ ಅವನು ಗಮನ ಹರಿಸಿದ್ದಾನೆ. "ಅಣ್ಣನಿಗೆ ವಿರೋಧ ಹೋಗುತ್ತೇನೆ. ಆಗುವದೆಲ್ಲ ಆಗಲಿ: ನಾನೇನು ಮಾಡಲು ಸಾಧ್ಯ? ಈಗ ನಿನ್ನನ್ನು ರಕ್ಷಿಸುವದು ನನ್ನ ಕೆಲಸ. ಅದನ್ನು ಮಾಡುವಾಗ ಬೇರೆ ದುಷ್ಪರಿಣಾಮ ಉಂಟಾದರೆ ನಾನೇನು ಮಾಡಲಿ" ಎನ್ನುವ ಜವಾಬ್ದಾರಿರಹಿತ ವ್ಯಕ್ತಿ ಭೀಮನಲ್ಲ. ಇಂತಹ ಸಂದಿಗ್ಧ ಪರಿಸ್ಥಿತಿಗಳಲ್ಲಿ ಕೂಡ ಇಷ್ಟೊಂದು ಮುಂದಾಲೋಚನೆ ಮಾಡುವ ಒಬ್ಬಾತನನ್ನು ಅವಿವೇಕಿ, ಮೂಢ ಎಂದು ಕರೆಯುವ ವಿಮರ್ಶ ಜ್ಞಾನವನ್ನು ಏನೆಂದು ಹೇಳಬಹುದು!

ಭೀಮನ ಪ್ರಜ್ಞಾವಂತಿಕೆಗೆ ಇನ್ನೊಂದು ಉತ್ತಮ ನಿದರ್ಶನ ಸಿಕ್ಕುತ್ತದೆ. ನರ ಋಷಿಯ ಅವತಾರವೆಂದೂ, ಆದುದರಿಂದ ಅತ್ಯಂತ ವಿಕಾಸಗೊಂಡ ಚೇತನವನ್ನು ಒಳಗೊಂಡವನೆಂದೂ ಹೆಸರಾದ ಅರ್ಜುನನೂ, ದುರಹಂಕಾರಿಯೆಂದೂ, ತನ್ನ ಬಗೆಗೆ ಬಡಾಯಿ ಕೊಚ್ಚಿಕೊಳ್ಳುವ ಸ್ವಪ್ರತಿಷ್ಠೆಯ ಪ್ರತೀಕನಾದವನೆಂದೂ ಹೆಸರಾದ ಭೀಮನೂ ಸುಮಾರಾಗಿ ಒಂದೇ ವಿಧದ ಸನ್ನಿವೇಶದಲ್ಲಿ ಬೇರೆ ಬೇರೆ ಕಾಲಗಳಲ್ಲಿ ಸಿಕ್ಕಿಕೊಳ್ಳುತ್ತಾರೆ. ಆಗ ಅವರಿಬ್ಬರೂ ಯಾವ ರೀತಿ ನಡೆದುಕೊಂಡರೆನ್ನುವದನ್ನು ನೋಡಿದರೆ ಅವರಿಬ್ಬರಲ್ಲಿ ಪ್ರತಿಯೊಬ್ಬನ ವ್ಯಕ್ತಿತ್ವದ ಯಥಾವತ್ ದರ್ಶನ ನಮಗಾಗುತ್ತದೆ. ಅರ್ಜುನನು ಎದುರಿಸಿದ ಸನ್ನಿವೇಶ ಇದು. ಪಾಂಡವರ ವನವಾಸ ಕಾಲದಲ್ಲಿ ವೇದವ್ಯಾಸರು ಬಂದು ಅವರನ್ನು ಕಂಡು ಅರ್ಜುನನು ಕೈಲಾಸ ಪರ್ವತ ಸಮೀಪದಲ್ಲಿರುವ ಇಂದ್ರಕೀಲದಲ್ಲಿ ಶಿವನನ್ನು ಕುರಿತು ತಪಸ್ಸು ಮಾಡಿ ಅವನಿಂದಲೂ ಇತರ ದೇವತೆಗಳಿಂದಲೂ ಅನುಪಮವಾದ ಅಸ್ತ್ರಗಳನ್ನು ಪಡೆಯಬೇಕೆಂದು ಸಲಹೆ ಮಾಡಿ ಅರ್ಜುನನು ತಪಸ್ಸಿನ ಅವಧಿಯಲ್ಲಿ ಮಾಯೆಯಲ್ಲಿ ಸಿಕ್ಕಿಕೊಳ್ಳಕೂಡದೆಂದೂ ಅಹಂಕಾರ ಪಡಕೂಡದೆಂದೂ ಅವನಿಗೆ ಬುದ್ಧಿ ಹೇಳಿ ಹಿಂದಿರುಗುತ್ತಾರೆ. ಅವನ ಸಲಹೆಯನ್ನನುಸರಿಸಿ ಅರ್ಜುನನು ತಪಸ್ಸಿಗೆ ಹೋಗುತ್ತಾನೆ. ಶುದ್ಧ ಸಾತ್ವಿಕ ಭಕ್ತಿಯನ್ನು ಹೃದಯದಲ್ಲಿ ತುಂಬಿಕೊಂಡು ಕೊನೆಯಲ್ಲಿ ಕೇವಲ ಗಾಳಿಯನ್ನಷ್ಟೇ ಆಹಾರವಾಗಿ ಸ್ವೀಕರಿಸಿ ಕಠಿಣವಾದ ತಪಸ್ಸು ಮಾಡುತ್ತಾನೆ. ಭಕ್ತನೊಡನೆ ವಿನೋದವೆಸಗುವದಕ್ಕಾಗಿ ಶಿವನು ಶಬರನಂತೆ ವೇಷ ಧರಿಸಿ ಇಂದ್ರಕೀಲಕ್ಕೆ ಬಂದು ಒಂದು ಹಂದಿಯನ್ನು ಹೊಡೆಯುತ್ತಾನೆ. ಹಂದಿ ನುಗ್ಗಿ ಬರುವ ರಭಸಕ್ಕೆ ಕಣ್ಣು ತೆರೆದ ಅರ್ಜುನನೂ ಅದಕ್ಕೆ ಹೊಡೆಯುತ್ತಾನೆ. ಇಬ್ಬರಿಗೂ ಕಾಳಗ ಪ್ರಾರಂಭವಾಗುತ್ತದೆ. ಅರ್ಜುನನ ದಿವ್ಯಾಸ್ತ್ರಗಳೆಲ್ಲವನ್ನೂ ಶಬರ ಸುಲಭವಾಗಿ [illegible] ಮಾಡಿ ನಗುತ್ತಾನೆ. ಶಬರನು ಸಾಮಾನ್ಯನಲ್ಲ

ಎನ್ನುವ ಪ್ರಜ್ಞೆ ಅರ್ಜುನನಿಗೆ ಬರಬೇಕಿತ್ತು. ಬರಲಿಲ್ಲ. ಅಗ್ನಿದತ್ತವಾದ ಅರ್ಜುನನ ಅಕ್ಷಯ ಬತ್ತಳಿಕೆ ಈಗ ಬರಿದಾಗುತ್ತದೆ. ಆಗಲೂ ಅರ್ಜುನನಿಗೆ ಪ್ರಜ್ಞೆ ಬರಲಿಲ್ಲ. ಬಾಣಗಳು ಮುಗಿದುದರಿಂದ ಗಾಂಡೀವದಿಂದಲೇ ಅರ್ಜುನನು ಶಬರನನ್ನು ಅಪ್ಪಳಿಸುತ್ತಾನೆ. ಶಬರ ಆ ಗಾಂಡೀವವನ್ನೇ ಸರಾಗವಾಗಿ ಕಿತ್ತುಕೊಳ್ಳುತ್ತಾನೆ. ಆಗಲೂ ಅರ್ಜುನನಿಗೆ ಪ್ರಜ್ಞೆ ಬರಲಿಲ್ಲ. ಕತ್ತಿಯಿಂದ ಹೊಡೆಯುತ್ತಾನೆ. ಕತ್ತಿಯ ಹಿಡಿ ಮಾತ್ರ ಅವನ ಕೈಯಲ್ಲಿ ಉಳಿಯುತ್ತದೆ. ಆದರೂ ಅವನಿಗೆ ಪ್ರಜ್ಞೆ ಬರಲಿಲ್ಲ. ಕೊನೆಗೆ ಶಬರನೊಂದಿಗೆ ಕುಸ್ತಿ ಮಾಡಿ ಹಣ್ಣಾಗುತ್ತಾನೆ. ಆದರೂ ಪ್ರಜ್ಞೆ ಬರಲಿಲ್ಲ. ಶಿವಲಿಂಗಕ್ಕೆ ಪೂಜೆ ಮಾಡಿ ಪುನಃ ಕುಸ್ತಿಗೆ ಹೋಗುತ್ತಾನೆ. ತಾನು ಲಿಂಗಕ್ಕೆ ಪೂಜೆ ಮಾಡಿದ ಹೂವು ಶಬರನ ತಲೆಯ ಮೇಲೆ ಕಾಣಿಸುತ್ತದೆ. ಆದರೂ ಅರ್ಜುನನಿಗೆ ಪ್ರಜ್ಞೆ ಬರಲಿಲ್ಲ. ಪುನಃ ಪೂಜೆ ಮಾಡಿ ಪರೀಕ್ಷಿಸುತ್ತಾನೆ. ಪುನಃ ಲಿಂಗದ ಹೂವು ಶಬರನ ಮೇಲೆ ಕಾಣಿಸಿಕೊಳ್ಳುತ್ತದೆ. ಆಗ ಅವನಿಗೆ ಅರ್ಥವಾಗುತ್ತದೆ: ಲಿಂಗಾಂತರ್ಯಾಮಿಯಾದ ಶಿವನೇ ಶಬರ ಎಂದು. ಶಿವನನ್ನು ಕುರಿತು ದೀರ್ಘಕಾಲ ತಪಸ್ಸು ಮಾಡಿ ಕೇವಲ ಸಾತ್ವಿಕ ಪ್ರಜ್ಞೆಯನ್ನು ಬೆಳೆಸಿಕೊಂಡು ಕಣ್ಣು ಬಿಟ್ಟಲ್ಲಿ ಎಲ್ಲ ಶಿವನನ್ನು ಕಾಣಬೇಕಾದ ಮನೋಭಾವವಿರಬೇಕಾದ ಅರ್ಜುನನಿಗೆ ಸಾಕ್ಷಾತ್ ಶಿವನೇ ಎದುರಿನಲ್ಲಿ ನಿಂತಿದ್ದರೂ ಆ ಶಿವನು ತನ್ನ ದೈವತ್ವವನ್ನು ಹಲವು ವಿಧದಲ್ಲಿ ಪ್ರಕಟಿಸುತ್ತಿದ್ದರೂ ಅವನನ್ನು ಗುರುತಿಸಲಾರದಷ್ಟು ಜಡತೆ ತುಂಬಿತ್ತು, ಅಹಂಕಾರ ತುಂಬಿತ್ತು, ತಮಸ್ಸು ತುಂಬಿತ್ತು ಎನ್ನುವುದನ್ನು ಯಾವ ವಿಮರ್ಶಕರು ಅಲ್ಲಗಳೆಯಲು ಸಾಧ್ಯ! ಇಂತಹುದೇ ಸಂದರ್ಭವನ್ನು ಎದುರಿಸಬೇಕಾಗಿ ಬಂದ ಭೀಮನ ಅಂತಶ್ಚೇತನದ ಔನ್ನತ್ಯವನ್ನು ನಾವೀಗ ನೋಡಬಹುದು.

ಪಾಂಡವರು ಅರಣ್ಯವಾಸದಲ್ಲಿದ್ದಾಗ ದ್ರೌಪದಿ ಒಂದು ವಿಶಿಷ್ಟ ಕಮಲ ಪುಷ್ಪದ ಸುವಾಸನೆಗೆ ಮನಸೋತು ಆ ಪುಷ್ಪವನ್ನು ತನಗೆ ತಂದು ಕೊಡಬೇಕೆಂದು ಭೀಮನಲ್ಲಿ ಪ್ರಾರ್ಥಿಸುತ್ತಾಳೆ.

ಭೀಮ ಲಗುಬಗೆಯಿಂದ ಹೊರಡುತ್ತಾನೆ. ಹೀಗೆ ಹೋಗುವಾಗ ಅವನ ಮನೋಭಾವ ಅರ್ಜುನನಿಗೆ ಇದ್ದಂತೆ ಸಾತ್ತ್ವಿಕ ಪ್ರಧಾನವಾದುದಾಗಿರದೆ ರಜೋಗುಣ ಪ್ರಧಾನವಾದುದಾಗಿರುತ್ತದೆ. ವನ್ಯ ಮೃಗಗಳನ್ನು ವಿನೋದದಿಂದ ಕೊಲ್ಲುತ್ತಾ, ಗರ್ಜನೆಯಿಂದ ಓಡಿಸುತ್ತಾ, ಬೇಟೆಯಾಡುವ ಉತ್ಸಾಹದಿಂದ ಮುಂದುವರಿಯುತ್ತಾನೆ. ದಾರಿಯಲ್ಲಿ ಒಂದು ಕಪಿ ಇವನ ಪೂರ್ವಾಪರವನ್ನು ವಿಚಾರಿಸುತ್ತದೆ. ಭೀಮ ಇದ್ದುದನ್ನು ಇದ್ದಂತೆ ಹೇಳುತ್ತಾನೆ. ದುರಹಂಕಾರದಿಂದ ಕಪಿಯೊಂದು ಅವನ್ನು ಕಡೆಗಣಿಸುವದಿಲ್ಲ. ಭೀಮ ಮುಂದೆ ಹೊರಡುವಾಗ ವಾನರನ ಬಾಲ ಇವನಿಗೆ ಅಡ್ಡವಾಗುತ್ತದೆ. ಅದನ್ನು ಸರಿಸಲು ತನ್ನ ವೃದ್ಧಾಪ್ಯದಿಂದಾಗಿ ತಾನು ಅಸಮರ್ಥನೆಂದು ವಾನರ ಹೇಳಿದಾಗ ಭೀಮ ಅಷ್ಟಕ್ಕೂ ದುರಹಂಕಾರ ತೋರಿಸದೆ ಅದನ್ನು ಗದೆಯಿಂದ ತಿವಿಯುತ್ತಾನೆ. ಬಾಲ ಅಲ್ಲಾಡುವದಿಲ್ಲ. ಕೈಗಳೆರಡರಿಂದಲೂ ಬಾಲವನ್ನು ಎತ್ತುತ್ತಾನೆ. ಅದು ಮಿಸುಕುವದಿಲ್ಲ. ಭೀಮನಿಗೆ ಆಶ್ಚರ್ಯವಾಗುತ್ತದೆ. ತಾಂಬೂಲವನ್ನು ಜಗಿದು ಔಡೊತ್ತಿ ತನ್ನ ಎಲ್ಲ ಶಕ್ತಿಯನ್ನೂ ಪ್ರಯೋಗಿಸಿ ಬಾಲವನ್ನು ಎತ್ತಲು ಪ್ರಯತ್ನಿಸುತ್ತಾನೆ. ಅದು ಅಲ್ಲಾಡುವದಿಲ್ಲ. ಭೀಮನ ಪ್ರಜ್ಞೆ ಚುರುಕಾಗುತ್ತದೆ "... ನೀನು ಅಸ್ಖಲಿತ ಬಲ, ನೀನಾರು? ತಿಳಿಯಹೇಳು, ಮಹಾತ್ಮ ಕಪಿ ನೀನು," ಎನ್ನುತ್ತಾ ಅವನು ವಾನರನಿಗೆ ಕೈ ಮುಗಿಯುತ್ತಾನೆ. ವಾನರನು ತಾನು ಅಂಜನೇಯನೆಂದೂ, ಭೀಮನ ತಂದೆಯಾದ ವಾಯುವೇ ತನ್ನ ತಂದೆಯೆಂದೂ ತಾವು ಸಹೋದರರೆಂದೂ ತಿಳಿಸುತ್ತಾನೆ. ಭೀಮ ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾನೆ.

ಅರ್ಜುನನು ಶಿವನನ್ನು ಎದುರಿಸಿ ಅವನ ದೈವಿಕ ಗುಣಗಳನ್ನು ಕಂಡೂ ಅವನ ದೈವತ್ವವನ್ನು ಅರಿಯಲಾರದೆ ತನ್ನ ಸಾಮರ್ಥ್ಯದ ಬಗೆಗೆ ಇರಿಸಿಕೊಂಡಿದ್ದ ಅಹಂಕಾರ ಭಾವವನ್ನು, ಭೀಮನ ಇಲ್ಲಿನ ವರ್ತನೆಗೆ ಹೋಲಿಸಲೇಬೇಕಾಗುತ್ತದೆ. ಒಂದು ಕಾಡು ಕಪಿ ತನ್ನ ದೇಹಬಲವನ್ನು ನಿಷ್ಪ್ರಯೋಜಕಗೊಳಿಸಿದ ತಕ್ಷಣ ಭೀಮನಿಗೆ ಅದು ಸಾಮಾನ್ಯ ಕಪಿಯಲ್ಲ ಎನ್ನುವ ಪ್ರಜ್ಞೆ ಮೂಡುತ್ತದೆ. ವಿಮರ್ಶಕರು ಹೇಳುವಂತೆ ಭೀಮನು ಮೂಢನೂ, ಅವಿವೇಕಿಯೂ, ಜಡನೂ ಆಗಿದ್ದರೆ ಅವನು ಈ ರೀತಿ ವರ್ತಿಸಲು ಸಾಧ್ಯವಿತ್ತು ಎಂದು ಹೇಳಬಹುದೆ? ಅರ್ಜುನನು ನರ ಋಷಿಯ ಅವತಾರವೆಂದೂ, ಶ್ರೀಕೃಷ್ಣನ ಪರಮ ಸಖನೆಂದೂ, ತುಂಬ ಸುಸಂಸ್ಕೃತ ಪ್ರವೃತ್ತಿಗಳವನೆಂದೂ ಹೇಳಲ್ಪಡುವದಕ್ಕೆ ಅನುಗುಣವಾದ ಅವನ ವರ್ತನೆಗೆ ಭೀಮನ ವರ್ತನೆಯನ್ನು ಹೋಲಿಸಿದರೆ ಭೀಮನ ಮನಃಪ್ರವೃತ್ತಿಯನ್ನು ಇನ್ನು ಯಾವ ವಿಶೇಷಣಗಳಿಂದ ಕರೆಯಬೇಕು?

## ಪರಾಕ್ರಮದಲ್ಲಿ ಭೀಮನ ಮಟ್ಟ

ಇನ್ನು ಪರಾಕ್ರಮದಲ್ಲಿ ಅರ್ಜುನನು ಮೂರು ಲೋಕದ ಗಂಡನೆಂದೂ, ಶಿವನಿಂದ ಪಾಶುಪತಾಸ್ತ್ರ ಪಡೆದ ವೀರನೆಂದೂ, ಇಂದ್ರನ ಅರ್ಧ ಸಿಂಹಾಸನದಲ್ಲಿ ಕುಳಿತ ಪರಾಕ್ರಮಿ ಎಂದೂ ಪಾಂಡವರ ಕಡೆ ಇದ್ದ ಅಸಮಾನ ಶೂರನೆಂದೂ, ಕೌರವ ಬಲವೆಲ್ಲವನ್ನೂ ಗೋಗ್ರಹಣ ಕಾಲದಲ್ಲಿ ಏಕಾಕಿಯಾಗಿ ಗೆದ್ದವನೆಂದೂ, ಕೌರವ ಬಲದ ಮಹಾ ವೀರರಾದ ಭೀಷ್ಮ, ದ್ರೋಣ, ಕರ್ಣರನ್ನು ಎದುರಿಸಲು ಸಮರ್ಥನಾದ ಏಕಮಾತ್ರ ಪಾಂಡವ ವೀರನೆಂದೂ ಹೆಸರು ಪಡೆದಿದ್ದಾನೆ. ಆದರೆ ಅವನು ಎದುರಿಸಿದ ಯುದ್ಧಗಳನ್ನೆಲ್ಲ ವಿಮರ್ಶಿಸಿದರೆ ಅವನು ಯಾವ ಒಬ್ಬ ಹೆಸರಾಂತ ವೀರನನ್ನೂ ಸ್ವಸಾಮರ್ಥ್ಯದಿಂದ ಗೆದ್ದಿಲ್ಲ ಎನ್ನುವದು ತಿಳಿಯುತ್ತದೆ. ಇದಕ್ಕೆ ಪ್ರತಿಯಾಗಿ ಕುರುಕ್ಷೇತ್ರ ಯುದ್ಧದಲ್ಲಿ ಕುರು ಸೇನೆಯನ್ನು ದಿಕ್ಕೆಡಿಸುವ ಒಬ್ಬ ಪಾಂಡವ ವೀರ ಯಾರಾದರೂ ಇದ್ದರೆ ಅದು ಭೀಮ ಮಾತ್ರ ಎನ್ನುವದೂ ಗೋಚರವಾಗುತ್ತದೆ. ಭೀಮ

● ಕುರುಕ್ಷೇತ್ರ ಯುದ್ಧದಲ್ಲಿ ಕುರು ಸೇನೆಯನ್ನು ದಿಕ್ಕೆಡಿಸಿದ ಒಬ್ಬ ಪಾಂಡವ ವೀರ ಯಾರಾದರೂ ಇದ್ದರೆ ಅದು ಭೀಮ ಮಾತ್ರ.

ಸ್ವಸಾಮರ್ಥ್ಯದಿಂದ ಕೊಂದ ಅಸಂಖ್ಯಾತ ಕೌರವ ವೀರರ ಹೆಸರು ಬೇಡ.

ಕೌರವ ಪಾಳೆಯದಲ್ಲಿದ್ದ ಅಜೇಯ ವೀರರೆಂದರೆ ಭೀಷ್ಮ, ದ್ರೋಣ, ಕರ್ಣರು. ಶಲ್ಯ ಮತ್ತು ಭೀಮರು ಸಮಬಲರೆಂದು ಆ ಹಿಂದೆಯೇ ಪ್ರಸಿದ್ಧಿಯಾಗಿತ್ತು. ಈ ಮೂವರ ಪೈಕಿ ಭೀಷ್ಮನೊಬ್ಬನನ್ನು ಅವನ ಇಡೀ ಜೀವಿತ ಕಾಲದಲ್ಲಿ ಯಾರೂ ಸೋಲಿಸಲಿಲ್ಲ. ಅವನ ವಿದ್ಯಾ ಗುರುವಾದ ಪರಶುರಾಮನೇ ಭೀಷ್ಮನನ್ನು ಸೋಲಿಸಲು ಸಾಧ್ಯವಾಗಿಲ್ಲ. ಭೀಷ್ಮ ಸಾವನ್ನು ಸ್ವೀಕರಿಸಲು ಸಿದ್ಧನಾದುದು ಕ್ರುದ್ಧನಾಗಿ ತನ್ನ ಮೇಲೇರಿ ಬಂದ ಶ್ರೀಕೃಷ್ಣನೊಬ್ಬನಿಂದ ಮಾತ್ರ. ಹಾಗಾಗಿ ಭೀಮ, ಅರ್ಜುನ ಮೊದಲಾದ ಯಾರೂ ಭೀಷ್ಮನಿಗೆ ಸರಿಸಾಟಿಯಾಗಿ ನಿಲ್ಲಲು ಸಾಧ್ಯವಿರಲಿಲ್ಲ. ಇನ್ನುಳಿದವರ ಪೈಕಿ ಅಸಮ ಸಾಹಸಿಗಳೆಂದರೆ ದ್ರೋಣ ಮತ್ತು ಕರ್ಣ. ಇವರಿಬ್ಬರೊಡನೆ ಭೀಮಾರ್ಜುನರು ಹೇಗೆ ಯುದ್ಧ ಮಾಡಿದರು ಎನ್ನುವದನ್ನು ನೋಡಿದರೆ ಇವರ ಪೈಕಿ ಯಾರು ಎಷ್ಟು ಪರಾಕ್ರಮಿಗಳು ಎನ್ನುವದು ತಿಳಿಯುತ್ತದೆ.

ಒಂದು ಘಟನೆ, ಅಭಿಮನ್ಯುವಿನ ವಧೆಯ ಪ್ರತೀಕಾರಕ್ಕಾಗಿ ಜಯದ್ರಥನನ್ನು ಸೂರ್ಯಾಸ್ತದೊಳಗೆ ಕೊಲ್ಲುವ ಪ್ರತಿಜ್ಞೆಯನ್ನು ಅರ್ಜುನ ಮಾಡುತ್ತಾನೆ. ಜಯದ್ರಥನನ್ನು ಹೇಗಾದರೂ ಉಳಿಸುವ ಸಲುವಾಗಿ ಕೌರವ ಸೇನಾ ನಾಯಕ ದ್ರೋಣನು ತಮ್ಮ ಬಲವನ್ನು ಹಲವು ವಿಧದ ವ್ಯೂಹಗಳಲ್ಲಿ ರಚಿಸಿ ನಡುವೆ ಜಯದ್ರಥನನ್ನು ನಿಲ್ಲಿಸಿ ವ್ಯೂಹದ ಬಾಗಿಲಲ್ಲಿ ತಾನೇ ನಿಲ್ಲುತ್ತಾನೆ. ಅರ್ಜುನ ವ್ಯೂಹವನ್ನು ಹೊಗುವದಕ್ಕಾಗಿ ಬಂದು ದ್ರೋಣನನ್ನು ಎದುರಿಸುತ್ತಾನೆ. ಒಳಹೊಗಲು ದ್ರೋಣ ಅವಕಾಶ ಕೊಡುವದಿಲ್ಲ. ಆಗ ಕೃಷ್ಣನ ಸಲಹೆಯಂತೆ ಅರ್ಜುನನು ರಥ

ದಿಂದ ಇಳಿದು ದ್ರೋಣನಿಗೆ ನಮಸ್ಕರಿಸಿ ತಮ್ಮನ್ನು ಕಾಪಾಡಬೇಕೆಂದು ಕೇಳಿಕೊಳ್ಳುತ್ತಾನೆ. ದ್ರೋಣ ಅವನನ್ನು ವ್ಯೂಹದ ಒಳಗೆ ಹೋಗಲು ಬಿಟ್ಟು ಕೊಡುತ್ತಾನೆ. ಬಹಳ ಹೊತ್ತಿನವರೆಗೂ ಅರ್ಜುನನ ವರ್ತಮಾನವನ್ನು ತಿಳಿಯದೆ ದಿಗಿಲುಗೊಂಡ ಯುಧಿಷ್ಠಿರನು ಅರ್ಜುನನ ಸಮಾಚಾರವನ್ನು ಕಂಡು ತನಗೆ ತಿಳಿಸುವದಕ್ಕಾಗಿ ಸಾತ್ಯಕಿಯನ್ನು ಕಳುಹಿಸುತ್ತಾನೆ. ದ್ರೋಣನ ಸಲಹೆಯಂತೆ ಸಾತ್ಯಕಿ ಕೂಡ ಆಚಾರ್ಯನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಅವನು ಮಾಡಿಕೊಟ್ಟ ಅವಕಾಶದ ಪ್ರಕಾರ ವ್ಯೂಹದ ಒಳಗೆ ಹೋಗುತ್ತಾನೆ. ಅನಂತರವೂ ಬಹಳ ಸಮಯದವರೆಗೆ ಅರ್ಜುನ ಸಾತ್ಯಕಿಯರ ವರ್ತಮಾನ ಗೊತ್ತಾಗದೆ ಯುಧಿಷ್ಠಿರನು ಇನ್ನೂ ಕಳವಳಗೊಂಡು ಅವರ ವರ್ತಮಾನವನ್ನು ತರಬೇಬೇಕೆಂದು ನಿಯಮಿಸಿ ಭೀಮನನ್ನು ಕಳುಹಿಸುತ್ತಾನೆ. ಅರ್ಜುನ ಸಾತ್ಯಕಿಯರಂತೆ ಭೀಮನೂ ತನಗೆ ನಮಸ್ಕಾರ ಮಾಡಿ ಒಳಗೆ ಹೋಗಬಹುದೆಂದು ದ್ರೋಣ ತಿಳಿಸುತ್ತಾನೆ. ಯುದ್ಧ ರಂಗದಲ್ಲಿ ನಮಸ್ಕಾರ ಮಾಡುವ ಶರಣಾಗತಿ ಸಲ್ಲದೆಂದು ಭೀಮ ತಿಳಿಸುತ್ತಾನೆ. ಯುದ್ಧ ನಡೆಯುತ್ತದೆ. ಭೀಮನು ದ್ರೋಣನ ರಥ, ಕುದುರೆ, ಸಾರಥಿಗಳನ್ನು ಕೆಡವಿ ವ್ಯೂಹವನ್ನು ಭೇದಿಸಿಕೊಂಡು ಶತ್ರುಗಳನ್ನು ಸವರುತ್ತಾ ಮುನ್ನಡೆಯುತ್ತಾನೆ. ಯುದ್ಧ ರಂಗದಲ್ಲಿ ಅರ್ಜುನಾದಿಗಳ ಮನೋಭಾವಕ್ಕೂ ಭೀಮನದಕ್ಕೂ ಇರುವ ವ್ಯತ್ಯಾಸವನ್ನು ಇಷ್ಟರಿಂದಲೇ ತಿಳಿಯಬಹುದು. ಹೇಗಾದರೂ ಗೆದ್ದರೆ ಸಾಕೆನ್ನುವ ಮನೋಭಾವವನ್ನು ಇತರರಲ್ಲಿ ನಾವು ಗುರುತಿಸಬಹುದಾದಾಗ, ಪರಾಕ್ರಮದಿಂದಲೇ ಯುದ್ಧವನ್ನು ಗೆಲ್ಲಬೇಕೆಂಬ ಭೀಮನ ನಿಶ್ಚಯವನ್ನು ನಾವು ಕಾಣಬಹುದು. ಸಾವು ಬದುಕನ್ನು ನಿರ್ಣಯ ಮಾಡುವ ಯುದ್ಧದಂತಹ ತೀವ್ರಾವಸ್ಥೆಯಲ್ಲಿಯೂ ಕೂಡ ಭೀಮ ಪ್ರದರ್ಶಿಸುವ ಈ ಅನುಪಮ ಶೂರತನವನ್ನು ಮಹಾಭಾರತದ ವೀರರ ಪೈಕಿ ಹೆಚ್ಚಿನವರಲ್ಲಿ ನಾವು ಕಾಣಲಾರೆವು.

ದ್ರೋಣನ ಸಂಬಂಧವಾಗಿ ಭೀಮ ತೋರಿದ ಪರಾಕ್ರಮ ಇಷ್ಟಕ್ಕೇ ಮುಗಿಯುವದಿಲ್ಲ. ವ್ಯೂಹದೊಳಗೆ ನುಗ್ಗಿದ ಭೀಮ ಕೌರವ ಸೈನ್ಯವನ್ನು ಧೂಳೀಪಟ ಮಾಡಿ ಕಣ್ಣೆದುರಿನಲ್ಲಿ ಸಿಕ್ಕಿದ ಅನೇಕ ಮಂದಿ ಧೃತರಾಷ್ಟ್ರನ ಮಕ್ಕಳನ್ನು ಕೊಲ್ಲುತ್ತಾನೆ. ಕೌರವ ಸೈನ್ಯವು ತಲ್ಲಣಿಸುತ್ತದೆ. ಹಾಗಾಗಿ ಸೇನಾಪತಿಯಾದ ದ್ರೋಣನು ಭೀಮನನ್ನು ಹುಡುಕಿಕೊಂಡು, ಹತವಾದ ತನ್ನ ಸೈನ್ಯದ ಜಾಡನ್ನು ಹಿಡಿದು ಹೋಗಿ ಭೀಮನನ್ನು ಯುದ್ಧಕ್ಕೆ ಕರೆಯುತ್ತಾನೆ. ಭೀಮನ ಉಪಚಾರದ, ಗೌರವಪೂರ್ವಕವಾದ ಮಾತುಗಳನ್ನು ತಪ್ಪಾಗಿ ಕಲ್ಪಿಸಿಕೊಂಡ ದ್ರೋಣನು ಭೀಮನ ಮೇಲೆ ಕ್ರೂರವಾದ ಬಾಣಗಳನ್ನು ಪ್ರಯೋಗಿಸುತ್ತಾನೆ. ದ್ರೋಣನ ಆ ಬಾಣಗಳಿಗೆ ಪ್ರತಿಕ್ರಿಯೆಯಾಗಿ

● ಯುದ್ಧದಲ್ಲಿ ಹೇಗಾದರೂ ಗೆದ್ದರೆ ಸಾಕು ಎನ್ನುವ ಮನೋಭಾವವನ್ನು ಇತರ ಪಾಂಡವ ವೀರರಲ್ಲಿ ಕಾಣಬಹುದು. ಯುದ್ಧವನ್ನು ಪರಾಕ್ರಮದಿಂದಲೇ ಗೆಲ್ಲಬೇಕೆಂದು ಸಂಕಲ್ಪಿಸಿದವನು ಭೀಮ.

---

ಭೀಮನು ಮುಂಗೈಯಿಂದ ಹಣೆಯನ್ನು ಮರೆ ಮಾಡಿಕೊಂಡು ನೇರವಾಗಿ ಮುನ್ನುಗ್ಗಿ ದ್ರೋಣನನ್ನು ಅವನ ರಥದ ಸಹಿತವ[illegible] ಎತ್ತಿ ಅವನನ್ನು ಕೊಲ್ಲುವದು ಸರಿಯಲ್ಲವೆಂದು ಭಾವಿಸಿ ರಥವನ್ನು ತಿರುಗಿಸಿ ಆಕಾಶಕ್ಕೆ ಎಸೆಯುತ್ತಾನೆ. ರಥವು ಎಲ್ಲಿಯೋ ಬಿದ್ದು ಪುಡಿಯಾಗುತ್ತದೆ. ದ್ರೋಣನು ಗರಡಿಯ ಪಟ್ಟು ಹಾಕಿ ಮೊಣಕಾಲೂರಿ ನೆಲದ [illegible]ಮೇಲೆ ಬೀ[illegible]ತ್ತಾನೆ. ಭೀಮನು ವ್ಯೂಹದಿಂದ [illegible] ಹೊರಡುವಾಗ ಅವನನ್ನು ವಿಚಾರಿಸಿಕೊ[illegible]ಳುದು ದ್ರೋಣನು ವ್ಯೂಹದ ಮುಂಭಾ[illegible]ಂದಿರುಗುತ್ತಾನೆ.

ಕುರುಕ್ಷೇತ್ರ ಯುದ್ಧವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಪಾಂಡವರಿಗೆ ಅಭಯವನ್ನು ನೀಡಿದವರು ಇಬ್ಬರೇ ಇಬ್ಬರು. ಶ್ರೀಕೃಷ್ಣ ಮತ್ತು ಭೀಮ ಎನ್ನುವದು ಸ್ಪಷ್ಟವಾಗುತ್ತದೆ. ಭೀಮನು ಏಕಾಂಗಿಯಾಗಿ ಕೌರವ ಸೇನಾಸಾಗರವನ್ನು ಎದುರಿಸಿ ಯುದ್ಧ ಮಾಡಿ ವಿಪರೀತ ಬಳಲಿದ್ದಾಗ ಅವನ ಸ್ಥೈರ್ಯ, ಪರಾಕ್ರಮ, ಸಹಿಷ್ಣುತಾ ಸ್ವಭಾವಗಳನ್ನು ಮೆಚ್ಚಿದ ಅವನ ಹುಟ್ಟು ವೈರಿ ದುರ್ಯೋಧನನೇ ಒಮ್ಮೆ ಆ ದಿನದ ಯುದ್ಧವನ್ನು ಸಾಕು ಮಾಡೋಣ ಎಂದು ಭೀಮನಿಗೆ ಹೇಳಿ ಕಳುಹಿಸುತ್ತಾನೆ. ಭೀಮ ಒಪ್ಪದೆ ಯುದ್ಧ ಮುಂದುವರಿಸುತ್ತಾನೆ.

ತಂದೆಯ ಮರಣದಿಂದ ಕ್ರುದ್ಧನಾದ ಅಶ್ವತ್ಥಾಮನು ನಾರಾಯಣಾಸ್ತ್ರವನ್ನು ಪಾಂಡವ ಸೈನ್ಯದ ಮೇಲೆ ಪ್ರಯೋಗಿಸಿಬಿಡುತ್ತಾನೆ. ಆ ಅಸ್ತ್ರಕ್ಕೆ ಎದುರೇ ಇಲ್ಲ. ಪಾಂಡವರ ಸೈನ್ಯದ ಪ್ರತಿಯೊಬ್ಬನೂ ಶಸ್ತ್ರವನ್ನು ಕೆಳಗೆ ಹಾಕಿ ಅಸ್ತ್ರಕ್ಕೆ ಶರಣಾಗಬೇಕೆಂದು ಕೃಷ್ಣ ಘೋಷಣೆ ಹೊರಡಿಸುತ್ತಾನೆ. ಎಲ್ಲರೂ ಹಾಗೆ ಮಾಡುತ್ತಾರೆ. ಭೀಮ ಒಬ್ಬ ಮಾತ್ರ ಹಾಗೆ ಮಾಡುವದಿಲ್ಲ. "ನೀನೊಬ್ಬನೇ ಗಂಡು" ಎನ್ನುತ್ತಾ ಶಸ್ತ್ರವು ಅವನನ್ನು ಆವರಿಸಿ ದಹಿಸಲು ಉಪಕ್ರಮಿಸುತ್ತದೆ. ಕೃಷ್ಣ ಭೀಮನಿಗೆ ತಾನು ಮರೆಯಾಗಿ ನಿಂತು ಅಸ್ತ್ರದ ದಹನ ಕಾರ್ಯವನ್ನು ವಿಫಲಗೊಳಿಸುತ್ತಾನೆ.

ಭೀಮನ ವ್ಯಕ್ತಿತ್ವ ಅಪೂರ್ವವಾದುದು. ಹಾಸ್ಯ, ಅನುಕಂಪ, ಅನ್ಯಾಯದ ಖಂಡನೆ– ಇವು ಅವನ ಸಹಜ ಸ್ವಭಾವಗಳು. ಹಸಿವಿನಿಂದ ಕಂಗಾಲಾದ ಬಕಾಸುರ ಇವನ ಮೇಲೆ ಎರಗಲು ಬರುತ್ತಿದ್ದಾಗ "ತಾಳು, ಸ್ವಲ್ಪ ಊಟ ಬಾಕಿ ಇದೆ. ಮುಗಿಸಿಕೊಳ್ಳುತ್ತೇನೆ" ಎಂದು ಹೇಳುವ ನಿರ್ಭಯತೆ, ಹೃದಯದ ಸಮೃದ್ಧಿ ಅವನದು. ಕೌರವರ ತಮ್ಮಂದಿರ ಪೈಕಿ ಪಾಂಡವ ಪಕ್ಷಪಾತಿಯಾದ ವಿಕರ್ಣನನ್ನು ಅನಿವಾರ್ಯವಾಗಿ ಕೊಲ್ಲಬೇಕಾಗಿ ಬಂದಾಗ ಭೀಮ, "ಯುದ್ಧ ಎನ್ನುವದೇ ಕ್ರೂರ ಕಾರ್ಯ" ಎಂದು ಅವನಿಗಾಗಿ ಆ ರಣರಂಗದಲ್ಲಿಯೂ ಅನುತಾಪ ವ್ಯಕ್ತಪಡಿಸುತ್ತಾನೆ. ಇಷ್ಟಾಗಿ ಭೀಮನ ವ್ಯಕ್ತಿತ್ವ ಪ್ರದರ್ಶನಕ್ಕೆ ಒದಗುವಂತಹುದಲ್ಲ. ನಾವು ಅದರ ಆಳಕ್ಕೆ ಹೋಗಬೇಕು. ಅಲ್ಲಿ ನಾವು ಸ್ಫಟಿಕದಷ್ಟು ಶುಭ್ರವಾದ, ಕಳಂಕರಹಿತವಾದ, ದಿಗಂತ ವಿಸ್ತಾರವಾದ, ಆದರ್ಶಯುತವಾದ, ಮಹಾಭಾರತದಲ್ಲಿ ಶ್ರೀಕೃಷ್ಣನನ್ನು ಬಿಟ್ಟರೆ ಇತರ ಯಾರಲ್ಲಿಯೂ ಕಾಣಲು ಸಿಕ್ಕಲಾರದಷ್ಟು ಭವ್ಯವಾದ ವ್ಯಕ್ತಿತ್ವವನ್ನು ಕಾಣುತ್ತೇವೆ. ✡

---

Printed & published by M. N. Mahishi on behalf of the Administrator, Loka Shikshana Trust, Samyukta Karnataka Press, Koppikar Road, Hubli-580 020. Editor: B.S.Gopala Krishna. Rept: Bombay: V.Satyamurthy Phone: 522412 Calcutta: H. Majumdar Phone: 46-4233; Madras: K. A. Subramanian Phone: 842201; New Delhi: P. R. Chopra Phone: 714130.

KASTURI PRICE: 2-50 Regd. No. KRNG 4
*Registered with the Registrar of Newspapers for India under No. 3533/5*